# ಅರ್ಪಣ

ಆರೀ ಭಾರತ ದೇಶದೊಳ್ ಪ್ರಥಮದೊಳ್
ಸ್ವಾತಂತ್ರ್ಯಸಂಗ್ರಾಮಮಂ |
ಸಾರುತ್ಸಾಹತ್ಸನದಿಂದೆ ಕಾದಿ, ರಣದೊಳ್
ಹೋರಾಡಿ, ವೈತೆತ್ತಿಯುಂ |
ವೀರಸ್ವರ್ಗವನೇರಿ ನಿಂದು, ಜಸವೈ-
ವೆತ್ತಾ ಸಮಸ್ತರ್ಗೆ ಮೇಣ್ |
ಧೀರರ್ಗೀ ಕೃತಿ-ಮೀಸಲಾದ ಮುಡಿಪಂ
ಸಂಪ್ರೀತಿಯಿಂದರ್ಪಿಪೆಂ ||

'ಕೀರ್ತಿವರ್ಮ'

ಕುರಿತು ಶ್ರೀ ಶಿವಾಜಿ ನಾಡಗೀರ ಇವರು ಅತ್ಯಂತ ಪರಿಶ್ರಮಪೂರ್ವಕವಾಗಿ ಸಂಶೋಧನೆ ನಡೆಸಿ ಅದರ ಫಲವನ್ನು ಈ ಗ್ರಂಥದಲ್ಲಿ ಕೊಟ್ಟಿದ್ದಾರೆ. ಈ ಕೆಲಸ ದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ, ಕರ್ನಾಟಕ ಗ್ರಂಥಾಲಯ, ಮುಂಬಯಿ ವಿಶ್ವವಿದ್ಯಾಲಯ ಗ್ರಂಥಾಲಯ ಇವುಗಳ ವ್ಯವಸ್ಥಾಪಕರು ಶ್ರೀ. ನಾಡಗೀರವರಿಗೆ ಚನ್ನಾಗಿ ಸಹಾಯ ಮಾಡಿದ್ದಾರೆ. ಅಲ್ಲದೆ ಶ್ರೀ. ಬುರ್ಲಿ ಬಿಂದುಮಾಧವರು ಸುರಪುರದ ವೆಂಕಟಪ್ಪನಾಯಕನ ಭಾವಚಿತ್ರವನ್ನು ಒದಗಿಸಿ ಕೊಟ್ಟರು. ಶ್ರೇಷ್ಠ ಸಾಹಿತಿಗಳು ಮತ್ತು ಮೈಸೂರ ರಾಜ್ಯದ ಸ್ವಾತಂತ್ರ್ಯ ಸಂಗ್ರಾಮೇತಿಹಾಸ ಸಂಗ್ರಹ ಸಮಿತಿಯ ಪ್ರಧಾನ ಅಧಿಕಾರಿಗಳೂ ಆದ ಶ್ರೀ. ತಿರುಮಲೆ ತಾತಾಚಾರ್ಯಶರ್ಮರು ಸಾಕಷ್ಟು ಐತಿಹಾಸಿಕ ಸಾಹಿತ್ಯವನ್ನು ಕೊಟ್ಟು ಅಮೌಲ್ಯ ಸೂಚನೆಗಳನ್ನು ಕೊಟ್ಟರು. ಇವರೆಲ್ಲರಿಗೂ ಶ್ರೀ. ನಾಡಗೀ ರರ ಪರವಾಗಿ, ನನ್ನ ಪರವಾಗಿ, ಅತ್ಯಂತ ಕೃತಜ್ಞತೆಯನ್ನರ್ಪಿಸುವೆ.

ಶ್ರೀ ಶಿವಾಜಿ ನಾಡಗೀರರು ಈ ಕೆಲಸವನ್ನು ಮಾಡಲೊಪ್ಪಿ, ಇದೊಂದು ಹೊಸಕ್ಷೇತ್ರವಾದರೂ ಚನ್ನಾಗಿ ಶ್ರಮಬಟ್ಟು, ಈ ಪುಸ್ತಕದ ಕರಡನ್ನು ತಯಾರ ಮಾಡಿದುದು ಬಹಳೇ ಶ್ರೇಯಸ್ಕರವಾದುದು.

ಇದೇ ಸಂದರ್ಭದಲ್ಲಿ, ಅತ್ಯಲ್ಪ ಕಾಲದಲ್ಲಿ ಸಂಯುಕ್ತ ಕರ್ನಾಟಕ ಮುದ್ರಾ ಲಯದವರು ಈ ಪುಸ್ತಕವನ್ನು ಅಂದಚಂದವಾಗಿ ಮುದ್ರಿಸಿ ಕೊಟ್ಟದ್ದಕ್ಕೆ ಅವರ ಆಭಾರಗಳನ್ನು ಮನ್ನಿಸುವದು ಅವಶ್ಯ.

ಇನ್ನು ಈ ವಿಷಯವು ಕೇವಲ ತಾತ್ಕಾಲಿಕ ಮಹತ್ವದ್ದು ಮಾತ್ರವಲ್ಲ. ಭಾರತವು ಇಂದು ಒಂದು ಮಹಾನ್ ಸ್ವತಂತ್ರರಾಷ್ಟ್ರವು. ಅದು ಸ್ವಾತಂತ್ರ್ಯದ ಪಶ್ಚಾತ್ ಪ್ರಗತಿ ಪಥದಲ್ಲಿ ತೀವ್ರಗತಿಯಿಂದ ಹೆಜ್ಜೆಗಳನ್ನಿಡುತ್ತ ಸಾಗಿರುವದು. ಹೀಗಿರುವಾಗ ತನ್ನ ಪೂರ್ವೇತಿಹಾಸದತ್ತ ಚನ್ನಾಗಿ ಲಕ್ಷಗೊಟ್ಟು, ತಾನು ಮಾಡಿದ ತಪ್ಪುಗಳನ್ನೆಲ್ಲ ಸುಧಾರಿಸುತ್ತ ಮುಂದೆ ಸಾಗುವದು ಅವಶ್ಯ. ೧೮೫೭ರ ಸ್ವಾತಂತ್ರ್ಯಯುದ್ಧವು, ನಮ್ಮ ರಾಷ್ಟ್ರದವರು ಮಾಡಿದ ಒಂದು ಶ್ರೇಷ್ಠ ಹಾಗೂ ಸಾಹಸದ ಪ್ರಯತ್ನ, ಎಂಬ ಮಾತು ನಿಜ. ಆದರೆ ಆಗ ನಮಗೆ ಬಂದ ಸೋಲಿನ ಕಾರಣಗಳನ್ನು ಚನ್ನಾಗಿ ಪರಿಶೀಲಿಸಿ ಆ ದುರ್ಗುಣಗಳು ನಮ್ಮಲ್ಲಿ ಎಂದೂ ಸೇರ ದಂತೆ ಮಾಡುವದು ನಮ್ಮ ಪ್ರಥಮ ಕರ್ತವ್ಯವಿರುವದು. ಆಗಿನ ಸಾಹಸದ ಅಭಿ ಮಾನ ನಮಗೆಷ್ಟಿರಬೇಕೋ ಅಷ್ಟೇ ಆಗ ನಾವು ಸೋತ ಕಾರಣಗಳ ಬಗ್ಗೆ ನಾಚಿಕೆ ಇರಬೇಕು. ದುರ್ಗುಣಗಳನ್ನು ಬಿಟ್ಟು ಸದ್ಗುಣಗಳನ್ನು ಬೆಳೆಸುವದ- ರಲ್ಲಿಯೆ ಇತಿಹಾಸದ ಸಾರ್ಥಕ್ಯವಿದೆ.

ಹುಬ್ಬಳ್ಳಿ )

**ರಂಗನಾಥ ದಿವಾಕರ**

# ವಿಷಯಾನುಕ್ರಮಣಿಕೆ

## ನಕ್ಷೆ ಮತ್ತು ಚಿತ್ರಗಳು

೧ ಬಂಡುಗಾರರ ಅಶ್ವದಳವು ಕಾನಪೂರ ಕಾಳಗದಲ್ಲಿ ಆಂಗ್ಲ ಕಾಲ್ದಳ ವೊಂದನ್ನು ಎದುರಿಸುತ್ತದೆ.

೨ ಬಂಡುಗಾರರ ಸಿಪಾಯರನ್ನು ತೋಫಿನ ಬಾಯಿಗೆ ಕೊಡುವ ದೃಶ್ಯ.

೩ ಸುರಪುರ ವೆಂಕಟಪ್ಪನಾಯಕ.

೪ ನರಗುಂದ ಬಾಬಾಸಾಹೇಬ ಮತ್ತು ಸುರೇಬಾನದಲ್ಲಿಯ ಮ್ಯಾನ್ಸನ್ನನ ಗೋರಿ.

೫ ಕರ್ನಾಟಕ : ೧೮೦೦-೧೮೫೮. ( ನಕ್ಷೆ )



ಬಂಡುಗಾರರ ಅಶ್ವದಳವು ಕಾನಪುರ ಕಾಳಗದಲ್ಲಿ ಆಂಗ್ಲ ಕಾಲ್ದಳವನ್ನು ಎದುರಿಸುತ್ತದೆ.

# ಮೊದಲನೆಯ ಅಧ್ಯಾಯ

## ಪ್ರಾಸ್ತಾವಿಕ

**೧೮೫೭**ನೆಯ ಇಸ್ವಿಯ ಪ್ರಾರಂಭದಿಂದ ಒಂದೆರಡು ವರುಷಗಳ ವರೆಗೆ ಹಿಂದುಸ್ತಾನದಲ್ಲಿಯ ಬ್ರಿಟಿಶ್ ಆಳಿಕೆಗೆ ಒಂದು ಅದ್ಭುತ ಸ್ವರೂಪದ ಗ್ರಹಣವು ಹಿಡಿಯಿತು. ನಮ್ಮ ದೇಶದ ಇತಿಹಾಸದಲ್ಲಿ ೧೮೫೭ರ ಸಿಪಾಯಿ ಬಂಡಾಯವು ಒಂದು ಭಯಾನಕವಾದರೂ ಅತಿ ಮಹತ್ವದ ಘಟನೆಯಾಗಿದೆ. ಬ್ರಿಟಿಶ್ ಸೈನ್ಯಶಿಕ್ಷಣವನ್ನು ೧೭೫೭ರಿಂದ ಪಡೆಯುತ್ತ ಬಂದ ಸುಮಾರು ಒಂದೂವರೆ ಲಕ್ಷ ಹಿಂದೀ ಸೈನಿಕರು ಈ ಬ್ರಿಟಿಶ್ ವಿರೋಧಿ ಕ್ರಾಂತಿಯಲ್ಲಿ ಸೇರಿಕೊಂಡು ತಮ್ಮ ಮತ್ತು ಬ್ರಿಟಿಶರ ರಕ್ತದ ಕಾವಲಿಯನ್ನೆ ಹರಿಸಿಬಿಟ್ಟರು. ಈ ಮಹಾನ್ ವಿಪ್ಲವಕ್ಕೆ ಸಿಪಾಯಿಬಂಡಾಯವೆಂದು ಆಂಗ್ಲರೇ ನಾಮಕರಣ ಮಾಡಿದರು. ಸೇತು ಹಿಮಾಚಲ ಪ್ರತಿಯೊಂದು ಸೈನ್ಯಠಾಣ್ಯದಲ್ಲಿಯೂ ಹಿಂದೀ ಸಿಪಾಯರು ಶಸ್ತ್ರ ಹಿಡಿದು ಬ್ರಿಟಿಶರ ಮೇಲೆ ಬಿದ್ದರು; ಇಲ್ಲವೆ ಒಳಸಂಚು ಮಾಡಿದರು; ಇಲ್ಲವೆ ಕ್ರಾಂತಿಯು ಹಬ್ಬುವಂಥ ಉದ್ರೇಕದ ಪತ್ರವ್ಯವಹಾರವನ್ನು ನಡೆಯಿಸಿದರು. ಈ ಕಾರ್ಯದಲ್ಲಿ ಅವರು ತೋರಿಸಿದ ಅಪ್ರತಿಮ ಶೌರ್‍ಯ ಮತ್ತು ಸಾಹಸ ನಮ್ಮ ರಾಷ್ಟ್ರೀಯ ಇತಿಹಾಸದಲ್ಲಿ ಒಂದು ಚಿರಸ್ಮರಣೀಯ ಪವಾಡವಾಗಿದೆ.

ಈ ಮುಗರಲ್ಲಿ ಬಹುಜನರು ಬ್ರಿಟಿಶ್ ಆಳಿಕೆಯ ಕೊನೆಯ ಪತ್ತಿಪ್ಪತ್ತು ವರ್ಷಗಳನ್ನು ಕಣ್ಣಾರೆ ಕಂಡು ಅದರ ಕಹಿಯನ್ನುಂಡವರೆ ಇರುವರು. ಯಾವ ಭಯ, ಅವಮಾನ, ಅವಹೇಳನಗಳ ಪರಿಸ್ಥಿತಿಯಲ್ಲಿ ಬ್ರಿಟಿಶರು ಹಿಂದೀಯರನ್ನು ಇಟ್ಟಿದ್ದರೆಂಬುದರ ಪರಿಚಯವನ್ನು ಮತ್ತೆ ಹೊಸತಾಗಿ ಮಾಡಿಕೊಡುವ ಅಗತ್ಯವಿಲ್ಲ. ಹೀಗಿದ್ದರೂ ನಮ್ಮಲ್ಲಿ ಅದೆಷ್ಟು ಜನ ಮನೆಹಿಡಿದು ಕೂಡಲಿಲ್ಲ? ಎಷ್ಟು ಜನರು ಬ್ರಿಟಿಶರ ಪ್ರಶಂಸೆಯನ್ನೆ ನಡೆಯಿಸಲಿಲ್ಲ? ಮಹಾತ್ಮಾ ಗಾಂಧಿಯವರು ರಾಷ್ಟ್ರದ ವೈರಿಯಲ್ಲಿ ಎಂಥ ಅದ್ಭುತ ಸ್ಫೂರ್ತಿಯನ್ನು ತುಂಬಿದರೂ ಬ್ರಿಟಿಶರು

ಎಂದಾದರೂ ಹೋಗುವದುಂಟೆ ಎಂದು ಹಾಸ್ಯಮಾಡಿದ ಜನ ಇನ್ನೂ ಇದ್ದಾರೆ. ಆದರೆ ನೂರು ವರ್ಷಗಳ ಹಿಂದೆ ಮೂರು ದಿನಗಳಲ್ಲಿ ಬ್ರಿಟಿಶರನ್ನು ನಿರ್ನಾಮ ಮಾಡಿ ಬಿಡುವ ಒಂದು ಪ್ರಚಂಡವಾದ ಒಳಸಂಚನ್ನು ನಮ್ಮ ಹಿರಿಯರು ಮಾಡಿ ಮುಡಿದರು ; ಈ ಕಥೆಯು ಅತ್ಯಂತ ರೋಮಾಂಚಕವಾದಷ್ಟೂ ನಂಬಲು ಕಷ್ಟ ಸಾಧ್ಯವಾದದ್ದೂ ಆಗಿದೆ. ಆದರ ಸಂಘಟನೆ, ಶೌರ್ಯ ಮತ್ತು ರುದ್ರಸ್ವರೂಪ ಗಳಿಗೆ ಹೆದರಿದ ಬ್ರಿಟಿಶರಿಗೆ ಅಂದೇ ಮನವರಿಕೆಯಾಯಿತು—ಹಿಂದುಸ್ತಾನವನ್ನು ಇನ್ನು ಬಹಳ ದಿನ ನಾವು ಆಳಲಾರೆವು ಎಂದು.

೧೭೫೭ರ ಪ್ಲಾಸಿ ಕಾಳಗದಲ್ಲಿ ಕ್ಲೈವನು ಬಂಗಾಲದ ನವಾಬಶಾಹಿಯನ್ನು ನಿರ್ಮೂಲನಮಾಡಿ ಬ್ರಿಟಿಶ್ ಸಾಮ್ರಾಜ್ಯದ ಶಂಕುಸ್ಥಾಪನೆಯನ್ನು ಮಾಡಿದ ನಂತರ, ಬ್ರಿಟಿಶರಿಗೆ ಇಂಥ ಗಂಡಾಂತರವು ಒದಗಿರಲಿಲ್ಲ. ಈ ಭಯಂಕರ ಕ್ರಾಂತಿಯಲ್ಲಿ ಜನರು, ಜಮೀನದಾರರು, ರಾಜರು ಹಾಗು ಸೈನಿಕರು ಒಂದಾಗಿ ಬ್ರಿಟಿಶರ ವಿರುದ್ಧ ಖಡ್ಗ ಹಿರಿದು ನಿಂತರು. ಆ ಜ್ವಾಲಾಮುಖಿಯಿಂದ ಓರ್ವ ಬಿಳಿಯನಾದರೂ ಪಾರಾಗಬಹುದೆ ಎಂಬ ಸಂಶಯ ಉಂಟಾಯಿತು. ಈ ಕ್ರಾಂತಿಯು ಉಗ್ರವಾಗಿತ್ತು. ರಾಜ್ಯಾಡಳಿತಗಳ ವಿರುದ್ಧ ನಡೆದ ಕ್ರಾಂತಿಗಳಲ್ಲಿ ಫ್ರಾನ್ಸ ಮತ್ತು ಅಮೇರಿಕೆಯ ಕ್ರಾಂತಿಗಳಿಗೆ ನಾವು ಇದನ್ನು ತುಲನೆ ಮಾಡಬಹುದು. ಭಯಾನಕತೆ ರಕ್ತಪಾತಗಳಲ್ಲಿ ಸಿಪಾಯಿ ಬಂಡಾಯವು ಅವುಗಳಿಗೆ ಎಷ್ಟೂ ಕಡಿಮೆಯಾಗಿರಲಿಲ್ಲ. ತಮ್ಮ ಶೋಷಕ ಮತ್ತು ಕೃತಘ್ನ ಧೋರಣೆಯಿಂದ ಬ್ರಿಟಿಶರು ಈ ಘೋರ ವಿಪತ್ತನ್ನು ತಮ್ಮ ಮೈಮೇಲೆ ತಂದು ಕೊಂಡರು. ಆದರ ಹೊಣೆಗಾರಿಕೆಯನ್ನು ಅವರು ಬೇರೆ ಯಾರ ಮೇಲೆಯೂ ಹೊರಿಸಲಾರರು. ಇದರಲ್ಲಿ ಇನ್ನೂ ಒಂದು ವೈಶಿಷ್ಟ್ಯವಿತ್ತು ; ಹೆಚ್ಚಿನವರೆಂದು ಹೇಳಿಕೊಳ್ಳುವ ಬಿಳಿಯರ ಮೇಲೆ ಏಶಿಯದ ಒಂದು ಜನಾಂಗ ಬಿದ್ದು ಅವರನ್ನು ಒದ್ದಾಡಿಸಿತು.

೧೮೫೭ರ ಮೇ ತಿಂಗಳ ೧೦ನೆಯ ದಿನಾಂಕ ಉತ್ತರಪ್ರದೇಶದಲ್ಲಿರುವ ಮೀರತದಲ್ಲಿ ಸಿಪಾಯಿ ಬಂಡಾಯದ ಮೊದಲನೆಯ ದೊಡ್ಡ ಘಟನೆ ಸಂಭವಿಸಿತು. ಹಿಂದೀ ದಳಗಳು ಬಂತು ಸಾರಿ ಬ್ರಿಟಿಶ್ ಸೈನ್ಯಾಧಿಕಾರಿಗಳ ಮನೆಗಳನ್ನು ಸುಟ್ಟರು ; ಎಷ್ಟೋ ನಾಗರಿಕರ, ಮಿಶನರಿಗಳ ಹಾಗೂ ಬಿಳಿಯ ಸೇನಾನಿಗಳ ಭೀಕರ ಕೊಲೆಯು ಅಂದು ನಡೆಯಿತು ; ಶಿಸ್ತುಭಂಗಕ್ಕಾಗಿ ಸೆರೆಮನೆಯಲ್ಲಿಡಲಾದ ಸಿಪಾಯರನ್ನು ಸೆರೆಮನೆ ಮುರಿದು ಬಿಡುಗಡೆ ಮಾಡಲಾಯಿತು ; ರಾತ್ರಿ

ಯೆಲ್ಲ ಊರಲ್ಲಿ ಭಯಂಕರ ಲೂಟಿ ಸುಲಿಗೆಗಳು ನಡೆದವು; ತಂತಿಕಂಬಗಳನ್ನು ಮುರಿದುಹಾಕಿ ಇತರ ನಗರಗಳೊಡನೆ ಸಂಪರ್ಕವನ್ನು ತಪ್ಪಿಸಲಾಯಿತು; ಹಾಗೂ ಬಂಡು ಸಾರಿದ ಸೈನ್ಯಪಡೆಗಳು ಶಸ್ತ್ರಸನ್ನದ್ಧರಾಗಿ ಅಂದೇ ರಾತ್ರಿ ದಿಲ್ಲಿಯ ದಾರಿಯನ್ನು ಹಿಡಿದವು. ಮುಂದೆ ಎರಡೇ ದಿನಗಳಲ್ಲಿ ದಿಲ್ಲಿಯಲ್ಲಿಯ ಸೈನ್ಯಪಡೆಗಳು ಬಂಡಾಯ ಹೂಡಿ ಬಿಳಿಯರನ್ನು ಹಾಗೂ ಅವರ ಆಸ್ತಿಪಾಸ್ತಿಗಳನ್ನು ಬೆಂಕಿಗೀಡುಮಾಡಿದರು; ದಿಲ್ಲಿಯನ್ನು ಬ್ರಿಟಿಶರ ಕೈತಪ್ಪಿಸಿ ಮೊಗಲ ಬಾದಶಾಹಿಯನ್ನು ಸಾರಿದರು.

ಅಧಿಕಾರವು ಬ್ರಿಟಿಶರದು ನಡೆಯುತಿದ್ದರೂ ಮೊಗಲ ಬಾದಶಹನು ಆಗ ಕೆಂಪುಕೋಟೆಯಲ್ಲಿಯೆ ಇನ್ನೂ ಇರುತ್ತಿದ್ದನು. ಅಂಥ ಐತಿಹಾಸಿಕ ಸ್ಥಳವನ್ನು ನಾಲ್ಕು ತಿಂಗಳು ಬ್ರಿಟಿಶರಿಂದ ಕಸಿದುಕೊಳ್ಳಲಾಯಿತು. ಮೀರತದಿಂದ ಡಮ್‌ಡಮ್‌ದ ವರೆಗೆ, ಎಂದರೆ ಉತ್ತರ ಹಿಂದುಸ್ತಾನದ ಸುಮಾರು ಒಂದು ಸಾವಿರ ಮೈಲು ಪ್ರದೇಶದಲ್ಲಿ ಇಂಗ್ಲೀಷರು ಅಂಗರಕ್ಷಕರಿಲ್ಲದೆ ಹೊರಗೆ ಸುಳಿಯುವಂತಿರಲಿಲ್ಲ. ದಂಗೆಗಳಾದಲ್ಲೆಲ್ಲ ಉಚ್ಚ ಅಧಿಕಾರಿಗಳು ತಮ್ಮ ಹಿಂದೀ ಮಿತ್ರರ ಮನೆಯಲ್ಲಿ ಅಡಗಿ ಕುಳಿತು ಆಗ ಪಾರಾಗಿದ್ದಾರೆ; ಹಿಂದೀಯರಂತೆ ವೇಷ ಹಾಕಿಕೊಂಡು ನುಸುಳಿ ಹೋಗಿದ್ದಾರೆ; ಸ್ತ್ರೀಯರ ವೇಷದಲ್ಲಿ ಓಡಿಹೋಗಿದ್ದಾರೆ. ಎಷ್ಟೋ ಸಲ ತಮ್ಮ ಹೆಂಡಿರುಮಕ್ಕಳೊಡನೆ ಅಪಮೀಪಾಲಾಗಿದ್ದಾರೆ. ಆ ಸಮಯದಲ್ಲಿ ಕೈಗೆ ಸಿಕ್ಕವರನ್ನು ನಿರ್ದಯತೆಯಿಂದ ಕೊಲ್ಲಲಾಗಿದೆ. ಕಾನಪೂರ ಹತ್ಯಾಕಾಂಡದಲ್ಲಿ ಯುರೋಪಿಯನ್ನರ ರಕ್ತದಿಂದ ಗಂಗೆಯು ಕೆಂಪಾದಳು. ಇಂಥ ಅಸಂಖ್ಯ ದುರ್ಘಟನೆಗಳು ಆಗ ಉತ್ತರಹಿಂದುಸ್ತಾನದಲ್ಲಿ ನಡೆದವು. ಕೆಲಕಾಲ ಕೆಲಪ್ರದೇಶಗಳಲ್ಲಿ ಬ್ರಿಟಿಶ್ ಸರಕಾರ ನಿರ್ನಾಮವಾಗಿತ್ತಲ್ಲದೆ ಎಷ್ಟೋ ಕಾಲ ಬ್ರಿಟಿಶರಿಗೆ ಮೊದಲಿನ ವರ್ಚಸ್ಸು ಪ್ರಾಪ್ತವಾದೀತೆಂದು ಸಹ ಯಾರೂ ನಂಬಲಿಲ್ಲ.

೧೮೫೭ರ ಘಟನೆಗಳಿಗೆ ಇತಿಹಾಸಕಾರರು ಹೆಚ್ಚಾಗಿ ಸಿಪಾಯಿ ಬಂಡಾಯವೆಂದೇ ಕರೆದಿದ್ದಾರೆ. ೧೯೦೦ರ ವರೆಗೆ ಬಂಡಾಯದ ಕಥೆಯನ್ನು ಹೆಚ್ಚಾಗಿ ಇಂಗ್ಲೀಷರೆ ಬರೆದಿರುವರು. ೧೯೦೦ರ ಈಚೆಗೆ ಬಂಡಾಯದ ವ್ಯಾಪಕ ಇತಿಹಾಸವನ್ನು ಬರೆದ ಭಾರತೀಯರಲ್ಲಿ ವೀರ ಸಾವರಕರರೇ ಮೊದಲನೆಯವರೆನ್ನಬಹುದು. ಇವರು ತಮ್ಮ ಪುಸ್ತಕಕ್ಕೆ "ಭಾರತದ ಸ್ವಾತಂತ್ರ್ಯ ಸಮರ" ಎಂಬ ಹೆಸರನ್ನಿತ್ತರು. ೧೮೫೭ರ ಘಟನೆಗಳಿಗೆ ನಿಜವಾಗಿ ಯಾವ ನಾವು

ಕರಣವನ್ನು ಮಾಡಬೇಕೆಂಬ ವಾದವಿವಾದವು ಮೊದಲು ಇವರ ಪುಸ್ತಕದಿಂದಲೆ ಪ್ರಾರಂಭವಾಯಿತು. ವೀರ ಸಾವರಕರರು ಈ ಪುಸ್ತಕವನ್ನು ಮೊದಲು ಇಂಗ್ಲಂಡದಲ್ಲಿ ಬರೆದು, ನಂತರ ಯುರೋಪದಲ್ಲಿ ಪ್ರಸಿದ್ಧಿಸಿ ಗುಪ್ತವಾಗಿ ಹಿಂದುಸ್ತಾನಕ್ಕೆ ಕಳಿಸಿಕೊಟ್ಟ ಕಥೆಯು . ಅತ್ಯಂತ ಮನೋಹರವಾಗಿದೆ. ( ಅವರ ಗ್ರಂಥದ ಮುನ್ನುಡಿ ನೋಡಿರಿ. ) ಸಾವರಕರರಿಗೆ ಸರಕಾರೇತರ ಆಧಾರಗಳು, ಆಗಿನ ರಾಜಮನೆತನಗಳ ಕಾಗದಪತ್ರಗಳು ಅಥವಾ ಸಿಪಾಯಿ ಪಡೆಗಳ ಪತ್ರವ್ಯವಹಾರಗಳು ನೇರವಾಗಿ ಹೆಚ್ಚಿನ ಪ್ರಮಾಣದಲ್ಲಿ ಏನೂ ಲಭಿಸಿರಲಿಲ್ಲ.[1] ಆದರೆ ಸಾವರಕರರು ಒಂದು ಅಪೂರ್ವ ಕಾರ್ಯವನ್ನು ಮಾಡಿದರು; ಆಂಗ್ಲ ಸಾಹಿತ್ಯದಲ್ಲಿಯೇ ಲಭ್ಯವಿರುವ ಆಂಗ್ಲರ ವಿರೋಧಿ ಸತ್ಯಸಂಗತಿಗಳನ್ನು ಬಹು ಪರಿಶ್ರಮದಿಂದ ಒತ್ತಟ್ಟಿಗೆ ಕೂಡಿಸಿ ಪ್ರಕಟಮಾಡಿದರು.

ಇತರ ಕೆಲವು ಹಿಂದೀ ಇತಿಹಾಸಕಾರರೂ ೧೮೫೭ರ ಘಟನೆಗಳಿಗೆ ನಾವು ಏನೆಂದು ಕರೆಯಬೇಕು ಎಂಬ ಪ್ರಶ್ನೆಯನ್ನು ಆಸ್ಥೆಯಿಂದ ಚರ್ಚೆಮಾಡಿದ್ದಾರೆ. ೧೮೫೭ರ ಘಟನೆಗಳಲ್ಲಿ ಮಹಾರಾಷ್ಟ್ರವು ಪ್ರಮುಖ ಪಾತ್ರವನ್ನು ವಹಿಸಿದ್ದರಿಂದ ಮರಾಠಿಯಲ್ಲಿ ಕನ್ನಡದಕಿಂತಲೂ ಹೆಚ್ಚಿನ ಸಾಹಿತ್ಯವು ನಮಗೆ ಲಭ್ಯವಿದೆ. ಈ ಲೇಖಕರೆಲ್ಲರೂ ಸಿಪಾಯಿ ಬಂಡಾಯದ ಸ್ವಭಾವಸ್ವರೂಪಗಳ ಬಗ್ಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿರುವರು. ಆದರೆ ಮೇಲೆ ಹೇಳಿದಂತೆ ಈ ಘಟನೆಗಳ ಬಗ್ಗೆ ಆಂಗ್ಲರ ಮುಖಾಂತರವೆ ಎಲ್ಲ ಸಾಹಿತ್ಯವನ್ನು ನಾವು ದೊರಕಿಸಬೇಕಾದಂಥ ಒಂದು ದುರ್ದೈವದ ಪ್ರಸಂಗವಿದೆ. ಆಂಗ್ಲರು ಈ ಘಟನೆಗಳಿಗೆ " ಸಿಪಾಯಿ ಬಂಡಾಯ ", " ಸಿಪಾಯಿ ಯುದ್ಧ " ಮುಂತಾಗಿ ಹೆಸರುಗಳನ್ನಿಟ್ಟಿರುವರು.

ರಣರಂಗದಲ್ಲಿ ಬ್ರಿಟಿಶರನ್ನು ಸೋಲಿಸಿ ಹಿಂದುಸ್ತಾನದಿಂದ ಅವರನ್ನು ಓಡಿಸಿ, ಅವರ ಇಲ್ಲಿಯ ಆಳಿಕೆಯನ್ನು ಮುಕ್ತಾಯಗೊಳಿಸುವದು ಈ ಭಯಂಕರ ವಿಪ್ಲವದ ಮುಖ್ಯ ಧ್ಯೇಯವಾಗಿತ್ತು. ಆದ್ದರಿಂದ ಇದೊಂದು ಸ್ವಾತಂತ್ರ್ಯ ಸಮರವೆಂದಲ್ಲಿ ವಿಶೇಷ ತಪ್ಪಿಲ್ಲ. ಬ್ರಿಟಿಶರ ಅಧೀನದಲ್ಲಿದ್ದ ಶಕ್ತಿಗಳೇ ಅವರ ಮೇಲೆ ತಿರುಗಿಬಿದ್ದು ಅವರನ್ನು ಓಡಿಸಲು ಯತ್ನಿಸಿದ್ದರಿಂದ ಅಧಿಕಾರದ ವಿರುದ್ಧ ಇದೊಂದು ಬಂಡಾಯವೂ ಆಗಿತ್ತು. ಈ ಬಂಡಾಯದಲ್ಲಿ ಸಿಪಾಯಿ ದಳಗಳು ದೊಡ್ಡ ಪ್ರಮಾಣದಿಂದ ಕೂಡಿದ ಮೂಲಕ ಇದು ಸಿಪಾಯಿ

---

1. ಇಂಥ ಸಾಹಿತ್ಯವನ್ನು ಬ್ರಿಟಿಶರು ಕಾಲಕಾಲಕ್ಕೆ ನಾಶಪಡಿಸಿದ್ದರು. ಇದ್ದಷ್ಟನ್ನು ಸಂಕಲಿಸಿ ಪ್ರಸಿದ್ಧಿಸುವದು ಅತ್ಯಗತ್ಯ.

ಬಂಡಾಯವೂ ಆಗಿದ್ದಿತು. ಸಿಪಾಯಿ ದಳಗಳು ಆಗ ಸ್ವತಂತ್ರವಾಗಿಯೂ ಹೋರಾಡಿದವು; ಝಾಂಸಿ ರಾಣಿ, ಕುಂವರಸಿಂಗ, ನಾನಾಸಾಹೇಬ ಪೇಶ್ವೆ, ಮೊಗಲ ಬಾದಶಹಾ ಮೊದಲಾದವರ ನೇತೃತ್ವದಲ್ಲಿಯೂ ಹೋರಾಡಿದವು. ಒಟ್ಟಿಗೆ ನಾವು ಈ ಘಟನೆಗಳನ್ನು "ಸ್ವಾತಂತ್ರ್ಯಸಮರ"ವೆಂದು ಕರೆಯಲು ಯಾವ ಅಭ್ಯಂತರವೂ ಇಲ್ಲ.

ಒಟ್ಟಾರೆ ಹೇಳುವದಾದರೆ,ಉದ್ದೇಶವು ಒಂದೇ ಇದ್ದರೂ ೧೮೫೭ರ ಘಟನೆಗಳಿಗೆ ಒಂದೇ ಸ್ವರೂಪವಿರಲಿಲ್ಲ, ಒಂದೇ ನೇತೃತ್ವವಿರಲಿಲ್ಲ. ಆದ್ದರಿಂದ ಆ ಕಾಲಕ್ಕೆ ಹೆಸರನ್ನು ಕೊಡುವದು ಸಾಧ್ಯವಿರಲಿಲ್ಲ. ( ಈ ಪುಸ್ತಕದಲ್ಲಿ ೧೮೫೭ರ ಘಟನೆಗಳಿಗೆ ಸಾಮಾನ್ಯವಾಗಿ ಪರಿಚಿತವಿದ್ದ ''ಸಿಪಾಯಿ ಬಂಡಾಯ'' ಎಂದೇ ನಾಮಕರಣ ಮಾಡಲಾಗಿದೆ.) ಆದರೆ ಬ್ರಿಟಿಶರ ದಬ್ಬಾಳಿಕೆ, ಅನ್ಯಾಯ ಅನಾಚಾರಗಳಿಂದ ಬೇಸತ್ತ ಹಿಂದೀಯರು ತಮಗೆ ತಿಳಿದಂತೆ, ಆಗಿನ ಕಾಲಕ್ಕೆ ಅನುಸರಿಸಿ, ಆಗಿನ ನಂಬಿಗೆಗಳ ಪ್ರಕಾರ ಅವರನ್ನು ನಿರ್ನಾಮಗೊಳಿಸಲು ಒಂದು ಅತ್ಯಂತ ಶೂರ, ಧೀರ ಮತ್ತು ಅಭೂತಪೂರ್ವವಾದ ಪ್ರಯತ್ನವನ್ನು ಕೈಕೊಂಡರೆಂಬುದು ಮಾತ್ರ ನಿಜ. ಬ್ರಿಟಿಶ ಆಳಿಕೆಯು ಜನಪ್ರಿಯವಾಗಿತ್ತು, ಆದರೆ ಕೆಲವು ದುಷ್ಟ ಶಕ್ತಿಗಳು ಮಾತ್ರ ಬಂಡು ಹೂಡಿದವು, ಎಂದು ಹೇಳುವವರ ಮಾತು ಶುದ್ಧ ಸುಳ್ಳು. ಹಿಂದುಸ್ತಾನಕ್ಕೆ ಬ್ರಿಟಿಶರು ಮಾಡಿದ ಅನ್ಯಾಯವು, ಅವರು ತೋರಿಸಿದ ಕೃತಘ್ನತೆಯು, ಅವರು ನಡೆಸಿದ ಸುಲಿಗೆಗಳು ವರ್ಣನಾತೀತವಾಗಿದ್ದು ಅವುಗಳ ವಿರುದ್ಧ ಸಿಪಾಯಿ ಬಂಡಾಯದಂಥ ಒಂದು ಪ್ರತಿಕ್ರಿಯೆಯುಂಟಾದದ್ದು ಏನೂ ಆಶ್ಚರ್ಯವಲ್ಲ. ಮುಂದಾದರೂ ನಮಗೆ ಇದೇ ಅನುಭವವು ಬರಲಿಲ್ಲವೆ? ಹಿಂದೀಯರ ಪ್ರತಿಯೊಂದು ನಂಬಿಗೆ ಮತ್ತು ಸಹಾಯಕ ಕೃತಿ ಇವುಗಳಿಗೆ ಪ್ರತಿಯಾಗಿ ಬ್ರಿಟಿಶರು ಕೃತಘ್ನತೆ, ವಿಶ್ವಾಸಘಾತ, ಅವಹೇಳನೆ ಇವುಗಳನ್ನೇ ಮುಂದರಿಸಿದರು. ಬ್ರಿಟಿಶ ಸಾಮ್ರಾಜ್ಯದ ರಾಜನಿಷ್ಠ ಪ್ರಜೆ ಎಂದು ಹೆಮ್ಮೆಯಿಂದ ಸಾರುತ್ತಿದ್ದ ಗಾಂಧೀಜಿಯಂಥವರು ಸಹ ಭಾರತಕ್ಕೆ ಬಂದೊಡನೆ 'ನಾನೊಬ್ಬ ಬಂಡುಗಾರ' ಎಂದು ಅಷ್ಟೇ ನಿಷ್ಠುರತೆಯಿಂದ ಸಾರಲಿಲ್ಲವೆ?

ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಬ್ರಿಟಿಶ್ ಸಾಮ್ರಾಜ್ಯಶಾಹಿಯು ಭಾರತದಲ್ಲಿ ದೃಢವಾಗಿತ್ತು. ರಾಜಕೀಯ ಸ್ವಾತಂತ್ರ್ಯದ ಬಗ್ಗೆ ಯುರೋಪದಿಂದ ಹೊಸ ಹೊಸ ವಿಚಾರಗಳೂ ಬಂದುಬಿಟ್ಟಿದ್ದವು. ಹಿಂಸೆಯಲ್ಲಿ ಬ್ರಿಟಿಶರಿಗೆ ನಾವು ಈಡಾಗುವ ಪರಿಸ್ಥಿತಿಯೇ ಇರಲಿಲ್ಲ. ಆದುದರಿಂದ ಘಟನಾತ್ಮಕ

ಹಾಗೂ ಅಹಿಂಸಾತ್ಮಕ ಹೋರಾಟದ ನಾಯಕರು, ಅದೊಂದೇ ದಾರಿಯು ಈಗ ನಮಗೆ ಸಾಧ್ಯ ಎಂದು ಸಾರಬೇಕಾಯಿತು. ಆದರೆ ೧೮೫೭ರ ಪರಿಸ್ಥಿತಿಯೇ ಬೇರೆಯಾಗಿದ್ದಿತು. ನಮಗೆ ಈಗ ಪರಿಚಿತವಿರುವ ಹಿಂದುಸ್ತಾನದಕಿಂತಲೂ ಅಂದಿನ ನಮ್ಮ ಹಿರಿಯರ ನಾಡು ಬಹಳ ಬೇರೆಯಾಗಿದ್ದಿತು. ಅಂದಿನ ಬ್ರಿಟಿಶ ಆಳಿಕೆಯ ರೂಪವೂ ಬೇರೆಯಾಗಿತ್ತು. ಆ ಪರಿಸ್ಥಿತಿಯ ಪಕ್ವಫಲ ೧೮೫೭. ಇದಕ್ಕೆ ಬ್ರಿಟಿಶರೆ ಕಾರಣ. ನೂರು ವರ್ಷಗಳ ಹಾಗು ಎರಡು ವರ್ಷಗಳ ರಕ್ತದ ಮಡುವಿನಲ್ಲಿ ತೊಳೆಯಲ್ಪಟ್ಟಿತು !

ಸಿಪಾಯಿ ಬಂಡಾಯದ ಕಥೆಯು ರೋಮಾಂಚಕಾರಿಯಾದಷ್ಟು ಬಹು-ರೂಪಿಯೂ ಆಗಿದೆ; ಬಹುಮುಖಿಯಾಗಿದೆ; ಸಹಸ್ರ ಹೆಡೆಯನ್ನೆತ್ತಿದ ಸರ್ಪಕ್ಕೆ ಇದನ್ನು ನಾವು ಹೋಲಿಸಬಹುದು. ಕಾಲಪುರುಷನ ಈ ವಿಶ್ವರೂಪ ದರ್ಶನಕ್ಕೆ ಅರ್ಥಮಾಡಲು ಅನೇಕರು ತಮ್ಮ ತಮ್ಮ ಭಾಷ್ಯವನ್ನು ಬರೆದಿದ್ದಾರೆ. ೧೮೫೭ರಿಂದ ೧೯೫೭ರಲ್ಲಿ ಅತ್ಯಂತ ಮಹತ್ವದ ಘಟನೆಯಾವುದು ಎಂದರೆ ಸಿಪಾಯಿ ಬಂಡಾಯವೆಂದೇ ಬಲ್ಲವರು ಸಹಜ ಉತ್ತರ ಹೇಳುವರು.

ಸಿಪಾಯಿ ಬಂಡಾಯಕ್ಕೆ ಒಂದು ನೂರು ವರ್ಷಗಳ ರಾಜಕೀಯ ಇತಿಹಾಸವೂ ಇದೆ. ನೂರು ವರ್ಷಗಳಿಂದಲೂ ಚಿಕ್ಕಪುಟ್ಟ ಬಂಡಾಯಗಳು ಬ್ರಿಟಿಶರ ವಿರುದ್ಧ ಆಗುತ್ತಲೆ ಇದ್ದವು. ೧೭೫೭ರಲ್ಲಿ ವೈರಿಗಳ ದಳಗಳಲ್ಲಿ ಹಲವಾರು ಸ್ವರೂಪದ ಒಡಕು ಒಳಸಂಚುಗಳನ್ನು ನಡೆಯಿಸಿ ಕ್ಲೈವನು ಬಂಗಾಲದ ನವಾಬರನ್ನು ಪ್ಲಾಸಿ ಕಾಳಗದಲ್ಲಿ ಸೋಲಿಸಿದ ನಂತರವೇ ಇಂಗ್ಲೀಷರ ನಿಜವಾದ ರಾಜಕೀಯ ಇತಿಹಾಸವು ಹಿಂದುಸ್ತಾನದಲ್ಲಿ ಪ್ರಾರಂಭವಾಯಿತು. ಪ್ಲಾಸಿ ಕಾಳಗದಲ್ಲಿ ಸಿರಾಜಉದ್ದೌಲನು ೫೦,೦೦೦ ಸೈನಿಕರೊಡನೆ ಇಂಗ್ಲೀಷರಿಗೆ ಎದುರಾದನು. ಇಂಗ್ಲೀಷರ ಹತ್ತಿರ ೨,೨೦೦ ಹಿಂದೀ ಸಿಪಾಯರೂ ೮೦೦ ಇಂಗ್ಲೀಷ ಸೈನಿಕರೂ, ಹೀಗೆ ಕೇವಲ ಮೂರೇ ಸಾವಿರ ಸೈನಿಕರಿದ್ದರು. ಸಿರಾಜನಿಗೆ ಬೇಡಾದವರೊಡನೆ ಕ್ಲೈವನು ಒಳಸಂಚು ನಡೆಯಿಸಿ ಕಾಳಗದ ಸಮಯದಲ್ಲಿ ಅವನ ಸೈನ್ಯವು ಶಸ್ತ್ರವನ್ನೆತ್ತದಂತೆ ಗುಪ್ತ ಮಾತುಕತೆಗಳನ್ನಾಡಿಕೊಂಡಿದ್ದನು. ಆ ಪ್ರಕಾರ ಪ್ಲಾಸಿ ಕಾಳಗದಲ್ಲಿ ಸಿರಾಜನ ಪರವಾಗಿ ಕೇವಲ ೧,೨೦೦ ಸೈನಿಕರು ಮತ್ತು ೧೨ ತೋಪುದಳಗಳು ಮಾತ್ರ ಹೋರಾಡಿದವು.[2] ನವಾಬನು ಈ

---

2. ಸಿಂಹ ಮತ್ತು ಬ್ಯಾನರ್ಜಿಯವರ ಹಿಂದುಸ್ತಾನದ ಇತಿಹಾಸ. (೧೯೫೦) ಪುಟ ೪೭೮.

ಬಗೆಯ ವಿಶ್ವಾಸಘಾತವಾದ್ದರಿಂದ ಓಡಿಹೋಗಬೇಕಾಯಿತು. ಹೀಗೆ ಗೆದ್ದ ಪ್ಲಾಸಿ ಕಾಳಗದ ಬಗ್ಗೆ ಬ್ರಿಟಿಶರು ಇನ್ನೂ ಜಂಭಕೊಚ್ಚಿಕೊಳ್ಳುತ್ತಾರೆ! ಇಂಗ್ಲೀಷರ ಶೌರ್ಯವನ್ನು ಹೊಗಳಲು (ಅದು ಸತ್ಯವಿರಲಿ ಸುಳ್ಳಿರಲಿ) ಮುಖ ಸ್ತುತಿಮಾಡುವ ಭಟ್ಟಂಗಿಗಳು, ಬರಹಗಾರರು ಮುಂದೆ ಬಂದಿರುತ್ತಾರೆ. ಆದರೆ ಹಿಂದೀಯರು ಆಗ ಸೋತುಹೋದುದರಿಂದ ಅವರ ಸಾಹಸದ ಪವಾಡಗಳನ್ನು ಹಾಡಲು ಮೊನ್ನಿನ ವರೆಗೆ ಯಾರೂ ದಿಕ್ಕಿರಲಿಲ್ಲ. ಅವರ ಬಗ್ಗೆ ಸಮಾಚಾರ ಸಾಹಿತ್ಯಗಳೂ ದೊರೆಯುತ್ತಿರಲಿಲ್ಲ.

ಪ್ಲಾಸಿ ಕಾಳಗವನ್ನು ಗೆದ್ದು ಇಂಗ್ಲೀಷರು ತಮ್ಮ ಪ್ರಭಾವವನ್ನು ಬೆಳೆಸಿ ಕೊಳ್ಳುವ ಕಾರ್ಯಕ್ರಮದಲ್ಲಿ ಒಂದು. ದೊಡ್ಡ ಹೆಜ್ಜೆಯನ್ನು ಮುಂದಿಟ್ಟರು. ಆ ಕಾಲದಲ್ಲಿ ಭಾರತದೊಳಗೆ ಫ್ರೆಂಚ್,ಡಚ್ ಅಥವಾ ಪೋರ್ತುಗೀಜ ಮೊದಲಾದ ಯಾವ ಜನಾಂಗದವರೂ ಅಷ್ಟೊಂದು ಪ್ರಭಾವಶಾಲಿಗಳಾಗಿರಲಿಲ್ಲ. ಆದರೆ ದಕ್ಷಿಣದಲ್ಲಿ ಮಾತ್ರ ಈ ಸಮಯಕ್ಕೆ ಕರ್ನಾಟಕದಲ್ಲಿಯೇ ಓರ್ವ ಪ್ರಭಾವಿ ವ್ಯಕ್ತಿಯು ತಲೆ ಎತ್ತಿದನು. ಕರ್ನಾಟಕ ಹಾಗೂ ದಕ್ಷಿಣ ಭಾರತದಲ್ಲಿ ಹೈದರ ಅಲ್ಲಿ ಹಾಗು ಅವನ ಪ್ರಸಿದ್ಧ ಪುತ್ರ ಟಿಪ್ಪುಸುಲ್ತಾನ ಇವರು ಮುಂದೆ ನಾಲ್ವತ್ತು ವರ್ಷ ಇಂಗ್ಲೀಷರಿಗೆ ತಮ್ಮ ರಾಜ್ಯದೊಳಗೆ ಕಾಲಿಡಗೊಡಲಿಲ್ಲ. ಇವರಿಬ್ಬರಿಗೂ ಇಂಗ್ಲೀಷರ ಕುಟಿಲನೀತಿ ತುಂಬಾ ಗೊತ್ತಿತ್ತು. ಭೇದನೀತಿ ಯಿಂದ ಬ್ರಿಟಿಶರು ಒಂದು ದಿನ ಹಿಂದುಸ್ಥಾನದ ಸರ್ವ ರಾಜ್ಯಗಳನ್ನೂ ದುರ್ಬಲ ಗೊಳಿಸಿ ತಾವೇ ಸರ್ವಾಧಿಪತಿಗಳಾಗುವರೆಂದೂ ಅವರಿಗೆ ಹೊಳೆದಿತ್ತು. ಆದ್ದ ರಿಂದ ಹೈದರ ಅಲ್ಲಿ ಹಾಗೂ ಟಿಪ್ಪೂಸುಲ್ತಾನರ ಬಗ್ಗೆ ಇಂಗ್ಲೀಷ ಇತಿಹಾಸ ಕಾರರು ಇಂದಿಗೂ ಅಪಪ್ರಚಾರ ಮಾಡುತ್ತಾರೆ. ಅವರು ಕ್ರೂರರಿದ್ದರು, ಆಕ್ರಮಣಶೀಲರಿದ್ದರು, ಜಾತ್ಯಂಧರಿದ್ದರು ಎಂದು ಕಟುವಾಗಿ ಟೀಕೆ ಮಾಡು ತ್ತಾರೆ. ತಂದೆಮಕ್ಕಳಿಬ್ಬರೂ ತುಂಬಾ ಮುತ್ಸದ್ದಿಗಳಾಗಿದ್ದರು; ಆಂಗ್ಲರ ವಿರುದ್ಧ ಹೈದರನು ಒಂದು ನಿಶ್ಚಿತ ಧೋರಣೆಯನ್ನು ರೂಪಿಸಿಕೊಂಡನು. ತಾನಿರುವ ವರೆಗೂ ದಕ್ಷಿಣ ಭಾರತದಲ್ಲಿ ಬ್ರಿಟಿಶರನ್ನು ಬಲಿಯಗೊಡಲಿಲ್ಲ. ಇದರಿಂದ ವಾರನ್ ಹೇಸ್ಟಿಂಗ್ಸನಿಗೆ ಬಹಳ ಸಂಕಟವಾಯಿತು. ಕಲಕತ್ತೆಯಿಂದ ಅವನು ನೌಕಾದಳಗಳನ್ನು ಕಳಿಸಿಕೊಟ್ಟನು. ಹೈದರ ಅಲ್ಲಿಯು ಯಾರಿಗೂ ಸೊಪ್ಪು ಹಾಕದಂಥ ಶೂರನಿದ್ದನು; ಮದ್ರಾಸಿನ ವರೆಗೆ ದಾಳಿಮಾಡಿ ಸೆಂಟ ಜಾರ್ಜ ಕೋಟೆಯನ್ನಾಕ್ರಮಿಸಿ ತನ್ನ ಮನಬಂದ ಕರಾರುಗಳಿಗೆ ಒಪ್ಪುವಂತೆ ಆಂಗ್ಲ

ರನ್ನು ಬಗ್ಗಿಸಿದ್ದು ಇತಿಹಾಸಪ್ರಸಿದ್ಧವಾಗಿದೆ. ನೌಕಾಶಕ್ತಿಯ ಮಹತ್ವವನ್ನು ಹೈದರ ಅಲ್ಲಿಯು ತುಂಬಾ ಅರಿತವನಾಗಿದ್ದನು. ಆದ್ದರಿಂದ ಪಶ್ಚಿಮ ಕರಾವಳಿಯನ್ನು ಕಡೆಯವರೆಗೂ ಅವನು ಆಂಗ್ಲರಿಗೆ ಬಿಟ್ಟುಕೊಡಲಿಲ್ಲ. ನಿಜಾಮನೂ ಮರಾಠರೂ ಹೈದರ ಅಲ್ಲಿಗೆ ಬಹಳ ತಾಪಕೊಟ್ಟರು; ಅವನನ್ನು ಅವರು ವೈರಿಯಂತೆ ಕಾಣುತ್ತಿದ್ದರು. ಹೈದರ ಅಲ್ಲಿಗೆ ಇದೊಂದು ಬಹಳ ಕಾಲ್ತೊಡಕಾಯಿತು. ನಿಜಾಮ ಮತ್ತು ಮರಾಠಿಗರೂ ಹೈದರ ಅಲ್ಲಿಗಿಂತ ಬಲಶಾಲಿಗಳಾಗಿದ್ದರೂ ಬ್ರಿಟಿಶರಿಗೆ ಹೆದರುತ್ತಿದ್ದರು ! ಹೈದರ ಅಲ್ಲಿಯು ಇಂಗ್ಲೀಷರಿಗೆ ಎಂದೂ ಬೆದರದೆ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಂಡು ಬ್ರಿಟಿಶರಿಗೆ ಕಂಟಕವಾದನು. ಹೀಗೆ ತನ್ನ ವಿಜಯಯಾತ್ರೆಯನ್ನು ನಡೆಸಿದಾಗ ಹೈದರ ೧೭೮೨ರಲ್ಲಿ ಅಕಾಲವಾಗಿ ಮರಣಹೊಂದಿಬಿಟ್ಟ.

ಅವನ ಮಗ ಟಿಪ್ಪೂಸುಲ್ತಾನನಲ್ಲಿ ಅಪ್ಪನ ಗುಣಗಳೆಲ್ಲವೂ ಇದ್ದವು; ಟಿಪ್ಪೂ ಬಹಳ ಶೂರನಿದ್ದನು. ಇಡಿಯ ಉತ್ತರ ಹಿಂದುಸ್ಥಾನದಲ್ಲಿ ಏಕಛತ್ರಾಧಿಪತಿಗಳಂತೆ ಇದ್ದ ಇಂಗ್ಲೀಷರಿಗೆ ಟಿಪ್ಪೂ ಎಂದೂ ಬಾಗಿ ನಡೆಯಲಿಲ್ಲ. ಆದರೆ ಅವನ ದೈವವೆ ಅವನಿಗೆ ಪ್ರತಿಕೂಲವಾಗಿತ್ತು. ನಿಜಾಮ ಹಾಗೂ ಮರಾಠರನ್ನು ತಮ್ಮವರನ್ನಾಗಿ ಮಾಡಿಕೊಂಡು ಹೊರಗಿನವರಾದ ಬ್ರಿಟಿಶರನ್ನು ಓಡಿಸಬೇಕೆಂದು ವಿಶ್ವಪ್ರಯತ್ನ ಮಾಡಿದ ಶ್ರೇಯಸ್ಸು ಟಿಪ್ಪೂಸುಲ್ತಾನನಿಗೆ ಸಲ್ಲತಕ್ಕದ್ದು. ವಿದೇಶಗಳಲ್ಲಿ ರಾಯಭಾರವನ್ನು ನಡೆಸಿ ಬ್ರಿಟಿಶರನ್ನು ಅಂತರರಾಷ್ಟ್ರೀಯ ಮುತ್ಸದ್ದಿತನದಿಂದ ಓಡಿಸಲು ಬರಬಹುದೇ ಎಂದೂ ಅವನು ನೋಡಿದ. ಆದರೆ ಸಮಯವು ಅವನಿಗೆ ಅನುಕೂಲವಾಗಿರಲಿಲ್ಲ. ಮರಾಠರು ಮತ್ತು ನಿಜಾಮನು ತಮ್ಮ ಸ್ವಾರ್ಥಸಾಧನೆಗಾಗಿ ಟಿಪ್ಪೂಸುಲ್ತಾನನ ಕೈಬಿಟ್ಟರು. ಟಿಪ್ಪೂಸುಲ್ತಾನನ ಕಾಗದಪತ್ರಗಳಲ್ಲಿ, ಖಾಸಗಿ ದಿನಚರಿಯಲ್ಲಿ, ಪತ್ರವ್ಯವಹಾರಗಳಲ್ಲಿ ಬ್ರಿಟಿಶ್ ವಿರೋಧಿ ಭಾವನೆಯು ಉಕ್ಕುತ್ತಿತ್ತು. ಬ್ರಿಟಿಶರು ಟಿಪ್ಪೂ ಸುಲ್ತಾನನನ್ನು ಹತ್ತಿಕ್ಕಲು ಎಲ್ಲ ಬಗೆಯ ಒಳಸಂಚು ಮತ್ತು ಭೇದನೀತಿಗಳ ಮಾರ್ಗವನ್ನು ಹಿಡಿದರು. ಇಂಗ್ಲೀಷರ ವಿರುದ್ಧ ಹಲವಾರು ಯುದ್ಧಗಳನ್ನು ಆಡಿ ಟಿಪ್ಪೂಸುಲ್ತಾನನು ಕೊನೆಗೆ ಕಾದುತ್ತಲೇ ಮಡಿದ.

ಹೈದರ ಅಲ್ಲಿ ಹಾಗೂ ಟಿಪ್ಪೂಸುಲ್ತಾನರ ಶೌರ್ಯ, ಧೈರ್ಯ ಮತ್ತು ಮುತ್ಸದ್ದಿತನಗಳ ಕಥೆಯು ಮೈಸೂರಿಗಲ್ಲದೆ ಭಾರತಕ್ಕೇ ಕೀರ್ತಿಯನ್ನು ತರುವಂಥದಾಗಿದೆ. ೧೭೯೯ರಲ್ಲಿ ಟಿಪ್ಪುಸುಲ್ತಾನನು ಶ್ರೀರಂಗಪಟ್ಟಣದಲ್ಲಿ ಇಂಗ್ಲೀಷರೊಡನೆ

ಕಾದುತ್ತ ಮಡಿದನಂತರ ಉತ್ತರ ದಕ್ಷಿಣಗಳಲ್ಲಿ ಇಂಗ್ಲೀಷರಿಗೆ ಯಾವ ವೈರಿಯೂ ಉಳಿಯಲಿಲ್ಲ. ಕರ್ನಾಟಕದ ಸ್ವಾತಂತ್ರ್ಯಸಮರಗಳ ಇತಿಹಾಸದಲ್ಲಿ ಹೈದರ ಅಲ್ಲಿ ಮತ್ತು ಟಿಪ್ಪೂಸುಲ್ತಾನರ ಇತಿಹಾಸವು ಪ್ರಥಮ ಮತ್ತು ಮಹತ್ವದ ಅಧ್ಯಾಯ ವಾಗಿದೆ.

ಟಿಪ್ಪೂಸುಲ್ತಾನನ ಪತನದ ನಂತರ ಮೈಸೂರು ಹಾಗೂ ದಕ್ಷಿಣಭಾರತವು ಪೂರಾ ಇಂಗ್ಲೀಷರ ಸ್ವಾಧೀನವೇ ಆದಂತಾಯಿತು ; ಮರಾಠರಲ್ಲಿ ಪೇಶ್ವೆಯವರೂ ದುರ್ಬಲರಾಗಿಬಿಟ್ಟಿದ್ದರು. ೧೮೧೮ರಲ್ಲಿ ಅವರೊಡನೆ ಆದ ಕಾಳಗದಲ್ಲಿ ಬ್ರಿಟಿಶರು ಪೂರ್ಣ ಯಶಸ್ವಿಯಾದುದರಿಂದ 'ನಿರ್ವೀರ್ಯಮುರ್ವೀತಲಂ' ಎಂಬಂತೆ ಸ್ಥಿತಿ ಯಾಯಿತು. ಆಂಗ್ಲರ ರಾಜ್ಯವಿಸ್ತರಣೆಯ ಕಥೆ ಇಲ್ಲಿಗೆ ಮುಗಿದು ರಾಜ್ಯ ದಾಡಳಿತದ ಕಥೆ, ಅದರ ಅನ್ಯಾಯ, ಜುಲುಮೆ ಇವು ಹೆಚ್ಚೆಚ್ಚು ಬೆಳೆಯುತ್ತ ಹೋದವು. ಅವರು ತಮ್ಮ ತೀರ ನಿಷ್ಕರುಣ ಹಾಗೂ ಶೋಷಣಪೂರ್ಣ ರಾಜ್ಯ ಪದ್ಧತಿಯಿಂದಲೇ ಮೊಟ್ಟಮೊದಲು ಬಂಡಾಯದ ಬೀಜವನ್ನು ಬಿತ್ತಿದರು ; ಬಿತ್ತಿದ್ದನ್ನು ಮುಂದೆ ಸಾಕಷ್ಟು ಬೆಳೆದುಕೊಂಡರು.

# ಎರಡನೆಯ ಅಧ್ಯಾಯ

## ನೂರು ವರ್ಷಗಳ ಹಿನ್ನೆಲೆ

ಬ್ರಿಟಿಶರ ವಿರುದ್ಧ ಎರಡು ಮೂರು ರಂಗಗಳಲ್ಲಿ ಹೋರಾಟವು ನಡೆಯಿತು. ಧಾರ್ಮಿಕ ಭಾವನೆಗಳನ್ನು ಮುಂದೆ ಮಾಡಿ ಸಿಪಾಯಿ ದಳಗಳು ಹೋರಾಡಿದವು. ರಾಜಕೀಯ ಧೋರಣೆಯನ್ನು ಪ್ರತಿಭಟಿಸಿ ಸಂಸ್ಥಾನಿಕರು, ಜಮೀನದಾರರು ಕೂಡಿದರು. ಅವರ ಅನುಯಾಯಿಗಳಾದ ಜನತೆಯು ವಿವಿಧ ಕಾರಣಗಳ ಮೂಲಕ ಕ್ಷೋಭಗೊಂಡು ಬಂಡಾಯ ಸೇರಿದರು.[1] ಹೀಗಾದುದರಿಂದ ಬಂಡಾಯದ ರಾಷ್ಟ್ರೀಯ ಸ್ವರೂಪವನ್ನು ಕುರಿತು ಇತಿಹಾಸಕಾರರು ಪ್ರಶ್ನೆ ಮಾಡಿದ್ದಾರೆ. ಮೀರತ ಬಂಡಾಯ, ಕಾನಪೂರ ಕೊಲೆ, ಮುಂಡರಗಿ ಭೀಮರಾಯ, ಸುರಪುರ ಬಂಡು, ಹಲಗಲಿ ಹರಾಕಿರಿ ಈ ಎಲ್ಲವುಗಳನ್ನು ಒಂದೇ ಸರದಲ್ಲಿ ಪೋಣಿಸುವ ಬಗೆ ಹೇಗೆ? ಆದ್ದರಿಂದ ಆಗಿನ ಕಾಲವು ಹೇಗಿತ್ತು? ಅಂದಿನ ಜನರ ಆಚಾರ ವಿಚಾರಗಳು ಹೇಗಿದ್ದವು ಎಂಬುದನ್ನು ನಮ್ಮ ಕಲ್ಪನೆಗೆ ತಂದುಕೊಳ್ಳದೆ ಬಂಡಾಯ ಈ ಸ್ವರೂಪವನ್ನು ಯಾಕೆ ತಾಳಿತು ಎಂಬುದು ನಮಗೆ ಸುಲಭ ರೀತಿಯಲ್ಲಿ ಹೊಳೆಯಲಾರದು.

೧೮೫೭ನೆಯ ಇಸ್ವಿಯು ಹಳೆಯ ಭಾರತದ ಕೊನೆಯ ವರ್ಷ. ಕ್ರಾಂತಿಯ ಜ್ವಾಲೆಯಲ್ಲಿ ಹಳೆಯ ಎಷ್ಟೋ ವಿಚಾರಗಳು, ಪದ್ಧತಿಗಳು ನಾಶ ಹೊಂದಿ ಹೋದವು. ಈಗಿನ ಒರೆಗಲ್ಲಿಗೆ ಹಚ್ಚಿ ನೋಡಿದರೆ ಅಂದಿನ ಸಾಮಾನ್ಯ ಜನರಲ್ಲಿ ಅನೇಕ ಜನಹಿತದ ವಿಷಯಗಳ ಬಗ್ಗೆ ಹೆಚ್ಚು ಜ್ಞಾನವೂ ಇರಲಿಲ್ಲ, ಹೆಚ್ಚು ಆಸ್ಥೆಯೂ ಇರಲಿಲ್ಲ. ಸಮಾಜದಲ್ಲಿ ಭಯ, ಭಾವಿಕತನ, ಅಂಧಶ್ರದ್ಧೆಗಳು ತುಂಬಿಕೊಂಡಿದ್ದವು. ಇದರಿಂದ ನಿಜಸಂಗತಿಗಳಿಕಿಂತ ಅಸತ್ಯ ಮತ್ತು ಭಯಸೂಚಕ ವಾರ್ತಾಸಂಚಾರವೇ ಸಮಾಜದಲ್ಲಿ ಹೆಚ್ಚಾಗುತ್ತಿತ್ತು. ಕಿವಿಗೆ ಬಿದ್ದ ಪ್ರತಿಯೊಂದು ರೋಮಾಂಚಕಾರಿ ವಾರ್ತೆಯನ್ನು ನಂಬುವದು ಆಗಿನ

1. ಅಜಿಮುಲ್ಲಾಖಾನ, ತಾತ್ಯಾ ಟೋಪೆ ಮೊದಲಾದವರು.

ಜನರ ಸ್ವಭಾವವಾಗಿ ಹೋಗಿತ್ತು. ಏನಾದರೊಂದು ವಾರ್ತೆ ಹಬ್ಬತೊಡಗಿದರೆ ಕೂಡಲೆ ಅಧಿಕೃತ ಪ್ರಕಟನೆಗಳನ್ನು ಹೊರಡಿಸುವಂಥ ಸ್ಥಿರ ಸರಕಾರವೂ ಆಗ ಇರಲಿಲ್ಲ.

ಆಕಳು ಮತ್ತು ಹಂದಿಗಳ ನೆಣ ಹಚ್ಚಿದ ಕಾಡತೂಸುಗಳನ್ನು ಹಲ್ಲಿನಿಂದ ಕಡಿಯಹಚ್ಚಿ, ತಮ್ಮ ಧರ್ಮಾಚಾರಗಳನ್ನು ಇಂಗ್ಲೀಷರು ಭ್ರಷ್ಟಗೊಳಿಸಲಿದ್ದಾರೆಂಬ ವಾರ್ತೆಯು ಡಮ್‌ಡಮ್‌ದಿಂದ ಮೀರತದವರೆಗೆ ಸುಲಭವಾಗಿ ಹಬ್ಬಿಬಿಟ್ಟಿತು. ಆದರೆ ಸರಕಾರೀ ಅಧಿಕೃತವರದಿಗೆ ಮಾತ್ರ ಯಾರೂ ಕಿವಿಗೊಡಲಿಲ್ಲ! ತಮ್ಮ ಧರ್ಮಾಚಾರಗಳನ್ನು ಭ್ರಷ್ಟಗೊಳಿಸಲು ಇಂಗ್ಲೀಷರು ಏನೇನು ನಡೆಸಿರುವರೆಂಬ ಬಗ್ಗೆ ಅಂದಿನ ಅನೇಕ ಸೈನ್ಯಠಾಣ್ಯಗಳಿದ್ದ ಊರುಗಳಲ್ಲಿ ಒಂದು ಸುದ್ದಿ ಸತ್ರವೇ ನಡೆಯಿತು. ಕಂಪನಿ ಅಧಿಕಾರಿಗಳು ಹಿಟ್ಟು ಮತ್ತು ಉಪ್ಪುಗಳಲ್ಲಿ ಎಲುವಿನ ಪುಡಿಯನ್ನು ಬೆರೆಯಿಸಿದ್ದಾರೆಂದು ಕೆಲವರು ಸುದ್ದಿ ಮಾಡಿದರು; ಮತ್ತೆ ಕೆಲವು ಜನರು ಬಜಾರದಲ್ಲಿ ಸಿಗುವ ತುಪ್ಪದಲ್ಲಿ ಆಕ್ಷೇಪಾರ್ಹ ನೆಣವನ್ನು ಕೂಡಿಸಲಾಗಿದೆ ಎಂದರು. ಆಕಳ ಮತ್ತು ಹಂದಿಯ ಮಾಂಸಗಳ ತುಣುಕುಗಳನ್ನು ಕೆರೆ-ಬಾವಿಗಳಲ್ಲಿ ಮಿಶನರಿಗಳು ಒಗೆಸಿದ್ದಾರೆಂದೂ ಇನ್ನಿತರರು ಸಾರಿದರು.[2] ಜನರು ತುಂಬಾ ಭಾವಿಕರಾಗಿದ್ದರು. ಭ್ರಷ್ಟಾಚಾರಗಳಿಗೆ ಮರಣದ ಕಿಂತಲೂ ಅವರು ಹೆಚ್ಚಿಗೆ ಹೆದರುತ್ತಿದ್ದರು.

ಹಿಂದೀ ರಾಜ್ಯಾಶ್ರಯವು ಅಳಿಯಹತ್ತಿದಂತೆ ಹಿಂದುಗಳಿಗೆ ತಮ್ಮ ಕರ್ಮಠ ಜೀವನವನ್ನು ಸಾಗಿಸುವದು ಕಠಿಣವಾಗತೊಡಗಿತು. ಉಪಜೀವನದ ಸಲುವಾಗಿ ಕಂಪನಿ ಸರಕಾರದ ಸೈನ್ಯ ಹಾಗೂ ಮುಲ್ಕೀ ನವಕರಿಗಳನ್ನು ಮಾಡತೊಡಗಿದರು. ಆದರೂ ಅವರ ಹಳೆಯ ನಂಬಿಗೆಗಳು ಹೋಗಲಿಲ್ಲ. ಬ್ರಾಹ್ಮಣರೇ ಬಂಗಾಲ ಸೈನ್ಯದಲ್ಲಿ ಅಧಿಕರಾಗಿದ್ದರು. ಇವರು ಮತ್ತು ಎಲ್ಲ ಹಿಂದುಗಳು ತಮ್ಮನ್ನು ಸಮುದ್ರದಾಚೆಗೆ ಕಳಿಸತಕ್ಕದ್ದಲ್ಲವೆಂದು ಕಂಪನಿಯೊಡನೆ ಕರಾರು ಮಾಡಿಕೊಂಡಿದ್ದರು. ಹಿಂದುಗಳಿಗೆ ಸಮುದ್ರಪರ್ಯಟನವು ಆಗ ಬಹಿಷ್ಕೃತವಿತ್ತು.[3] ಮತ್ತು ಹಿಂದುವಿಗೆ ಮರಣದ ಪೂರ್ವದಲ್ಲಿ ಗಂಗೋದಕ ಮತ್ತು ತುಲಸೀದಲವು ಬೇಕೇಬೇಕೆಂದೂ ಪರದೇಶಗಳಲ್ಲಿ ಇವು ದೊರೆಯುವದಿಲ್ಲವಾದ್ದ

2. Kaye, Vol. 1 416–417.

3. ಈಗಲೂ ಸಹ ಇಂಗ್ಲಂಡಿಗೆ ಹೋಗಿಬಂದವರಿಗೆ ಪ್ರಾಯಶ್ಚಿತ್ತ ಕೊಡುವವರಿದ್ದಾರೆ.

ರಿಂದ ತಮಗೆ ಪರರಾಷ್ಟ್ರಗಳಿಗೆ ಹೋಗಿ ಯುದ್ಧ ಮಾಡುವದು ಶಕ್ಯವಿಲ್ಲೆಂದೂ ಸಿಪಾಯಿಗಳು ಸ್ಪಷ್ಟವಾಗಿ ಹೇಳುತ್ತಿದ್ದರು.

ಆಗಿನ ಸಮಾಜ ಅಂಥದು; ಜನರಿಗೆ ಸಾಮೂಹಿಕ ಇಲ್ಲವೆ ಸಾಂಘಿಕ ಜೀವನವೆಂಬುದು ಆಗ ಇರಲಿಲ್ಲ. ಭಾಷೆ, ಸಂಸ್ಕೃತಿ, ಸಾಹಿತ್ಯ ಪ್ರಾಂತಗಳು ಒಂದೇ ಇದ್ದುದಕ್ಕೆ ಅವುಗಳ ಪ್ರಾಚೀನತೆಯು ಕಾರಣವಾಗಿತ್ತು. ಆದರೆ ಉತ್ತರದಲ್ಲಿ ಆದುದು ದಕ್ಷಿಣದಲ್ಲಿ, ಪೂರ್ವದಲ್ಲಿ ನಡೆದುದು ಪಶ್ಚಿಮದಲ್ಲಿ ತಿಳಿಯುತ್ತಿರಲಿಲ್ಲ. ರೇಲ್ವೆಗಳು ಆದೇ ಪ್ರಾರಂಭವಾಗಿದ್ದವು. ಮೊಗಲರ ಕಾಲದ ರಸ್ತೆಗಳನ್ನೆ ಕಂಪನಿಸರಕಾರವು ಅಲ್ಪಸ್ವಲ್ಪ ದುರಸ್ತಿ ಮಾಡಿಸಿದ್ದಿತು. ಕುದುರೆಗಳೆ ಆಗಿನ ಎಲ್ಲಕ್ಕೂ ಶೀಘ್ರ ವಾಹನ. ತಂತಿಪದ್ಧತಿಯು ಅದೇ ಪ್ರಾರಂಭವಾಗಿ ಅತ್ಯಲ್ಪ ಪ್ರಮಾಣದಲ್ಲಿ ನಡೆದಿತ್ತು. ಜನರಿಗೆ ಇಂಗ್ಲೀಷಭಾಷೆಯು ಅಥವಾ ಪಾಶ್ಚಾತ್ಯ ಶಿಕ್ಷಣದ ಗಂಧವಿರುತ್ತಿರಲಿಲ್ಲ. ಹಾಗೆಯೇ ಕಂಪನಿ ಅಧಿಕಾರಿಗಳಿಗೆ ಹಿಂದೀ ಭಾಷೆಗಳು ಬರುತ್ತಿರಲಿಲ್ಲ. ಇದರಿಂದ ಬಂಡಾಯದ ಕಾಲಕ್ಕೆ ಸಾಕಷ್ಟು ತೊಂದರೆಯಾಯಿತು. ಪರಸ್ಪರರ ಬಗ್ಗೆ ಅನಾವಶ್ಯಕ ಭಯ ಮತ್ತು ಸಂಶಯಗಳು ಹೆಚ್ಚುತ್ತ ನಡೆದವು. ಹಳ್ಳಿಯ ಜೀವನಕ್ಕೇ ಪ್ರಾಧಾನ್ಯತೆ ಇರುತ್ತಿದ್ದ ಆ ದಿನಗಳಲ್ಲಿ ಗ್ರಾಮಪಂಚಾಯತಿಗಳು ಇನ್ನೂ ಬದುಕಿದ್ದವು. ಹಳ್ಳಿಯ ಕಸಬು-ಕೈಗಾರಿಕೆಗಳು ಇನ್ನೂ ನಷ್ಟಹೊಂದಿರಲಿಲ್ಲ. ಹೀಗಾಗಿ ಜನಸಾಮಾನ್ಯರು ಈಗಿನಕಿಂತ ಸಂತುಷ್ಟರಿದ್ದು ದೇಶದ ವಿಷಯಗಳ ಬಗ್ಗೆ ಅವರಿಗೆ ಕುತೂಹಲವಿರಲಿಲ್ಲ.

ಹಳ್ಳಿಗಳಿಗೂ ಸರಕಾರಕ್ಕೂ ಆಗ ನೇರವಾದ ಸಂಬಂಧವೇ ಇರಲಿಲ್ಲ. ಸ್ಥಾನಿಕ ಜಮೀನದಾರರು ಮತ್ತು ಪಂಚಾಯತಿಗಳು ಸಮಾಜದ ಶಾಂತಿ ಸುವ್ಯವಸ್ಥೆಗಳನ್ನು ಕಾಯುತ್ತಿದ್ದರು. ಈ ಜಮೀನದಾರರಿಗೆ ಆಸ್ತಿ ಉತ್ಪನ್ನಗಳೂ ಅಧಿಕವಾಗಿದ್ದು ಶಸ್ತ್ರಾಸ್ತ್ರಗಳೂ ಭದ್ರಕೋಟೆಗಳೂ ಅವರ ವಶದಲ್ಲಿರುತ್ತಿದ್ದವು. ಸುತ್ತಲಿನ ಹಳ್ಳಿಗರು ಒಮ್ಮೊಮ್ಮೆ ಕೋಟೆಯೊಳಗೆ ಆಶ್ರಯ ಪಡೆಯುತ್ತಿದ್ದರು. ನರಗುಂದವು ಇಂಥದೇ ಒಂದು ಸ್ಥಳವಾಗಿತ್ತು. ಈ ಜಮೀನದಾರರು ಇಂಗ್ಲೀಷರ ಕಣ್ಣೊಳಗೆ ಒತ್ತಲಾರಂಭಿಸಿದ್ದರಿಂದ ಉಭಯತರಲ್ಲಿ ಚಕಮಕಿಗಳು ಸಂಭವಿಸತೊಡಗಿದವು. ಜಮೀನದಾರರನ್ನು ನಿಃಶಸ್ತ್ರಗೊಳಿಸಿ ಅವರ ಭದ್ರಕೋಟೆಗಳನ್ನು ನೆಲಸಮ ಮಾಡುವದು ಕಂಪನಿ ಸರಕಾರದ ಒಂದು ಮುಖ್ಯ ಉದ್ಯೋಗವಾಗಿತ್ತು. ಆ ಪ್ರಕಾರ ಅವರು ಪುಣೆ, ಕಾಲಪಿ, ಝಾಂಸಿ, ನರಗುಂದ,

ಕೊಪ್ಪಳ ಮೊದಲಾದ ಎಷ್ಟೋ ಕೋಟೆಗಳನ್ನು ನೆಲಸಮ ಮಾಡಿದರು. ಇದ ರಿಂದ ಸಂತಪ್ತರಾದವರೂ ಬ್ರಿಟಿಶರ ವಿರುದ್ಧ ಬಂಡಾಯ ಹೂಡಿದರು.

ನಮಗೆ ಈಗ ಪರಿಚಿತವಿದ್ದ ರಾಷ್ಟ್ರೀಯ ಭಾವನೆಗಳು ಆಗ ಇರಲಿಲ್ಲ. ಯುರೋಪದಲ್ಲಿ ಕೂಡ ಅವು ಆಗ ಹೊಸವು. ಅಂದಮೇಲೆ ಇಲ್ಲಿ ರಾಷ್ಟ್ರೀಯತೆ ಬರುವದು ಎಲ್ಲಿಂದ? ಅಂದಿನ ಹಿಂದುಸ್ತಾನದಲ್ಲಿ ಧರ್ಮ, ಸಂಸ್ಕೃತಿ, ಆಚಾರ ಇವುಗಳಿಗೆಯೆ ಮಹತ್ವವಿದ್ದು ಅವುಗಳಲ್ಲಿ ಸಾಕಷ್ಟು ಏಕರೂಪತೆಯಿದ್ದಿತು. ಆದಿಧರ್ಮಗುರುಗಳ ಕಾಲದಿಂದ, ನಮ್ಮ ದೇಶದ ನಾಲ್ಕೂ ಮೂಲೆಗಳನ್ನು ಆ ದೃಷ್ಟಿಯಿಂದ ಎಲ್ಲರೂ ಅರಿತಿದ್ದರು. ಭಾಷಾವಿಭಜನೆಗಳಿಗೆ ಆಗ ಮಹತ್ವವಿರಲಿಲ್ಲ. ಜಾತೀಯ ಮತ್ತು ಭಾಷೆಯ ಐಕ್ಯ ಈಗಿನಕಿಂತಲೂ ಆಗ ಅಧಿಕವಾಗಿತ್ತು; ನಮ್ಮಲ್ಲಿಯ ಒಳಭೇದಗಳು ಅವರಲ್ಲಿ ಇರಲಿಲ್ಲ.

ಹಿಂದುಸ್ತಾನದ ಜನತೆಯು ಸುಸಂಸ್ಕೃತವಾದದ್ದು; ಪಕ್ವಜೀವನವುಳ್ಳದ್ದು. ಪರಕೀಯರ ಆಡಳಿತಕ್ಕೆ ಇಂಥದೊಂದು ಜನತೆಯ ಪ್ರತಿಕ್ರಿಯೆಯು ಯಾವ ರೀತಿ ವ್ಯಕ್ತವಾಗಬಹುದೆಂಬುದು ಬ್ರಿಟಿಶರ ವಿರುದ್ಧ ಹಿಂದೀಯರು ಹೂಡಿದ ಬಂಡಾಯಗಳ ಕಥೆಯಿಂದ ಚೆನ್ನಾಗಿ ತಿಳಿಯುವದು. ಮುಸಲ್ಮಾನರ ಆಳಿಕೆಗೂ ಹಿಂದೀಯರು ಮೊದಲು ಇದೇ ರೀತಿಯಲ್ಲಿ ಪ್ರತಿಭಟಿಸಿದರು. ಮುಸಲ್ಮಾನರು ಮುಂದೆ ನಮ್ಮಲ್ಲಿಯೇ ಬಂದಿದ್ದು ನಮ್ಮ ದೇಶಸಂಪತ್ತಿಯ ಹೆಚ್ಚಳಕ್ಕೆ ನೆರ ವಾದರೂ ಅವರ ಧಾರ್ಮಿಕ ಅತ್ಯಾಚಾರಗಳು ಇದೇ ಬಗೆಯ ಪ್ರತಿಭಟನೆಗಳಿಂದ ಎದುರಿಸಲ್ಪಟ್ಟವು. ಪರಕೀಯ ಆಕ್ರಮಣ ಎಂಬುದು ಒಂದಿಲ್ಲೊಂದು ರೀತಿ ಯಲ್ಲಿ ಯಾವಾಗಲೂ ಅಹಿತಕರವಾದುದೆ. ೧೭೫೭ರ ಪ್ಲಾಸಿ ಕಾಳಗವಾದೊಡ ನೆಯೆ ಜನರು ಇಂಗ್ಲೀಷರ ಆಳಿಕೆಯನ್ನು ದ್ವೇಷಿಸಹತ್ತಿದರೆಂದು ಘುಲಾಮ ಹುಸೇನಖಾನನೆಂಬ ಹಿಂದೀ ಇತಿಹಾಸಕಾರನು ೧೭೮೩ರಲ್ಲಿಯೇ ಹೇಳಿದ್ದಾನೆ. ೧೭೫೭ರಿಂದ ೧೮೫೭ರವರೆಗೆ ಬ್ರಿಟಿಶರು ತಮ್ಮ ಆಳಿಕೆಯನ್ನು ಭದ್ರಪಡಿಸಿ ಕೊಳ್ಳುವ ಕಾರ್ಯಕ್ರಮದಲ್ಲಿ ನಿರತರಾಗಿದ್ದರಲ್ಲದೆ ಒಂದು ಪ್ರಚಂಡ ಆರ್ಥಿಕ ಶೋಷಣೆಯ ಕಾರ್ಯಕ್ರಮವನ್ನೂ ಪ್ರಾರಂಭಮಾಡಿದ್ದರು. ಎಲ್ಲ ಉಚ್ಚ ಸರಕಾರಿ ಮತ್ತು ರಾಜಕೀಯ ಹುದ್ದೆಗಳಿಂದ ಹಿಂದೀಯರನ್ನು ಬಹಿಷ್ಕರಿಸಿದ್ದು ಭಾರತೀ ಯರ ಅಸಮಾಧಾನಕ್ಕೆ ವಿಶೇಷವಾಗಿ ಕಾರಣವಾಯಿತು. ಬ್ರಿಟಿಶ್ ನ್ಯಾಯಾ ಡಳಿತವು ತುಂಬಾ ವೆಚ್ಚದ್ದಾಗಿ, ವಿಲಂಬದ್ದಾಗಿ ಲಂಚಗುಳಿತನದಿಂದ ತುಂಬಿ ಬಿಟ್ಟಿತ್ತು. ಜನರಿಗೆ ಇದೂ ಬೇಸರವಾಯಿತು. ಕ್ರಿಶ್ಚನ್ ಧರ್ಮವನ್ನು ಪ್ರಚಾರ

ಮಾಡುವ ಮಿಶನರಿಗಳೂ ತಮ್ಮ ಚಟುವಟಿಕೆಗಳಿಂದ ಜನರನ್ನು ಸಂತಪ್ತಗೊಳಿಸಿದರು. ಉಚ್ಚ ಸೈನ್ಯಾಧಿಕಾರಿಗಳಲ್ಲಿ ಸಹ ಎಷ್ಟೋ ಮಿಶನರಿಗಳಿದ್ದರು. ಚಹಾ, ಕಾಫಿ, ಸಣಬು, ಅಫೀಮು, ನೀಲಿ ಮೊದಲಾದವುಗಳ ತೋಟಗಳು ಬಹುಶಃ ಐರೋಪ್ಯರ ಒಡೆತನಕ್ಕೇ ಸೇರಿದ್ದವು. ಅಲ್ಲಿಯ ಕೆಲಸಗಾರರ ಗುಲಾಮಗಿರಿಯ ಪರಿಸ್ಥಿತಿಯೂ ಒಂದು ವಿಶೇಷ ಅಸಮಾಧಾನಕ್ಕೆ ಕಾರಣವಾಯಿತು. ಬ್ರಿಟಿಶ್ ಸುಲಿಗೆ ಹಾಗೂ ಬಂಡವಾಳಶಾಹಿಯ ಅತ್ಯಂತ ನಗ್ನಸ್ವರೂಪವನ್ನು ನಾವಿಲ್ಲಿ ಕಾಣಬಹುದಾಗಿತ್ತು.

ಹಿಂದುಸ್ತಾನದಲ್ಲಿ ತಮ್ಮ ಆಳಿಕೆಯು ಭದ್ರವಾಗತೊಡಗಿದಂತೆ ಹಿಂದೀಯರ ಬಗ್ಗೆ ಒಂದು ಬಗೆಯ ಅವಹೇಳನ ಮತ್ತು ವರ್ಣತಿರಸ್ಕಾರಗಳು ಇಂಗ್ಲೀಷರಲ್ಲಿ ಉತ್ಪನ್ನವಾಗತೊಡಗಿದವು. ಹಿಂದೀಯರನ್ನು ನಡೆಸಿಕೊಳ್ಳುವ ರೀತಿಯನ್ನು ೧೭೮೬ರಲ್ಲಿಯೇ ಘುಲಾಮ ಹುಸೇನಖಾನನು ಹೀಗೆ ವರ್ಣನೆ ಮಾಡಿದ್ದಾನೆ: "ಒಟ್ಟಾರೆ ಎಲ್ಲ ಇಂಗ್ಲೀಷರೂ ಭಾರತದಲ್ಲಿ ನಮ್ಮೆಲ್ಲರ ಬಗ್ಗೆ ತಿರಸ್ಕಾರವುಳ್ಳವರೆ ಆಗಿದ್ದಾರೆ. ಹಿಂದೀಯರೆಂದರೆ ಸ್ವೇಚ್ಛೆಯಿಂದ ಬಳಿಸಬಹುದಾದ ಒಂದು ನಿರ್ಜೀವ ವಸ್ತು ಎಂಬುದೇ ಅವರ ಕಲ್ಪನೆಯಾಗಿದೆ."[4]

ಕಂಪನಿಸರಕಾರವು ಬಂಗಾಲದ ಲೂಟಿಯನ್ನೆ ಮಾಡಿತು. ಉಪ್ಪು, ಅಡಿಕೆ, ತಂಬಾಕುಗಳನ್ನು ಮೊದಲ್ಗೊಂಡು ಎಲ್ಲ ವ್ಯಾಪಾರದ ಗುತ್ತಿಗೆಯನ್ನು ಕಂಪನಿಯ ಅಧಿಕಾರಿಗಳೆ ಹಿಡಿದರು. ಇದರಿಂದ ಅಸಂಖ್ಯ ಹಿಂದೀ ವ್ಯಾಪಾರಸ್ಥರು ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ನಷ್ಟಹೊಂದಿದರು. ಉತ್ಪಾದಕ ವರ್ಗದವರಾದ ರೈತರನ್ನು ಕಂಪನಿಸರಕಾರದ ನೌಕರರು ಹೆದರಿಸಿ ತಮಗೆ ಮನಬಂದಂತೆ ಸರಕನ್ನು ಅಗ್ಗವಾಗಿ ಕೊಂಡುಕೊಳ್ಳುತ್ತಿದ್ದರು. ರೈತರಿಂದ ತಕರಾರುಗಳು ಬಂದರೆ ಕಂಪನಿ ಅಧಿಕಾರಿಗಳ ಹಿಂದೆ ಸೈನ್ಯವಂತೂ ಇದ್ದೇ ಇರುತ್ತಿತ್ತು! ಹೀಗೆ ಹತ್ತುಹನ್ನೆರಡು ವರ್ಷಗಳಲ್ಲಿ ಬಂಗಾಲದ ಶ್ರೀಮಂತಿಕೆಯೆಲ್ಲ ಅಳಿಯಿತು. ೧೭೭೦ರ ಸುಮಾರಿಗೆ ಅಲ್ಲಿ ಭಯಂಕರ ಬರಗಾಲವು ಬಿದ್ದಿತು. ಕಂಪನಿ ಅಧಿಕಾರಿಗಳು ನವಾಬನನ್ನು ಸುಲಿದರು. ನವಾಬನು ಪ್ರಾಂತವನ್ನು ಸುಲಿದನು. ಈ ಘೋರ ಅನ್ಯಾಯದಿಂದ ಜನರು ಬಹಳ ಬೇಸರಗೊಂಡರು.

೧೭೬೨ರಲ್ಲಿ ಮೀರ ಕಾಸೀಮನು ಇಂಗ್ಲೀಷ ಗವರ್ನರನಿಗೆ ಹೀಗೊಂದು ಪತ್ರವನ್ನು ಬರೆದಿದ್ದಾನೆ—"ಪ್ರತಿಯೊಂದು ಪರಗಣೆಯಲ್ಲಿ, ಪ್ರತಿಯೊಂದು

4. *Civil Disturbances in India*, S. B. Choudhury.

ಹಳ್ಳಿಯಲ್ಲಿ, ಪ್ರತಿಯೊಂದು ಫ್ಯಾಕ್ಟರಿಯಲ್ಲಿ ಕಂಪನಿಯ ಗುಮಾಸ್ತರು ಉಪ್ಪು, ಅಡಿಕೆ, ತುಪ್ಪ, ಅಕ್ಕಿ, ಹುಲ್ಲು, ಬಿದರು, ಮೀನ, ಶುಂಠಿ, ಸಕ್ಕರೆ, ಅಫೀಮು ಮೊದಲಾದ ಅನೇಕ ಸರಕುಗಳನ್ನು ಕೊಳ್ಳುವ ಮತ್ತು ಮಾರುವ ಗುತ್ತಿಗೆಯನ್ನೆ ಹಿಡಿದಿದ್ದಾರೆ. ........................ ರೈತನಿಂದ ಬಲವಂತವಾಗಿ ಬೆಲೆಯ ಒಂದು ನಾಲ್ಕಾಂಶದಷ್ಟು ಕೊಟ್ಟು ಅವರು ಸರಕುಗಳನ್ನು ಸೆಳೆದುಕೊಂಡು ಹೋಗುತ್ತಾರೆ.''[5]

೧೭೫೭ರಿಂದ ೧೮೫೭ರ ವರೆಗೆ ಹಿಂದುಸ್ತಾನದಲ್ಲಿದ್ದ ಭೂಕಂದಾಯ ಮತ್ತು ಭೂಹಿಡುವಳಿ ಪದ್ಧತಿಯೂ ವಿಚಿತ್ರವಾಗಿದ್ದು ಬ್ರಿಟಿಶರ ಅನ್ಯಾಯಕ್ಕೆ ಸಾಕಷ್ಟು ಆಸ್ಪದಕೊಟ್ಟಿತು. ಸರಕಾರಕ್ಕೆ ನೇರವಾಗಿ ಕಂದಾಯ ತೆತ್ತುವ ಚಿಕ್ಕ ಹಿಡುವಳಿದಾರರು ಆಗ ಇರಲೇ ಇಲ್ಲ. ಸರಕಾರ ಮತ್ತು ರೈತರ ನಡುವೆ ದೊಡ್ಡ ದೊಡ್ಡ ತಾಲೂಕದಾರರು, ಜಮೀನದಾರರು ಇದ್ದರು. ಕಂಪನಿಸರಕಾರದ ಮೊದಲಿದ್ದವರು ಜಮೀನದಾರರಿಂದ ಬರತಕ್ಕ "ಜುಮ್ಮಾ" ವಸೂಲಿಯನ್ನು ಆರ್ಥಿಕ ಪರಿಸ್ಥಿತಿಯನ್ನು ಅನುಲಕ್ಷಿಸಿ ಮಾಡುತ್ತಿದ್ದರು. ಕಂಪನಿಸರಕಾರಕ್ಕೆ ಇಂಥ ಅಂತಃಕರಣವಿರಲಿಲ್ಲ. ಅವರು ಜನರಿಂದ ಆದಷ್ಟು ಹಣವನ್ನು ಹಿಸುಕಿ ವಿಲಾಯತಿಗೆ ಹೇಗೆ ಕಳಿಸಬೇಕು ಎಂಬುದರ ಬಗ್ಗೆಯೇ ತಮ್ಮ ಬುದ್ಧಿಯನ್ನು ಖರ್ಚುಮಾಡುತ್ತಿದ್ದರು.

೧೭೯೭ರಲ್ಲಿ ಕಂಪನಿಸರಕಾರವು "ಕಲಕತ್ತೆಯಿಂದ ಕಾಲಪಿ"ಯ ವರೆಗೆ ಸುಮಾರು ಎಲ್ಲ ಪ್ರದೇಶದ ಜಮೀನದಾರಿ ಹಕ್ಕನ್ನು ಮೀರ ಜಾಫರನಿಂದ ಸಂಪಾದನೆ ಮಾಡಿತು! ಇದರೊಡನೆ ಸರಕಾರಿ ಆಡಳಿತದ ಜವಾಬ್ದಾರಿಯು ವಿಶೇಷವಾಗಿ ಕಂಪನಿಯಮೇಲೆ ಇರಲಿಲ್ಲವಾದ್ದರಿಂದ ಕಂಪನಿ ಅಧಿಕಾರಿಗಳ ಹೊಣೆಗೇಡಿ ವರ್ತನಕ್ಕೆ ಮಿತಿಯೇ ಇಲ್ಲದಾಯಿತು. ತಮ್ಮ ಅಧಿಕಾರಕ್ಷೇತ್ರದಲ್ಲಿ ಬರುವ ಅಸಂಖ್ಯ ಜಮೀನದಾರಿ ಆಸ್ತಿಗಳನ್ನು ಅವರು ಸೇಂದಿ ಅಂಗಡಿಗಳಂತೆ ಜಾಹೀರ ಲಿಲಾವಿಗೆ ಹಚ್ಚಿದರು. ಪ್ರಾಚೀನ ಕಾಲದಿಂದಲೂ ಆ ಆಸ್ತಿಗಳ ಒಡೆಯರಾಗಿದ್ದ ಎಷ್ಟೋ ಮಾನವಂತ ಮನೆತನಗಳು ಮೊರೆಯಿಟ್ಟರೂ ಉದ್ಧಾಮ ಇಂಗ್ಲೀಷರು ಅವರನ್ನು ತಿರಸ್ಕರಿಸಿದರು.

5. *Civil Disturbances in India*, S. B. Choudhury (1955).

ಮೊಗಲ ಸಾಮ್ರಾಜ್ಯವು ಒಡೆದು ನಿರ್ಮಾಣವಾದ ಅಸಂಖ್ಯ ರಾಜ್ಯಸಂಸ್ಥಾನಗಳಲ್ಲಿಯೂ ಕಂಪನಿಸರಕಾರವು ಕಾರಭಾರವನ್ನು ನಡೆಯಿಸಿತು. ಈ ರಾಜ್ಯಗಳಲ್ಲಿ ಒಕ್ಕಟ್ಟು ಇರಲಿಲ್ಲ! ರಾಷ್ಟ್ರಪ್ರೇಮವೂ ಅಷ್ಟಕಷ್ಟೆ. ದಕ್ಷಿಣದಲ್ಲಿ ಹೈದರಾಬಾದ, ಉತ್ತರದಲ್ಲಿ ಅಯೋಧ್ಯೆ, ಮಧ್ಯದಲ್ಲಿ ರಜಪೂತ, ಸೀಖ ಮತ್ತು ಮರಾಠಾ ರಾಜ್ಯಗಳು ಕಂಪನಿಸರಕಾರದ ಕೈಯಲ್ಲಿ ಸಿಕ್ಕು ಗೋಳಾಡಿದವು. ಸಹಾಯಕ ಸೈನಿಕ ಪದ್ಧತಿ ( ಸಬ್‌ಸಿಡಿಯರಿ ಸಿಸ್ಟಿಮ್ ) ಎಂಬ ಒಂದು ಕುಟಿಲ ನೀತಿಯಿಂದ ಇಂಗ್ಲೀಷರು ಹಿಂದುಸ್ತಾನದ ಪ್ರತಿಯೊಂದು ರಾಜ್ಯದ ಮೇಲೆ ತಮ್ಮ ಪ್ರಭುತ್ವವನ್ನು ಹೇರಿದರು. ಅಯೋಧ್ಯೆ, ಪೇಶ್ವೆ, ನಾಗಪೂರ ಮೊದಲಾದ ರಾಜ್ಯಗಳು ಇಂಗ್ಲೀಷರ ಲಾಲಸೆಗೆ ಪೂರಾ ತುತ್ತಾದವು. ಲಾರ್ಡ ಡಾಲಹೌಸಿಯು ಈ ರಾಜ್ಯಗಳನ್ನು ಆದಷ್ಟು ನುಂಗಿಯೇ ಬಿಡಬೇಕೆಂದು ಹೊಂಚುಹಾಕಿದ್ದನು. ಝಾಂಸಿಯಿಂದ ನರಗುಂದದ ವರೆಗೆ ನಿಪುತ್ರಿಕನಾದ ಒಬ್ಬ ಅರಸನಿಗೂ ದತ್ತಕದ ಸಲುವಾಗಿ ಕಂಪನಿಯಿಂದ ಅಪ್ಪಣೆಯು ದೊರೆಯಲಿಲ್ಲ. ಹೀಗಾಗಿ ಸಿಪಾಯಿ ಬಂಡಾಯವಾಗುವ ಮೊದಲು ಹತ್ತಿಪ್ಪತ್ತು ವರ್ಷಗಳಲ್ಲಿ ಎಷ್ಟೋ ಸಂಸ್ಥಾನಗಳನ್ನು ಡಾಲಹೌಸಿಯು ನುಂಗಿದ್ದನು. ಅದರೆ ಇದ್ದವರಿಗೂ ಸುಖವಿರಲಿಲ್ಲ. ಒಮ್ಮೆ ಇಂಗ್ಲೀಷರನ್ನು ಒಳಗೆ ಬರಮಾಡಿಕೊಂಡಿತೆಂದರೆ ಆ ರಾಜ್ಯಕ್ಕೆ ಶನಿಯ ಕಾಟವು ಪ್ರಾರಂಭವಾಗಿಯೇ ಬಿಡುತ್ತಿತ್ತು.

ಯಾವ ಅರಸನು ಇಂಗ್ಲೀಷರಿಗೆ ಶರಣುಹೋಗುವನೊ ಅಥವಾ ಅವರ ಸ್ನೇಹಯಾಚನೆಯನ್ನು ಮಾಡುವನೊ ಅವನಿಗೆ ಇಂಗ್ಲೀಷರು ಹಾಕುವ ಮೊದಲನೆಯ ಕರಾರೆಂದರೆ ಅವನು ಕಂಪನಿಯ ಸೈನ್ಯವನ್ನು ತನ್ನ ವೆಚ್ಚದಿಂದ ಇಟ್ಟುಕೊಳ್ಳಬೇಕು. ಸೈನ್ಯದ ಆಧಿಪತ್ಯ ಮಾತ್ರ ಕಂಪನಿಯ ಕಡೆಗೆ; ಅದರ ವೆಚ್ಚ ಸಂಸ್ಥಾನಿಕನದು; ಸೈನಿಕರು ಹಿಂದೀಯರು; ಯುದ್ಧ ಮಾಡುವದು ತಮ್ಮ ಬಂಧುಗಳ ವಿರುದ್ಧ; ಗೆದ್ದು ಗಳಿಸುವದು ಇಂಗ್ಲಂಡು! ಇಂಥದೊಂದು ಅಸಹ್ಯವಾದ ಪದ್ಧತಿಯನ್ನು ತಮ್ಮ ಒಳಜಗಳ ಹಾಗೂ ಮುತ್ಸದ್ದಿಗೇಡಿತನದ ಮೂಲಕ ನೂರಾರು ವರ್ಷ ನಮ್ಮ ಹಿರಿಯರು ಸಹಿಸಿದ್ದುಂಟು. ಇಂಗ್ಲೀಷರು ಇದೇ ಮಾರ್ಗದಿಂದ ಹಿಂದುಸ್ತಾನದ ಪ್ರಭುಗಳಾದರು.

ಎಷ್ಟೋ ರಾಜರಿಗೆ ಹೀಗೆ ಸೈನ್ಯದ ವೆಚ್ಚವನ್ನು ನಿರ್ವಹಿಸುವದು ಸಾಧ್ಯವಾಗಲಿಲ್ಲ. ಅದರಿಂದ ಬೀಳುವ ಬಾಕಿಯನ್ನು ಆ ರಾಜ್ಯಗಳ ಕೆಲವು ಜಿಲ್ಹೆಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿ ಇಂಗ್ಲೀಷರು ವಸೂಲ ಮಾಡಿಕೊಂಡರು. ನಿಜಾಮನು

ಇಂಗ್ಲೀಷರೊಡನೆ ಇಷ್ಟೊಂದು ಸ್ನೇಹದಿಂದ ಇದ್ದರೂ ವರ್ಹಾಡವನ್ನು ತನ್ನ ಬಾಕಿಯಲ್ಲಿಯೇ ಇಂಗ್ಲೀಷರಿಗೆ ಮುಟ್ಟಿಸಬೇಕಾಗಿ ಬಂದಿತು !

ಎಷ್ಟೋ ರಾಜರು ಈ ಸೈನ್ಯದ ಭಾರವನ್ನು ತಾಳಲಾರದೆ ಬಂಡೆಬ್ಬಿಸಿದರು. ೧೮೦೮ರಲ್ಲಿ ಹೈದರಾಬಾದ ದಿವಾಣನಾದ ರಾಜಾ ಮಹಿಪತಸಿಂಗನು ಈ ಪರಾವಲಂಬನದ ವಿರುದ್ಧ ಬಂಡಾಯ ಹೂಡಿದಾಗ ಅಲ್ಲಿಯ ಇಂಗ್ಲೀಷರ ಸೈನ್ಯವೇ ಅದನ್ನು ಸದೆಬಡೆಯಿತು. ಆ ಸಮಯಕ್ಕೆ ತಿರುವಾಂಕೂರಿನಲ್ಲಿಯೂ ಗಲಭೆಗಳಾದವು. ೧೮೪೪ ರಿಂದ ೧೮೫೦ರ ವರೆಗೆ ಸಾವಂತವಾಡಿಯಲ್ಲಿ ನಡೆದ ಬ್ರಿಟಿಶ್ ವಿರೋಧಿ ದಂಗೆಗಳಿಗೂ ಇದೇ ಕಾರಣವಾಗಿತ್ತು.

ಔಧ ರಾಜ್ಯವು ಕೊನೆಗೆ ಇದೇ ಪದ್ಧತಿಗೆ ಬಲಿಯಾಯಿತು. ಈ ಸೈನ್ಯವು ಎಷ್ಟೋ ಕಡೆಗೆ ತನ್ನ ರಾಜನ ವಿರುದ್ಧವೇ ಹೋರಾಡಿದ್ದುಂಟು. ಹೈದರಾಬಾದಿನಲ್ಲಿ ಸುರಪೂರ, ಗದ್ವಾಲ ಮೊದಲಾದ ಉಪರಾಜ್ಯಗಳನ್ನು ಅಂಕಿತದಲ್ಲಿಡುವದೂ ಈ ಸೈನ್ಯದ ಒಂದು ಮುಖ್ಯ ಹೇತುವಾಗಿದ್ದಿತು.

ಮೈಸೂರ ಮತ್ತು ಬಡೋದೆಗಳಲ್ಲಿಯೂ ಈ ಸಹಾಯಕ ಸೈನಿಕ ಪದ್ಧತಿಯು ಹಾಹಾಕಾರವನ್ನುಂಟುಮಾಡಿತು. ೧೭೯೯ರಲ್ಲಿ ಮೈಸೂರಿನ ಮೇಲೆ ಈ ಪದ್ಧತಿಯನ್ನು ಹೇರಲಾಯಿತು. ಮುಂದೆ ೧೮೩೧ರಲ್ಲಿ ಬೆಂಟಿಂಕನು ಆಂತರಿಕ ಅವ್ಯವಸ್ಥೆಯನ್ನು, ದಿವಾಳಿತನವನ್ನು ನೋಡಲಾರದೆ ಮೈಸೂರಿನ ಆಡಳಿತವನ್ನು ತಾನೆ ವಹಿಸಿಕೊಂಡನು.[೬]

*          *          *          *

ಉತ್ತರದಲ್ಲಿ ಪ್ಲಾಸಿ ಕಾಳಗ ಗೆದ್ದ ಬ್ರಿಟಿಶರಿಗೆ ದಕ್ಷಿಣದಲ್ಲಿ ಟಿಪ್ಪು ಸುಲ್ತಾನನು ಆಹುತಿಯಾದ ನಂತರ ಅವರ ಅನ್ಯಾಯದ ಮುಖ್ಯ ಹಾಗೂ ಮಹತ್ವದ ಅಧ್ಯಾಯವು ಪ್ರಾರಂಭವಾಯಿತು. ೧೮೫೭ರಲ್ಲಿ ಬಂಡಾಯ ಹೂಡಿದ ಹಿಂದೀ ಸೈನ್ಯ ಪಡೆಯ ಸಂಘಟನೆಯ ಪ್ರಾರಂಭವನ್ನು ೧೭೫೭ ರಲ್ಲಿಯೇ ಬ್ರಿಟಿಶರು ಮಾಡಿದರು. ಸ್ವಾರ್ಥವನ್ನು ಪೂರ್ಣ ಸಾಧಿಸಿಕೊಳ್ಳಲು ಸೈನ್ಯಶಕ್ತಿಯ ವಿಸ್ತಾರವು ಅವಶ್ಯವೆಂದು ತಿಳಿದು ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಗಳು ಹಿಂದೀ ದಳಗಳನ್ನು ಬೆಳೆಯಿಸಹತ್ತಿದರು. ಮೊಗಲ ಸಾಮ್ರಾಜ್ಯ

ಇದು ಮುಂದೆ ೧೮೮೧ರ ವರೆಗೆ ಹಾಗೆಯೆ ಉಳಿಯಿತು. ೧೮೫೭ರ ಬಂಡಾಯದಲ್ಲಿ ಮೈಸೂರು ಶಾಂತ ಉಳಿಯಲು ಇದೂ ಒಂದು ಮುಖ್ಯ ಕಾರಣ. Choudhury's "*Civil Disturbances in India.*"

ಹಾಗೂ ಮರಾಠಾ ರಾಜ್ಯಗಳು ಒಡೆದು ಉತ್ತರ ಹಿಂದುಸ್ತಾನದಲ್ಲಿ ಅಸಂಖ್ಯ ಸ್ವತಂತ್ರ ಹಾಗು ಪರಾಧೀನ ರಾಜ್ಯಗಳು, ಸಂಸ್ಥಾನಗಳು ಹಾಗು ಜಮೀನದಾರಿಗಳು ಹುಟ್ಟಿಕೊಂಡವು. ಇವುಗಳಲ್ಲಿ ಔಧ, ನಿಜಾಮ, ಸಾತಾರಾ ಮೊದಲಾದ ಶ್ರೇಷ್ಠ ರಾಜ್ಯಗಳಿಗೆ ಸಹ ಬ್ರಿಟಿಶರಷ್ಟು ಶಸ್ತ್ರಶಕ್ತಿಯಿರಲಿಲ್ಲ. ಆದರೆ ಈ ಮನೆತನಗಳಿಗೆ ತಮ್ಮ ಪೂರ್ವ ಇತಿಹಾಸದ ಅಭಿಮಾನವು ಸಾಕಷ್ಟಿದ್ದಿತು. ರಾಜಸತ್ತೆಯ ಪ್ರೇಮಿಗಳಾದ ಅಂದಿನ ಜನರಿಗೂ ತಮ್ಮ ಪ್ರಭುಗಳ ಬಗ್ಗೆ ತುಂಬಾ ಪ್ರೇಮ ಮತ್ತು ಭಕ್ತಿ ಇರುತ್ತಿದ್ದವು. ಮೊಗಲ ಸಿಂಹಾಸನ ಮೊದಲ್ಗೊಂಡ ಒಂದು ಚಿಕ್ಕ ಜಹಾಗೀರಿಯ ವರೆಗೆ ಎಷ್ಟೋ ರಾಜ್ಯಸಂಸ್ಥಾನಗಳು, ಶಸ್ತ್ರಶಕ್ತಿಯಿಂದ ಬಾಳುವ ದಿನಗಳು ಹೋದಮೇಲೆ ಸಹ, ನೂರಾರು ವರ್ಷ ಜನರ ವಿಶ್ವಾಸ-ನಿಷ್ಠೆಗಳ ಮೇಲೆಯೇ ಬಾಳಿಕೊಂಡಿವೆ. ತನ್ನ ಶಕ್ತಿಯು ಸಾಕಷ್ಟು ಬೆಳೆಯುವ ವರೆಗೆ ಈಸ್ಟ್ ಇಂಡಿಯಾ ಕಂಪನಿಯು ಈ ಯಾವ ರಾಜ್ಯಗಳನ್ನು ಕೆಣಕಲಿಲ್ಲ.

೧೭೫೭ರಿಂದ ಈಚೆಗೆ ಮೊಗಲ ಸಾಮ್ರಾಟನಿಗೆ ತನ್ನ ಕೆಂಪು ಕೋಟೆಯ ಹೊರಗೆ ಯಾವುದರ ಮೇಲೆಯೂ ಒಡೆತನವೆಂಬುದು ಉಳಿದಿರಲಿಲ್ಲ, ಆದರೂ ಹಿಂದುಸ್ತಾನದ ಅನೇಕ ರಾಜ್ಯಗಳಲ್ಲಿ ಮೊಗಲ ಸಿಂಹಾಸನದ ಹೆಸರಿನಿಂದಲೆ ನಾಣ್ಯಗಳನ್ನು ಮುದ್ರಿಸಿ ಚಲಾಯಿಸಲಾಗುತಿತ್ತು. ಪೇಶ್ವೆಯರು ತಮ್ಮ ಅತ್ಯಂತ ಪ್ರಭಾವಿ ಪರಿಸ್ಥಿತಿಯಲ್ಲಿದ್ದಾಗ ಸಹ ದಕ್ಷಿಣದಲ್ಲಿ ಛತ್ರಪತಿ ಹೆಸರಿನಿಂದಲೆ ಹುಕುಮುಗಳನ್ನು ಹೊರಡಿಸುತ್ತಿದ್ದರು. ಹೆಸರಿಗೆ ಮಾತ್ರ ಸಿಂಹಾಸನದ ಮೇಲೆ ಕುಳಿತ ಮೊಗಲ ಚಕ್ರವರ್ತಿಯನ್ನು ಕಾಣಲು ದಿಲ್ಲಿಗೆ ಬಂದಾಗ ಅವರ ಮಾಂಡಲಿಕರಂತೆ ಕಾಣಿಕೆಗಳನ್ನು ತಂದು ಮುಜುರೆ ಮಾಡಿ ದರಬಾರದಲ್ಲಿ ಕುಳಿತುಕೊಳ್ಳಲು ಹೇಳುವ ವರೆಗೆ ಕೂಡುತ್ತಿರಲಿಲ್ಲ. ಮೊಗಲ ದರಬಾರದ ದಿವಾಣಿ ಹಕ್ಕುಗಳನ್ನು ಸಂಪಾದನೆ ಮಾಡಲು ಈಸ್ಟ ಇಂಡಿಯಾ ಕಂಪನಿಯ ಅಧಿಕಾರಿಗಳು ಬಹುದಿನ ಪ್ರಯಾಸ ಪಡಬೇಕಾಯಿತು. ಅದರಲ್ಲಿ ಅವರು ಯಶಸ್ವಿಯಾಗುವ ವರೆಗೆ ಭಾರತದ ಇತರ ರಾಜ್ಯಗಳಲ್ಲಿ ಅವರ ಆಟವು ವಿಶೇಷ ನಡೆಯಲೇ ಇಲ್ಲ. ೧೮೩೫ರ ವರೆಗೆ ಈಸ್ಟ ಇಂಡಿಯಾ ಕಂಪನಿಯ ಗವರ್ನರ ಜನರಲ್ಲನು ಮೊಗಲ ಬಾದಶಹನ ಮುಂದೆ ಆಸನ ಗ್ರಹಿಸುತಿರಲಿಲ್ಲ. ಓರ್ವ ಗವರ್ನರ ಜನರಲ್ಲನು ಕುಳಿತುಕೊಳ್ಳಲು ಕೇಳಿದ ಅಪ್ಪಣೆಯನ್ನು ಮೊಗಲ ಬಾದಶಹನು ತಿರಸ್ಕರಿಸಿದನು !

ಪ್ಲಾಸಿ ಕಾಳಗವು ಮುಗಿದ ಕೂಡಲೆ ಕ್ಲೈವನು ಹತ್ತು ಕಂಪನಿಗಳಿದ್ದ ಒಂದು ಚಿಕ್ಕ ಹಿಂದಿ ಸೈನ್ಯವನ್ನು ಸ್ಥಾಪನೆ ಮಾಡಿದನು. ಈ ದಳಕ್ಕೆ ಓರ್ವ ಐರೋಪ್ಯ ಸೇನಾಪತಿ ಹಾಗೂ ಓರ್ವ ಹಿಂದೀ ಸೇನಾಪತಿ ಇರುತ್ತಿದ್ದರು. ಒಂದೊಂದು ಕಂಪನಿಯಲ್ಲಿ ಎಪ್ಪತ್ತು ಸಿಪಾಯರು, ಐದು ಹವಾಲದಾರರು ಮತ್ತು ನಾಲ್ಕು ನಾಯಕರೂ ಇರುತ್ತಿದ್ದರು.[7] ಇದು ಮುಂದೆ ಜರೂರಿಯಂತೆ ಬೆಳೆಯುತ್ತಲೆ ನಡೆಯಿತು. ೧೮೫೭ರ ಸುಮಾರಿಗೆ ಅಂದಿನ ಬಂಗಾಲ ಸೈನ್ಯದಲ್ಲಿ ೧|| ಲಕ್ಷ ಹಿಂದೀಯರು ಮತ್ತು ೪೦,೦೦೦ ಯುರೋಪಿಯನ್ನರು ಇದ್ದರು.

೧೮೦೦ರ ಈಚೆಗೆ ಇಂಗ್ಲೀಷರ ಸೈನ್ಯವೇ ಭಾರತದಲ್ಲಿ ಅತ್ಯಂತ ಶಿಸ್ತಿನದು ಹಾಗು ಬಲಿಷ್ಠವು ಆಗಿದ್ದಿತು. ಆದ್ದರಿಂದ ಒಂದೊಂದೆ ರಾಜ್ಯಗಳು ಇಂಗ್ಲೀಷ ಪ್ರಭಾವ ದೀಪಕ್ಕೆ ಪತಂಗಗಳು ಮರುಳಾದಂತೆ ಆಗಹತ್ತಿದವು. ೧೮೧೮ರಲ್ಲಿ ಪೇಶ್ವೆ ಬಾಜೀರಾಯನು ತನ್ನ ಹಕ್ಕುಗಳನ್ನು ಎಂಟು ಲಕ್ಷ ರೂಪಾಯಿ ಪೆನ್ಶನಿಗೆ ಇಂಗ್ಲೀಷರ ಸ್ವಾಧೀನಪಡಿಸಿದನು. ೧೮೩೦ರ ಸುಮಾರಿಗೆ ರಣಜಿತಸಿಂಗನ ಮಗನಿಂದ ಪಂಜಾಬವನ್ನು ತೆಗೆದುಕೊಳ್ಳಲಾಯಿತು. ಆಗಲೆ ಮುಂದೆ ಮುಂಬೈ ಗವರ್ನರರು ಸಾತಾರಾ ಅರಸನಾದ ಪ್ರತಾಪಸಿಂಗನನ್ನು ಕಾಶೀಯಾತ್ರೆಗೆ ಕಳಿಸಿದರು. ನಾಗಪೂರ ಭೋಸಲೆ ಮನೆತನದ ಕಿರೀಟವು ನೆಲಕ್ಕುರುಳಿತು. ಕೊಡಗು ಕಿತ್ತೂರ ರಾಜಮನೆತನಗಳೂ ಆಗ ನಷ್ಟವಾದವು. ಉತ್ತರದಲ್ಲಿ ಔಧ (ಅಯೋಧ್ಯೆ) ಅರಸರನ್ನು ಬಲವಂತದಿಂದ ಇಂಗ್ಲೀಷರು ತಳ್ಳಿಹಾಕಿದರು. ದಕ್ಷಿಣದಲ್ಲಿ ಇಂಗ್ಲೀಷರು ಹೇಳಿದಂತೆ ನಡೆದುಕೊಂಡು ನಿಜಾಮನೊಬ್ಬನು ತನ್ನ ರಾಜ್ಯವನ್ನುಳಿಸಿಕೊಳ್ಳಬೇಕಾದರೆ ಅವನಿಗೆ ಸಾಕುಬೇಕಾಯಿತು.

ರಾಜರು ತಳ್ಳಲ್ಪಟ್ಟರು; ಅವರ ಖಜಾನೆ ಆಡಳಿತಗಳು ಆಂಗ್ಲರ ಕೈವಶ ವಾದವು; ರಾಜರ ಕೋಟೆ ಕೊತ್ತಲಗಳು ಉದ್ವೇಶಪೂರ್ವಕವಾಗಿ ನೆಲಸಮ ಮಾಡಲ್ಪಟ್ಟವು; ಅವರ ಅರಮನೆಗಳ ಲೂಟಿ ನಡೆದವು; ರಾಣಿಯರ ಮೈ ಮೇಲಿನ ಆಭರಣಗಳನ್ನು ಸಹ ಇಂಗ್ಲೀಷರು ಬಿಟ್ಟಿಲ್ಲ. ರಾಜರ ಆನೆ, ಕುದುರೆ, ಒಂಟೆಗಳನ್ನು ಪೇಟೆಯಲ್ಲಿ ಲಿಲಾವು ಮಾಡಿದ್ದಾರೆ! ಯಾವದೇ ರಾಜಕೀಯ ಕಾರಣದಿಂದ ಒಂದು ರಾಜ್ಯವು ತಮ್ಮ ಕೈವಶವಾಗಿದ್ದರೂ ಅವರ ರಾಜ ಮನೆತನದ ಗೌರವ ಮತ್ತು ಖಾಸಗಿ ಆಸ್ತಿಗಳನ್ನು ಅವರಿಗೆ ಬಿಟ್ಟುಬಿಡುವಷ್ಟು ಉದಾರತನವನ್ನು ಸಹ ಇಂಗ್ಲೀಷರು ತೋರಿಸಲಿಲ್ಲ.

7. Charles Ball, Vol. I, *Introduction.*

ಇದರಿಂದ ಧೀರರೂ ಶೂರರೂ ಉದ್ದಾಮರೂ ಆದ ಅರಸುಮನೆತನದವರಿಗೆ ಎಂದಿಲ್ಲದ ಅಭಿಮಾನಭಂಗವಾಗಿ ಕಂಪನಿಸರಕಾರದ ಮೇಲೆ ಇದ್ದ ಎಲ್ಲ ವಿಶ್ವಾಸವೂ ಹೋಯಿತು. ಅವರ ಆಶ್ರಿತರೂ ಇಂಗ್ಲೀಷರ ಮೇಲೆ ಸಿಟ್ಟಾದರು. ರಾಜರ ಬಗ್ಗೆ ಅಭಿಮಾನಿಗಳಾಗಿದ್ದ ಪ್ರಜೆಗಳಿಗೂ ಇಂಗ್ಲೀಷರ ಮೇಲೆ ವಿಶ್ವಾಸವು ಉಳಿಯಲಿಲ್ಲ. ಆದರೆ ಎಲ್ಲರೂ ಸಮಯ ಕಾಯ್ದುಕುಳಿತರು; ಸಿಪಾಯಿ ಬಂಡಾಯವು ಅವರಿಗೆ ಒಂದು ಶ್ರೇಷ್ಠವಾದ ಅವಕಾಶವನ್ನು ಕಲ್ಪಿಸಿಕೊಟ್ಟಿತು.

ತಮ್ಮ ಕಸಬನ್ನು ಕಳೆದುಕೊಂಡ ಹಿಂದೀ ವ್ಯಾಪಾರಸ್ಥರು ಭೂಸಾಗುವಳಿಗೆ ಕೈಹಾಕಬೇಕಾಯಿತು. ಅತ್ತ ಸಂಸ್ಥಾನಗಳು ಹೋದಂತೆ ಅಲ್ಲಿಯ ಉಚ್ಚ ವರ್ಗದ ನೌಕರರೂ ತಮ್ಮ ಕೆಲಸ ಕಳೆದುಕೊಂಡರು; ಆದರೆ ಹೊಸದೇನನ್ನೂ ಬ್ರಿಟಿಶರು ಅವರಿಗೆ ಕಲ್ಪಿಸಿಕೊಡಲಿಲ್ಲ. ಯಾಕಂದರೆ ಉಚ್ಚ ಅಧಿಕಾರಸ್ಥಾನಗಳನ್ನು ಹಿಂದೀಯರಿಗೆ ಕೊಡಬಾರದೆಂಬುದೇ ಬ್ರಿಟಿಶರ ಧೋರಣೆಯಾಗಿತ್ತು.

ಭಾರತದಲ್ಲಿಯ ಇಂಗ್ಲೀಷರ ಆಳಿಕೆಯ ಬಗ್ಗೆ ಕಾರ್ಲ ಮಾರ್ಕ್ಸನು ೧೮೫೩ ರಲ್ಲಿ ಹೀಗೆ ಹೇಳಿದ್ದಾನೆ—"ಭಾರತೀಯ ಸಮಾಜದ ಇಡಿಯ ಚೌಕಟ್ಟನ್ನೇ ಇಂಗ್ಲಂಡು ಮುರಿದುಹಾಕಿದೆ. ಆದರೆ ಪುನರ್ರಚನಾತ್ಮಕ ಚಟುವಟಿಕೆಗಳ ಲಕ್ಷಣಗಳು ಇನ್ನೂ ಎಲ್ಲಿಯೂ ತೋರಲೊಲ್ಲವು. ಹಳೆಯ ಜಗತ್ತು ಮಾಯವಾಗಿಹೋಯಿತು. ಹೊಸ ಜೀವನ ಇನ್ನೂ ಬರಲಿಲ್ಲ; ಇದರಿಂದ ಹಿಂದೀಯರು ವಿಶೇಷ ಖಿನ್ನರಾಗಿದ್ದಾರೆ. ಬ್ರಿಟನ್ನು ಇಂದು ತಾನು ಆಳುವ ಹಿಂದುಸ್ತಾನವನ್ನು ಅದರ ಹಳೆಯ ಪರಂಪರೆ ಮತ್ತು ಇತಿಹಾಸಗಳಿಂದ ಸಂಪೂರ್ಣ ಬೇರ್ಪಡಿಸಿಬಿಟ್ಟಿದೆ."[8] ಸರಕಾರಿ ಆಡಳಿತಕ್ಕೆ ತಾವು ಹೊಣೆಗಾರರೆಂದು ಕಂಪನಿ ಅಧಿಕಾರಿಗಳು ಮೊದಲಿನಿಂದಲೂ ತಿಳಿದಿರಲಿಲ್ಲ. ಜನರನ್ನು ಗುತ್ತಿಗೆ ವ್ಯಾಪಾರದಿಂದ ಹಾಗೂ ಜಮೀನುಗಳ ಲಾವಣಿ ಲಿಲಾವಿನಿಂದ ಸುಲಿಯಲು ಮಾತ್ರ ತಾವು ಬಾಧ್ಯಸ್ಥರೆಂದು ಅವರು ನಂಬಿದ್ದರು. ಈ ನಿರಂಕುಶ ಅಧಿಕಾರದ ಅನ್ಯಾಯವು ಗಮನಕ್ಕೆ ಬಂದಾಗೆಲ್ಲ ಬ್ರಿಟಿಶ್ ಪಾರ್ಲಿಮೆಂಟು ಕಂಪನಿಯ ಅಧಿಕಾರದ ಮೇಲೆ ನಿರ್ಬಂಧ ಹೇರುವ 'ರೆಗ್ಯುಲೇಶನ್' ಕಾಯದೆಗಳನ್ನು ಮಾಡುತ್ತಲೆ ಇತ್ತು. ೧೭೭೩ರಲ್ಲಿ ಇಂಥ ಒಂದು ಶಾಸನವನ್ನು ಬ್ರಿಟಿಶ್ ಪಾರ್ಲಿಮೆಂಟು ಸ್ವೀಕರಿಸಿ ಕಂಪನಿಯ ಒಳಆಡಳಿತವನ್ನು ತಕ್ಕಮಟ್ಟಿಗೆ ಪುನರ್ಘಟಿಸಿತು. ಆದರೂ ಕಾರ್ಯ-ವಾಹಕ ಅಧಿಕಾರವು ಕಂಪನಿಯ ಕೈಯಲ್ಲಿಯೇ ಉಳಿಯಿತು.

---

8. *Civil Disturbances in India*, page 218.

ಮುಂದೆ ೧೭೮೪ರಲ್ಲಿ "ಪಿಟ್ಸ್ ಇಂಡಿಯಾ ಆ್ಯಕ್ಟ" ಬಂದಿತು. ಈ ಕಾಯದೆಯ ಮೇರೆಗೆ ಸರಕಾರದವರು ಡೈರೆಕ್ಟರರ ಬೋರ್ಡಿನ ಮೇಲೆ ತಮ್ಮದೊಂದು ನಿಯಂತ್ರಕ ಮಂಡಳಿವನ್ನು (ಬೋರ್ಡ ಆಫ್ ಕಂಟ್ರೋಲ) ರಚನೆ ಮಾಡಿಕೊಂಡರು. ಕಂಪನಿಯ ಮುಲ್ಕಿ ಮತ್ತು ಸೈನಿಕ ಆಡಳಿತದ ಮೇಲು ತಪಾಸಣೆಯನ್ನು ನಡೆಸಲು ಈ ನಿಯಂತ್ರಣ ಮಂಡಳಿದವರಿಗೆ ಅಧಿಕಾರವಿತ್ತು. ಅರ್ಥಿಕ ಮಂತ್ರಿ, ಒಬ್ಬ ಸೆಕ್ರೆಟರಿ ಆಫ್ ಸ್ಟೇಟ ಮತ್ತು ಅರಸನು ನಿಯಮಿಸಿದ ನಾಲ್ವರು ಪ್ರಿವ್ಹಿ ಕೌನ್ಸಿಲ ಸದಸ್ಯರು ಈ ಮಂಡಳಿದ ಸದಸ್ಯರಿದ್ದರು. ಆದರೂ ಕಾರ್ಯವಾಹಕ ಅಧಿಕಾರವು ಕಂಪನಿಯ ಕೈಯಲ್ಲಿಯೇ ಉಳಿಯಿತು.

ಪಿಟ್ಸ್ ಇಂಡಿಯಾ ಆ್ಯಕ್ಟಿನಲ್ಲಿ, "ಹಿಂದುಸ್ತಾನದಲ್ಲಿ ನಮ್ಮ ರಾಜ್ಯವಿಸ್ತಾರ ಮಾಡುವಂಥ ಯೋಜನೆಗಳನ್ನು ಕೈಕೊಳ್ಳುವದು ಈ ರಾಷ್ಟ್ರದ ಇಚ್ಛೆ, ಗೌರವ ಮತ್ತು ಧೋರಣೆಗಳಿಗೆ ಸಂಪೂರ್ಣ ವಿರೋಧಿಯಾಗಿದೆ" ಎಂದು ಸ್ಪಷ್ಟ ಉಲ್ಲೇಖವಿದೆ. ಆದರೆ ಕಂಪನಿ ಅಧಿಕಾರಿಗಳಲ್ಲಿ ಯಾರೂ ಈ ಮಾರ್ಗದರ್ಶನಕ್ಕೆ ಕಿವಿಗೊಡಲಿಲ್ಲ. (ಸಿಂಹ ಮತ್ತು ಬ್ಯಾನರ್ಜಿ. ಪುಟ ೫೧೩)

೧೭೯೩, ೧೮೧೩ನೆಯ ಇಸ್ವಿಗಳಲ್ಲಿಯೂ ಮತ್ತೆ ಕೆಲವು ಕಾಯದೆಗಳು ಬಂದವು. ೧೮೧೩ರಲ್ಲಿ ಭಾರತದೊಡನೆ ಕಂಪನಿಗೆ ಇದ್ದ ಗುತ್ತಿಗೆ ವ್ಯಾಪಾರದ ಅಧಿಕಾರವನ್ನೂ ಬ್ರಿಟಿಶ್ ಪಾರ್ಲಿಮೆಂಟು ಸೆಳೆದುಕೊಂಡಿತು. ಈಸ್ಟ ಇಂಡಿಯಾ ಕಂಪನಿಯು ಮುಖ್ಯವಾಗಿ ವ್ಯಾಪಾರಮಾಡಲು ಭಾರತಕ್ಕೆ ಬಂದಿತ್ತು. ಆ ವ್ಯಾಪಾರದಿಂದ ಭಾರತದಿಂದ ಬ್ರಿಟನಿಗೆ ಹರಿಯುತ್ತಿದ್ದ ಹೊನ್ನಿನ ಹೊಳೆಯನ್ನು ಬ್ರಿಟಿಶ್ ಸರಕಾರವು ಕಣ್ಣಾರೆ ಕಂಡಿತ್ತು. ಆದ್ದರಿಂದ ಏನೇ ಕಾಯದೆಯನ್ನು ಮಾಡಿದರೂ ಬ್ರಿಟಿಶ್ ಸರಕಾರಿ ವರ್ಗಗಳು ಕಂಪನಿಯ ಅನ್ಯಾಯಗಳತ್ತ ಕಣ್ಣೆತ್ತಿ ನೋಡುತಿರಲಿಲ್ಲ.

೧೮೫೬ರಲ್ಲಿ ಲಾರ್ಡ ಡಾಲಹೌಸಿಯು ನಿವೃತ್ತನಾಗಿ ಬ್ರಿಟನ್ನಿಗೆ ಮರಳುವ ವರೆಗೆ ಕಂಪನಿಸರಕಾರದ ಅನ್ಯಾಯವು ಅವ್ಯಾಹತವಾಗಿ ನಡೆದೇ ನಡೆಯಿತು.

# ಮೂರನೆಯ ಅಧ್ಯಾಯ

## ಬಂಡಾಯದ ಒಳಸಂಚು

**೧೮೫೭**ರಿಂದ ಸಿಪಾಯಿ ಬಂಡಾಯವು ಎರಡು ವರ್ಷ ಅತ್ಯಂತ ಭೀಕರ ಸ್ವರೂಪವನ್ನು ತಾಳಿ ೧೮೫೯ರ ಮಧ್ಯದಲ್ಲಿ ತಾತ್ಯಾ ಟೋಪಿಯ ಅಂತ್ಯದೊಡನೆ ನಂದಿಹೋಯಿತು. ಆಂಗ್ಲ ಮತ್ತು ಹಿಂದೀ ಸಮಾಜಶಾಸ್ತ್ರಜ್ಞರು, ರಾಜಕಾರಣಿಗಳು ಮತ್ತು ಇತಿಹಾಸಕಾರರು ಕೂಡಲೆ ಈ ದುರ್ಘಟನೆಯನ್ನು ಆದಿಯಿಂದ ಅಂತ್ಯದ ವರೆಗೂ ಸೂಕ್ಷ್ಮವಾಗಿ ಪರಿಶೀಲನೆಯನ್ನು ಮಾಡತೊಡಗಿದರು; ಇನ್ನೂ ಸಹ ಮಾಡುತ್ತಿದ್ದಾರೆ.

ಬಂಡಾಯವು ಕೇವಲ ಸೈನ್ಯದಲ್ಲಿ ಮಾತ್ರವಿದ್ದಿತೆ? ಅಥವಾ ಅದೊಂದು ಪ್ರಚಂಡ ಜನತಾಂದೋಲನವಾಗಿದ್ದಿತೆ? ಬಂಡಾಯಕ್ಕೆ ಕಾರಣ ಏನು? ಭಂಗವಾದ ರಾಷ್ಟ್ರಾಭಿಮಾನವೆ? ಇಲ್ಲವೆ ಧರ್ಮಾಭಿಮಾನವೆ? ಇಲ್ಲವೆ ಸ್ವಾಭಿಮಾನವೆ? ಬಂಡಾಯಕ್ಕೆ ಮೊದಲು ಏನಾದರೊಂದು ದೊಡ್ಡ ಒಳಸಂಚು ನಡೆಸಲ್ಪಟ್ಟಿತೆ? ಮತ್ತು ಇದೇ ಒಳಸಂಚಿನ ಪ್ರತಿಫಲವಾಗಿ ಬಂಡಾಯವು ನಡೆಯಿತೆ? ಹೀಗೆ ಅನೇಕ ಪ್ರಶ್ನೆಗಳನ್ನು ರಾಜಕಾರಣಿಗಳು ಮತ್ತು ಇತಿಹಾಸಕಾರರು ಪಾಂಡಿತ್ಯಪೂರ್ಣವಾಗಿ ಚರ್ಚೆ ಮಾಡುತ್ತಿದ್ದಾರೆ.

ಹಿಂದುಸ್ತಾನವು ಸ್ವತಂತ್ರವಾದ ಮೇಲೆ ಮತ್ತೆ ಈ ಪ್ರಶ್ನೆಗೆ ಒಂದು ಬಗೆಯ ಹೊಸತನವು ಪ್ರಾಪ್ತವಾಗಿದೆ. ಇದಕ್ಕೆ ಕೆಲವು ಮಹತ್ವದ ಕಾರಣಗಳೂ ಉಂಟು. ಹಿಂದುಸ್ತಾನದಲ್ಲಿ ಬ್ರಿಟಿಶರು ಇರುವ ವರೆಗೆ ಬಂಡಾಯದ ಬಗ್ಗೆ ಹಿಂದೀಯರು ಬಿಚ್ಚು ಮನಸ್ಸಿನಿಂದ ಚರ್ಚೆ ಮಾಡುವ ಪರಿಸ್ಥಿತಿಯೇ ಇರಲಿಲ್ಲ. ಇದರಿಂದ ೧೮೫೭ರ ಬಂಡಾಯದ ಬಗ್ಗೆ ಹಿಂದೀಯರ ಅಭಿಪ್ರಾಯವೇನು ಮತ್ತು ಹಿಂದೀಯರು ಈ ಘಟನೆಗಳ ಅರ್ಥವನ್ನು ಹೇಗೆ ಮಾಡುತ್ತಾರೆ ಎಂಬುದೇ ಗೊತ್ತಾಗುವಂತಿರಲಿಲ್ಲ.

ಬಂಡಾಯದ ಕಥೆಯನ್ನು ಆಂಗ್ಲರು ಸಾಕಷ್ಟು ಪ್ರಮಾಣದಲ್ಲಿ ಬರೆದಿದ್ದಾರೆ. ಆದರೆ ಅವರು ಹಿಂದೀಯರ ಮುಖಕ್ಕೆ ಮಸಿ ಬಳಿದು ಬರೆದಿರುವರು. ಇತ್ತ ಹಿಂದೀಯರಿಗೆ ತಮ್ಮ ವಿಚಾರಗಳಿಗೆ ಅನುಕೂಲವಾಗುವಂತಹ ಸತ್ಯಾಂಶಗಳನ್ನು

ಹೊರಗೆಡವಲು ಬ್ರಿಟಿಶ ಸರಕಾರವು ಅನುಕೂಲ ಮಾಡುತ್ತಿರಲಿಲ್ಲ. ಸರಕಾರದ ಹೆದರಿಕೆಯಿಂದ ಬಂಡಾಯದ ವಿಷಯದಲ್ಲಿ ತಮ್ಮ ಹತ್ತಿರವಿದ್ದ ಕಾಗದಪತ್ರಗಳನ್ನು ಖಾಸಗಿ ವ್ಯಕ್ತಿಗಳು ಬಹುತರವಾಗಿ ನಾಶಪಡಿಸಿದ್ದಾರೆ!

ಭಾರತವು ಸ್ವತಂತ್ರವಾದೊಡನೆ ಸರಕಾರಿ ಕಾಗದಪತ್ರಗಳೂ ಸ್ವಾಭಾವಿಕವಾಗಿ ಹಿಂದೀ ಸಂಶೋಧಕರಿಗೆ ಮುಕ್ತವಾದವು.[1] ೧೮೫೭ರ ಶತಾಬ್ದಿಯ ಈ ಸಮಯದಲ್ಲಿ ಬಂಡಾಯದ ಘಟನೆಗಳಿಗೆ ಒಂದು ಐತಿಹಾಸಿಕ ಮಹತ್ವವು ಪ್ರಾಪ್ತವಾಗಿರುವದು. ಬ್ರಿಟಿಶರು ಸ್ವಸಂತೋಷದಿಂದ ತಮ್ಮ ದೇಶಕ್ಕೆ ಹೊರಟುಹೋಗಿದ್ದರಿಂದ ೧೮೫೭ರ ದ್ವೇಷಾಸೂಯೆಗಳ ಪುನರಾವತಾರವಾಗುವ ಪ್ರಸಂಗವೂ ಈಗ ಉಳಿದಿಲ್ಲ. ಮತ್ತು ಭಾರತವು ತನ್ನ ಎಷ್ಟೋಕಾಲದ ಹಂಬಲವಾಗಿದ್ದ ಸ್ವಾತಂತ್ರ್ಯವನ್ನು ಅದರ ಪೂರ್ಣ ಸ್ವರೂಪದಲ್ಲಿ ಪಡೆದುಕೊಂಡ ಮೂಲಕ ಬಂಡಾಯದ ಕಥೆಗಳಿಂದ ನಮ್ಮ ಸ್ವಾತಂತ್ರ್ಯವೀರರನ್ನು ಹುರಿದುಂಬಿಸುವ ಸಮಯವೂ ಈಗ ಗತಿಸಿಹೋಗಿದೆ.

ಬಂಡಾಯದ ಇತಿಹಾಸದಲ್ಲಿ ಕೆಲವು ನಮಗೆ ರುಚಿಸದಂಥ ವಿಷಯಗಳು ಈಗ ಬಯಲಿಗೆ ಬರಬಹುದು; ಆದರೆ ಅವುಗಳಿಂದ ನಮ್ಮ ಭವಿಷತ್ತಿಗಾಗಿ ನಾವು ಪಾಠ ಕಲಿಯಬೇಕೆ ಹೊರತು ಅವುಗಳನ್ನು ಮುಚ್ಚುವದು ಅಥವಾ ಅಪಾರ್ಥ ಮಾಡುವದು ಅನುಚಿತ.

ಇತ್ತೀಚಿನ ಇತಿಹಾಸಕಾರರು[2] ಸಿಪಾಯಿ ಬಂಡಾಯದಲ್ಲಿ ಅಖಿಲ ಭಾರತ ಪ್ರಮಾಣದ ಯಾವ ಒಂದೇ ಒಳಸಂಚು ಕಂಡುಬರುವದಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಶತಮಾನದ ಮೊದಲುಭಾಗದಲ್ಲಿ ಇತಿಹಾಸ ಬರೆದ ಕೆಲವರು[3] ಬಂಡಾಯದ ಒಳಸಂಚು ಬಹಳದಿನಗಳಿಂದ ನಡೆದಿತ್ತೆಂದು ಆಧಾರಗಳನ್ನು ತೋರಿಸಿದ್ದಾರೆ. ಇಷ್ಟೇ ಅಲ್ಲ; ಅನೇಕ ಅವ್ಯಾಹತವಾದ ಅನ್ಯಾಯಗಳಿಗೆ ಬೇಸತ್ತು ಬ್ರಿಟಿಶರನ್ನು ಭಾರತದಿಂದ ಓಡಿಸದೆ ದೇಶೋದ್ಧಾರವಿಲ್ಲೆಂದು ತುಂಬಾ ಮನಗಂಡು ಕೆಲವು ಮುಂದಾಳುಗಳು ಈ ಕಾರ್ಯವನ್ನು ಕೈಕೊಂಡರೆಂದು ಅವರ

---

1. ಅಧಿಕಾರವನ್ನು ಬಿಡುವ ಮುಂಚೆ ಬ್ರಿಟಿಶರು ಎಷ್ಟೋ ಖಾಸಗಿ ಕಾಗದಗಳನ್ನು ನಾಶಗೊಳಿಸಿ ಹೋದರು.
2. ಭಾರತ ಸರಕಾರದ ನೆರವಿನಿಂದ ೧೮೫೭ರ ಕಥೆಯನ್ನು ಬರೆದ ಶ್ರೀ. ಸುರೇಂದ್ರನಾಥ ಸೇನರು ಇವರಲ್ಲಿ ಒಬ್ಬರು.
3. ವ್ಹಿ. ಡಿ. ಸಾವರಕರ ಪ್ರಭೃತಿಗಳು.

ಅಭಿಪ್ರಾಯವಾಗಿದೆ. ಇಂಗ್ಲೀಷ ಬರಹಗಾರರು ಈ ಬಗ್ಗೆ ವ್ಯಕ್ತಮಾಡಿದ ಅಭಿಪ್ರಾಯಗಳೂ ವೈಶಿಷ್ಟ್ಯಪೂರ್ಣವಾಗಿವೆ. ೧೮೫೭ರ ಘಟನೆಗಳಿಗೆ ಕನಿಷ್ಠ ಅರ್ಧಶತಮಾನದ ಇತಿಹಾಸವಿತ್ತು. ದಕ್ಷಿಣ ಹಿಂದುಸ್ತಾನದ ಸೈನ್ಯದಳಗಳಲ್ಲಿ ಮತ್ತು ಜಮೀನದಾರರಲ್ಲಿ ಚಿಕ್ಕ ಬಂಡಾಯಗಳು ೧೮೦೦ರಿಂದಲೇ ಆಗಹತ್ತಿದ್ದವು.[4] ಮತ್ತು ಹಿಂದೀಯರ ಅಂತರಂಗದ ಬಗ್ಗೆ ಅಷ್ಟೊಂದು ತಿಳುವಳಿಕೆ ಅಥವಾ ಸಹಾನುಭೂತಿಯು ಆಂಗ್ಲರಲ್ಲಿರಲಿಲ್ಲ. ಹೀಗಾಗಿ ಹಿಂದೀ ಸೈನಿಕರ ಮತ್ತು ಸಂಸ್ಥಾನಿಕರ ಪ್ರತಿಯೊಂದು ಚಲನವಲನವನ್ನೂ ಸಂಶಯದಿಂದ ಕಾಣುವದೊಂದು ಅವರ ಮನೋವೃತ್ತಿಯಾಗಿಹೋಗಿತ್ತು.

ನಡೆದ ಪ್ರಸಂಗಗಳೆಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲನೆ ಮಾಡಿ ನೋಡಿದರೆ ೧೮೫೭ನೆಯ ಘಟನೆಗಳೆಲ್ಲವೂ ಒಂದೇ ಒಳಸಂಚಿನ ಫಲಶ್ರುತಿಯಾಗಿರದಿದ್ದರೂ ಯಾವ ಒಳಸಂಚು ಇಲ್ಲದೆ ಇವು ತಾವಾಗಿಯೇ ನಡೆದವು ಎಂಬುದೂ ತಪ್ಪಾಗುವದು. ಹಿಂದೀ ಸೈನ್ಯ ದಳಗಳು ತಮ್ಮ ಸಲುವಾಗಿಯೇ ಒಂದು ಪ್ರತ್ಯೇಕ ಒಳಸಂಚನ್ನು ಮಾಡಿಕೊಂಡಿರುವ ಚಿಹ್ನೆಗಳು ಒಡೆದು ಕಾಣುತ್ತವೆ.[5] ಅಸಂತುಷ್ಟರಾದ ಜಮೀನದಾರರು, ಜಹಾಗೀರದಾರರು ಮತ್ತು ರಾಜಮಹಾರಾಜರು ತಮ್ಮ ಸಲುವಾಗಿ ಒಂದು ಪ್ರತ್ಯೇಕ ಒಳಸಂಚನ್ನು ನಡೆಸಿರುವದು ತುಂಬಾ ಅಸಂಭವನೀಯವೆಂದು ಹೇಳಲಾಗದು. ನಾನಾಸಾಹೇಬ ಪೇಶ್ವೆಯ ಘೋಷಣಾಪತ್ರಗಳು ದಕ್ಷಿಣ ಭಾರತದ ವರೆಗೆ ಎಲ್ಲ ಕಡೆಗೂ ದೊರೆತಿವೆ. ಇವುಗಳಲ್ಲಿ ಎಲ್ಲವೂ ನಿಜವಿಲ್ಲದೆ ಇದ್ದರೂ ಕೆಲವಾದರೂ ದೂರದೂರದ ದೇಶಕ್ಕೆ ಹೋಗಿ ಮುಟ್ಟಿರಲಿಕ್ಕೇಬೇಕು. ಇದರಿಂದ ರಾಷ್ಟ್ರದ ಬೇರೆ ಬೇರೆ ಶಕ್ತಿಗಳನ್ನು ಇಂಗ್ಲೀಷರ ವಿರುದ್ಧ ಒಡೆಯಿಸಿಕೊಳ್ಳುವ ಪ್ರಯತ್ನಗಳು ನಡೆದೇ ಇದ್ದವೆಂದು ಸ್ಪಷ್ಟವಾಗುತ್ತದೆ.

---

4. ವೆಲ್ಲೂರಿನಲ್ಲಿ ೧೮೦೬ರಲ್ಲಿ, ಮದ್ರಾಸಿನಲ್ಲಿ ೧೮೦೯ರಲ್ಲಿ, ಮಂಗಳೂರಿನಲ್ಲಿ ೧೮೩೭ರಲ್ಲಿ, ಕಿತ್ತೂರಿನಲ್ಲಿ ೧೮೨೪ ಮತ್ತು ೧೮೩೦ರಲ್ಲಿ ನಡೆದ ಬಂಡಾಯಗಳಿಗೆ ಹೆಚ್ಚುಕಡಿಮೆ ಇವೇ ಕಾರಣಗಳಿದ್ದವು.

5. ಈ ಬಗ್ಗೆ ನಿಶ್ಚಿತ ಪುರಾವೆಗಳು ಇರಲಿಕ್ಕಿಲ್ಲ. ಮೀರತದಿಂದ ಡಮ್‌ಡಮ್‌ದ ವರೆಗೆ ಬೇರೆ ಬೇರೆ ದಳಗಳು ಬೇರೆ ಬೇರೆ ದಿನ ಬಂಡು ಮಾಡಿದ್ದರಿಂದ ಎಲ್ಲ ದಳಗಳೂ ಕೂಡಿ ಒಳಸಂಚು ನಡೆಸಿದವೆಂದು ಹೇಳಲು ಬರುವಂತಿಲ್ಲವೆಂದು ಸುರೇಂದ್ರನಾಥ ಸೇನ್ ಅಭಿಪ್ರಾಯಪಟ್ಟಿದ್ದಾರೆ. ಒಂದೇ ದಿನ ಬಂಡಾಯ ಹೂಡುವ ಅವರ ಪ್ರಯತ್ನ ಯಶಸ್ವಿಯಾಗಿರಲಿಕ್ಕಿಲ್ಲ. ಅಷ್ಟರಿಂದಲೇ ಒಳಸಂಚೆ ಇಲ್ಲವೆಂದು ಹೇಳಲಿಕ್ಕಾಗದು. ಒಳಸಂಚು ಇಲ್ಲದೆ ಇಷ್ಟು ಬೇಗನೆ ಬಂಡಾಯವು ಹಬ್ಬುತ್ತಿರಲಿಲ್ಲ.

ಇನ್ನು ನಾನಾಸಾಹೇಬ, ಲಕ್ಷ್ಮೀಬಾಯಿ, ಕುಂವರಸಿಂಗ ಇವರೊಳಗೆ ಮೊದಲಿನಿಂದಲೂ ಒಳಸಂಚು ನಡೆದಿದ್ದಿತೆ? ಮತ್ತು ಈ ರಾಜಮಹಾರಾಜರು ಸೈನ್ಯದಳಗಳೊಡನೆ ಬಂಡಾಯದ ಬಗ್ಗೆ ಏನಾದರೂ ಪತ್ರವ್ಯವಹಾರವನ್ನು ನಡೆಸಿದ್ದರೆ ಎಂಬುದೂ ಒಂದು ಮಹತ್ವದ ಪ್ರಶ್ನೆ. ಮಾರ್ಚ ಮತ್ತು ಎಪ್ರಿಲ್ ೧೮೫೭ರಲ್ಲಿ ನಾನಾಸಾಹೇಬನು ಬ್ರಹ್ಮಾವರ್ತದಿಂದ ಲಖನೌಕ್ಕೆ ಬಂದು ಮುಂದೆ ಅಲ್ಲಿಂದ ಅಂಬಾಲಾದ ವರೆಗೆ ಹೋಗಿ ಬಂದನು. ಆಗ ಇವನು ಅನೇಕ ಸೈನ್ಯ ಠಾಣ್ಯಗಳಿಂದ ಸೈನಿಕರನ್ನು ಕರೆಸಿ ಅವರ ನಿಷ್ಠೆಯನ್ನು ಕಲಂಕಿತಗೊಳಿಸಲು ಪ್ರಯತ್ನಮಾಡಿದನೆಂದು ಊಹಿಸಲಾಗಿದೆ.[8]

ಈ ಪ್ರವಾಸದ ಸಮಯದಲ್ಲಿ ನಾನಾಸಾಹೇಬನು ನಿಶ್ಚಿತವಾದ ಯಾವ ತಯಾರಿಯನ್ನು ಮಾಡಿದನು ಎಂಬುದು ಇತಿಹಾಸಕಾರರಿಗೆ ಗೊತ್ತಾಗಿಲ್ಲ. ಆದರೆ ಔಂಧದ ರಾಜಧಾನಿಯಾದ ಲಖನೌಗೆ ಅವನು ಬಂದಾಗ ಜನರು ಅವನನ್ನು ಪ್ರಚಂಡ ರೀತಿಯಲ್ಲಿ ಸ್ವಾಗತಿಸಿದರೆಂದೂ, ಅವನ ವರ್ತನೆಯಲ್ಲಿ ಅಭಿಮಾನ ಗರ್ವಗಳು ಹೆಚ್ಚು ಒಡೆದು ವ್ಯಕ್ತವಾಗುತ್ತಿದ್ದವೆಂದೂ ನಾನಾ ಸಾಹೇಬನನ್ನು ಸಮಕ್ಷಮವಾಗಿ ಕಂಡ ಮಾರ್ಟಿನ್ ಗಬಿನ್ಸ ಎಂಬ ಬರಹಗಾರನ ಆಧಾರದ ಮೇಲೆ ನಾನಾಸಾಹೇಬ ಮತ್ತು ಅಜಿಮುಲ್ಲಾಖಾನರು ತಮ್ಮ ಪ್ರವಾಸದಲ್ಲಿ ಕಾರಸ್ಥಾನವನ್ನು ನಡೆಸಿರಲಿಕ್ಕೇಬೇಕೆಂದು ಸರ್ ಜಾನ್ ಕೆ. ಊಹಿಸುತ್ತಾನೆ.[9] ಬಂಡಾಯದ ಬಗ್ಗೆ ಇಷ್ಟೊಂದು ಸುದೀರ್ಘವಾದ ಇತಿಹಾಸಗಳನ್ನು ಬರೆದ ಆಂಗ್ಲರಿಗೆ ನಾನಾಸಾಹೇಬನ ವ್ಯಕ್ತಿತ್ವ ಮತ್ತು ಜೀವನಗಳ ಬಗ್ಗೆ ಏನೂ ತಿಳಿದಿರಲಿಲ್ಲ! ಇದುವರೆಗೆ ಯಾರಿಗೂ ಅದು ಹೆಚ್ಚಾಗಿ ಗೊತ್ತಾಗಿಲ್ಲ. ಆದ್ದರಿಂದ ಬೇರೆ ಬೇರೆ ಬರಹಗಾರರು ತಮ್ಮ ತಮ್ಮ ಕಲ್ಪನೆಗಳ ಪ್ರಕಾರ ನಾನಾಸಾಹೇಬನನ್ನು ವರ್ಣನೆ ಮಾಡಿರುವರು.

ಕಾನಪೂರ ಬಂಡಾಯದಲ್ಲಿ ನಾನಾಸಾಹೇಬನು ತಾನಾಗಿಯೇ ಧುಮುಕಿದ ನೆಂಬುದು ಸಹ ತುಂಬಾ ಸಂಶಯಕ್ಕೆ ಕಾರಣವಾಗಿದೆಯೆಂದು ತನ್ನ ವಿಚಾರಣೆಯಲ್ಲಿ ತಾತ್ಯಾ ಟೋಪಿಯು ಕೊಟ್ಟ ಜವಾಬಿನಿಂದ ಇತಿಹಾಸಕಾರರು ಅರ್ಥ

8. ಸುರೇಂದ್ರನಾಥ ಸೇನರ '೧೮೫೭' ಎಂಬ ಇತ್ತೀಚಿಗಿನ ಪುಸ್ತಕದಲ್ಲಿ ಬರೆದ ಪ್ರಸ್ತಾವನೆಯಲ್ಲಿ ಮೌಲಾನಾ ಆಜಾದರು ನಾನಾಸಾಹೇಬನ ಮೇಲೆ ಇಂಥ ಸಂಶಯ ಮಾಡಲು ಆಧಾರಗಳಿಲ್ಲವೆಂದು ಬರೆದಿದ್ದಾರೆ.

9. Kaye Vol. 1, P. 421 to 426 and Appendix.

ಮಾಡುತ್ತಾರೆ [10]

ತಮ್ಮ ಅಧಿಕಾರಿಗಳು, ಸೇನಾಪತಿಗಳು, ಸೈನಿಕರು ಎಷ್ಟು ಕ್ರೂರತನದಿಂದ ಕಾದಿ ಹಿಂದುಸ್ತಾನವನ್ನು ಖಡ್ಗದಿಂದ ಮರಳಿ ಗೆದ್ದುಕೊಂಡರೆಂಬ ವರ್ಣನೆಗಳಿಂದಲೇ ಆಂಗ್ಲ ಇತಿಹಾಸಕಾರರ ಪುಸ್ತಕಗಳು ತುಂಬಿವೆ. ಹಿಂದೀ ಮುಖಂಡರು ಏನು ಕೊಂಚು ಹಾಕಿದರು, ಹೇಗೆ ಸಂಘಟನೆ ಮಾಡಿದರು ಎಂಬುದು ಹೆಚ್ಚಾಗಿ ಬಯಲಿಗೆ ಬರಲೇ ಇಲ್ಲ.

ಬಂಡಾಯವು ಒಳಸಂಚನ್ನು ಪೂರ್ತಿಮಾಡಿದ ನಂತರ ಕೈಕೊಂಡ ಒಂದು ಕಾರ್ಯವಾಗಿರಲಿಕ್ಕಿಲ್ಲ. ನಾನಾಸಾಹೇಬನು ಮಾತ್ರ ತನ್ನ ಸಂದೇಶಗಳನ್ನು ದೇಶದ ಅನೇಕ ಮೂಲೆಗಳಿಗೆ ಮುಟ್ಟಿಸಿದ್ದನೆಂದು ಊಹಿಸಲಾಗಿದೆ. [11]

ಜೆನೆರಲ್ ಗಲಾಬ್‌ರಲ್ಲಿ ನಾನಾಸಾಹೇಬನ ಗುಪ್ತಚಾರನೆಂದು ಹೇಳುವ ಒಬ್ಬನು ಮೈಸೂರಿನಲ್ಲಿ ಅಧಿಕಾರಿಗಳ ಕೈಗೆ ಸಿಕ್ಕುಬಿದ್ದನು. ಇವನು ನಾನಾಸಾಹೇಬನು ಸಂದೇಶ ಕಳಿಸಿದ ಕೆಲವು ರಾಜರ ಹೆಸರು ಹೇಳಿದನು. ಮತ್ತು ಔಢವನ್ನು ಕಂಪನಿ ಸರಕಾರವು ವಶಪಡಿಸಿಕೊಳ್ಳುವ ಪೂರ್ವದಲ್ಲಿ ನಾನಾಸಾಹೇಬನು ಎರಡು ಮೂರು ತಿಂಗಳಿಗೆ ಒಮ್ಮೊಮ್ಮೆ ಈ ಎಲ್ಲ ಅರಸುಮನೆತನಗಳಿಗೆ ಪತ್ರಗಳನ್ನು ಬರೆಯುತ್ತಲಿ ಇದ್ದನೆಂದೂ ಆದರೆ ಆಗ ಅವನಿಗೆ ಯಾರಿಂದಲೂ ವಿಶೇಷವಾಗಿ ಪ್ರೋತ್ಸಾಹನವು ಸಿಗಲಿಲ್ಲವೆಂದೂ ಹೇಳಿದ್ದಾನೆ. "ಆದರೆ ಔಢದ ಆಕ್ರಮಣದ ನಂತರ ಮಾತ್ರ ಲಖನೌದ ಸಾಹುಕಾರರು ಅವನಿಗೆ ಬೆಂಬಲಕೊಟ್ಟು ತಿಳಿಸಿದರು. ಪುರಭಯ್ಯಾ ಮುಖಂಡನಾದ ಮಾನಸಿಂಗನು ಬಂಡಿನಲ್ಲಿ ತಾನೂ ಕೂಡಿಕೊಳ್ಳುವದಾಗಿ ಹೇಳಿದನು. ಸಿಪಾಯಿದಳಗಳೂ ವಿಚಾರಮಾಡಹತ್ತಿದರು. ಆಕಳು ಮತ್ತು ಹಂದಿ ನೆಣ ಹಚ್ಚಿದ ಕಾಡತೂಸುಗಳ ಬೊಬ್ಬಾಟವಾದ ಮೇಲಂತೂ ನಾನಾಸಾಹೇಬನ ಕಾರ್ಯವು ಬಹಳೇ ಸುಲಭವಾಯಿತು" ಎಂದು ಅವನು ಜವಾಬು ಕೊಟ್ಟಿದ್ದಾನೆ. [12]

ಸೈನ್ಯದಳಗಳಲ್ಲಿಯೂ ಒಳಸಂಚು ನಡೆದ ಬಗ್ಗೆ ನಿಶ್ಚಿತ ಪುರಾವೆಗಳಿಲ್ಲ

10. Vide Malleson Vol. 3. 514 Appendix for statement of Tatya Tope.
11. ಮುಂಡರಿಗಿ ಭೀಮರಾಯನ ದಪ್ತರಿನಲ್ಲಿ ಸಿಕ್ಕ ನಾನಾಸಾಹೇಬನ ಘೋಷಣೆ ಎಂಬ ಕಾಗದದ ಕನ್ನಡ ಭಾಷಾಂತರವನ್ನು ಪರಿಶಿಷ್ಟದಲ್ಲಿ ನೋಡಿರಿ.
12. Kaye Vol. I, P. 425 Footnote.

ದಿದ್ದರೂ ಸಿಪಾಯಿಗಳಲ್ಲಿ ಬಂಡಾಯದ ಬಗ್ಗೆ ಪತ್ರವ್ಯವಹಾರವು ನಡೆದ ಕೆಲವು ಉದಾಹರಣೆಗಳನ್ನು ಸರ್ ಜಾನ್ ಕೆ ಉಲ್ಲೇಖಿಸಿದ್ದಾನೆ. ಬಿರಾಕಪೂರದ ಸಿಪಾಯಿಗಳ ಕೆಲವು ಪತ್ರಗಳು ಇಂಗ್ಲೀಷರಿಗೆ ದೊರೆತಿವೆ.[13]

ಸಿಪಾಯಿ ಬಂಡಾಯವನ್ನೆಬ್ಬಿಸಿದವರಿಗೆ ರಾಷ್ಟ್ರೀಯ ಭಾವನೆಗಳಿಗಿಂತಲೂ ಧಾರ್ಮಿಕ ಭಾವನೆಗಳನ್ನು ಕೆರಳಿಸುವದು ಆಗಿನ ಕಾಲಕ್ಕೆ ಅನುಕೂಲವಾಯಿತು. ಆದ್ದರಿಂದ ಮುಸಲ್ಮಾನರು ಫಕೀರರ ವೇಷದಲ್ಲಿಯೂ ಹಿಂದುಗಳು ಸಾಧುಗಳ ವೇಷದಲ್ಲಿಯೂ ದೇಶದ ತುಂಬ ಅಲೆದಾಡಿ ಜನರಿಗೆ ಇಂಗ್ಲೀಷರ ಆಳಿಕೆಯ ವಿರುದ್ಧ ಬೋಧ ಮಾಡುತ್ತಿದ್ದರು. "ನಗರದಿಂದ ನಗರಕ್ಕೆ ಹಳ್ಳಿಗಳಿಂದ ಹಳ್ಳಿಗಳಿಗೆ ಈ ಫಕೀರರು ಮತ್ತು ಸನ್ಯಾಸಿಗಳು ಅಲೆದಾಡಹತ್ತಿದರು. ಮತ್ತು ಸ್ವಾತಂತ್ರ್ಯಕ್ಕಾಗಿ ಯುದ್ಧವನ್ನು ಹೂಡಲು ಜನರಿಗೆ ಉತ್ತೇಜನ ಕೊಡತೊಡಗಿದರು................ಮೀರತ ಸೈನ್ಯಠಾಣ್ಯದ ಹತ್ತಿರ ಬೀಡು ಬಿಟ್ಟಿದ್ದ ಓರ್ವ ಫಕೀರನನ್ನು ಕೊನೆಗೆ ಅಧಿಕಾರಿಗಳು ಎಬ್ಬಿಸಬೇಕಾಯಿತು. ಏನೂ ಅರಿಯದ ಫಕೀರನಂತೆ ಇವನು ಎದ್ದು ಹೊರಟು ಹತ್ತಿರವಿದ್ದ ಹಳ್ಳಿಯಲ್ಲಿ ಓರ್ವ ಸಿಪಾಯಿಯ ಮನೆಯಲ್ಲಿಯೇ ಬೀಡು ಬಿಟ್ಟ !.....................ಆಗಿನ ಕಾಲಕ್ಕೆ ಸಿಪಾಯಿಗಳ ಧಾರ್ಮಿಕ ಕೆಲಸಕ್ಕೆಂದು ಪ್ರತಿಯೊಂದು ದಳಕ್ಕೆ ಓರ್ವ ಮೌಲ್ವಿ ಮತ್ತು ಓರ್ವ ಹಿಂದು ಪಂಡಿತ ಇರುತ್ತಿದ್ದರು. ಕ್ರಾಂತಿಕಾರರು ಇವರ ಸೋಗು ಹಾಕಿ ಸೈನ್ಯ ವರ್ಗವನ್ನು ಸೇರಿ ತಮ್ಮ ಚಟುವಟಿಕೆ ನಡೆಸಿದರು."[14]

ಒಂದೆ ಗೂಢ ಒಳಸಂಚು ಇಡಿಯ ಬಂಡಾಯದ ಸಲುವಾಗಿ ನಡೆಯುತ್ತಿ ಇದ್ದಿರಬಹುದು. ಆದರೆ ಕಂಪನಿ ಸರಕಾರದ ವೈರಿಗಳು ಅದನ್ನು ಬಗ್ಗು ಬಡಿಯುವ ವಿಷಯದಲ್ಲಿ ತಮ್ಮ ತಮ್ಮೊಳಗೆ ಎಷ್ಟೊ ಬಗೆಯ ಸಮಾಲೋಚನೆಗಳನ್ನು ನಡೆಸುತ್ತಿರಲೇಬೇಕು. ಇದಕ್ಕೆ ನಾವು ಒಳಸಂಚು ಎನ್ನಬಹುದು ಅಥವಾ ಬೇರೆ ಯಾವುದೇ ಹೆಸರನ್ನಿಡಬಹುದು.

---

13. Kaye Vol. I Page 421.
14. "ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ." ವ್ಹಿ. ಡಿ. ಸಾವರಕರ, ಇಂಗ್ಲೀಷ ಭಾಷಾಂತರ. ೧೯೪೭ ರ ಹಿಂದೀ ಪ್ರತಿ ಪುಟ ೭೨-೭೩. ಸಾವರಕರರು ಬಂಡಾಯಕ್ಕೆ ಗುಪ್ತ ಸಂಘಟನೆಯೊಂದು ರಾಷ್ಟ್ರದಾದ್ಯಂತ ಇತ್ತೆಂದು ವಿಶೇಷ ಶ್ರಮಪಟ್ಟು ಸಿದ್ಧ ಮಾಡಿದ್ದಾರೆ. ಅವರ ಪುಸ್ತಕದ ೧ ನೆಯ ಭಾಗದ ಒಳಸಂಚು ಅಧ್ಯಾಯದಲ್ಲಿ ಈ ವಿಷಯದ ಬಗ್ಗೆ ಸಾಕಷ್ಟು ವಿವರಗಳಿವೆ.

# ನಾಲ್ಕನೆಯ ಅಧ್ಯಾಯ

## ಕಂಪನಿ ಸಿಪಾಯಿಯ ಹಾಗೂ ಜನಕ್ಷೋಭದ ಕಾರಣ

**ಲಾ**ರ್ಡ ಡಾಲಹೌಸಿಯು ೧೮೫೬ರಲ್ಲಿ ನಿವೃತ್ತನಾದಾಗ ಅವನ ಅಂತ ರಂಗವು ಹೆಮ್ಮೆಯಿಂದ ತುಂಬಿತುಳುಕುತ್ತಿತ್ತು. ಬ್ರಿಟಿಶ್ ಸಾಮ್ರಾಜ್ಯವನ್ನು ತಾನು ಯಾವ ರೀತಿಯಲ್ಲಿ ವಿಸ್ತರಿಸಿದನೆಂಬ ಬಗ್ಗೆ ಡಾಲಹೌಸಿಯು ಒಂದು ಶ್ವೇತಪತ್ರವನ್ನು ವರಿಷ್ಠರಿಗೆ ಒಪ್ಪಿಸಿದನು. ಅದರಲ್ಲಿ, ಹಿಂದುಸ್ತಾನದ ರಾಜಕೀಯ ಪರಿಸ್ಥಿತಿಯು ಅತ್ಯಂತ ಸಮಾಧಾನಕರವಾಗಿದೆ ಎಂದು ಅಭಿಪ್ರಾಯ ವ್ಯಕ್ತಮಾಡಿ ಹಿಂದುಸ್ತಾನದ ನಿಜವಾದ ಅಂತರಂಗದ ಬಗ್ಗೆ ಹಾಸ್ಯಾಸ್ಪದ ಅಜ್ಞಾನವನ್ನು ವ್ಯಕ್ತಮಾಡಿದ್ದಾನೆ. ಡಾಲಹೌಸಿಯ ನಂತರ ಲಾರ್ಡ ಕ್ಯಾನಿಂಗನು ಗವ್ಹರ್ನರ ಜನರಲನಾಗಿ ಬಂದನು. ಡಾಲಹೌಸಿಯಷ್ಟು ಉತಾವಳಿ ಸ್ವಭಾವವು ಅವನದಿರಲಿಲ್ಲ. ಎಲ್ಲವನ್ನೂ ಸೂಕ್ಷ್ಮವಾಗಿ ನೋಡುವದು ಅವನ ಸ್ವಭಾವವಾಗಿತ್ತು. "ಕ್ಷಿತಿಜದ ಮೇಲೆ ಕೇವಲ ಅಂಗೈಯಗಲದಷ್ಟು ಕಾಣುವ ಮೋಡವು ನಮ್ಮನ್ನೆಲ್ಲ ಯಾವಾಗ ಮುಸುಕಬಹುದೊ ನಾನರಿಯೆ" ಎಂದು ಬಂದ ಕೂಡಲೆ ಹೇಳಿದ ಲಾರ್ಡ ಕ್ಯಾನಿಂಗ ತುಂಬ ದೂರದರ್ಶಿಯಾಗಿದ್ದ.

ಆದರೂ ಪರಿಸ್ಥಿತಿಯ ಸಂಪೂರ್ಣ ಕಲ್ಪನೆಯು ಬರಲು ಲಾರ್ಡ ಕ್ಯಾನಿಂಗನಿಗೆ ಕೆಲವು ಕಾಲ ಹಿಡಿಯಿತು. ಡಾಲಹೌಸಿಯು ಹೋದರೂ ಅವನಂತೆಯೇ ವಿಚಾರಮಾಡುವ ಅವನ ಸಲಹಾಮಂಡಳವು ಇನ್ನೂ ಉಳಿದಿತ್ತು. ಅವರು ಸಾಮ್ರಾಜ್ಯದ ಅಭಿಮಾನದಲ್ಲಿಯೇ ಇನ್ನೂ ಲೋಲಾಡುತ್ತಿದ್ದರು. ಬಂಡಾಯದ ವಾರ್ತೆಯು ಎಲ್ಲರಿಗಿಂತಲೂ ಅವರನ್ನು ಹೆಚ್ಚು ಚಕಿತಗೊಳಿಸಿತು. ಯಾಕಂದರೆ ಪಾಪ ! ಅವರಿಗೆ ಏನೂ ಗೊತ್ತಿರಲಿಲ್ಲ !

೧೮೫೭ರ ಪ್ರಾರಂಭದಲ್ಲಿ ಈಸ್ಟ ಇಂಡಿಯಾ ಕಂಪನಿಯ ನೌಕರಿಯಲ್ಲಿ ಸುಮಾರು ಒಂದೂವರೆ ಲಕ್ಷ ಸಿಪಾಯಿಗಳಿದ್ದರು. ೭೪ ಕಾಲ್ದಳಗಳು, ೧೧ ಅಶ್ವಾರೋಹಿ ದಳಗಳು, ನಾಲ್ಕು ಕುದುರೆ ತೋಫುದಳಗಳು, ಆರು ಕಂಪನಿಗಳಿದ್ದ ಎರಡು ತೋಫು ಪಡೆಗಳು ಮತ್ತು ಮತ್ತಿತರ ಕಚ್ಚಾ ಸೈನ್ಯಪಡೆಗಳು ಹೀಗೆ ಒಟ್ಟುಗೂಡಿ ಒಂದೂವರೆ ಲಕ್ಷ ಸಿಪಾಯಿಯರು ಭಾರತದಾದ್ಯಂತ ಬೇರೆ

ಬೇರೆ ಠಾಣ್ಯದಲ್ಲಿ ಇರುತ್ತಿದ್ದರು. ಬ್ರಿಟಿಶ್ ಬಿಳಿಯ ಸೈನ್ಯವು ಸುಮಾರು ೪೫,೦೦೦ವಿದ್ದು ಉತ್ತರಹಿಂದುಸ್ತಾನದಲ್ಲಿ ಬೇರೆ ಬೇರೆ ಠಾಣ್ಯಗಳಲ್ಲಿ ಹರಿದು ಹಂಚಿಹೋಗಿತ್ತು. ಸಿಪಾಯಿಪಡೆಗಳಿಗೆ ಸಾಮಾನ್ಯವಾಗಿ ಬ್ರಿಟಿಶ್ ಅಧಿಕಾರಿಗಳೇ ಅಧಿಪತಿಗಳಾಗಿರುತ್ತಿದ್ದರು.

ಸಿಪಾಯಿಗಳಿಗೆ ನೌಕರಿ ಕೊಟ್ಟ ಧನಿ ಕಂಪನಿಸರಕಾರವೆ. ಬಲಾಢ್ಯವಾದ ಕಂಪನಿ ಸರಕಾರದ ಸಿಪಾಯಿಯೆಂದರೆ ಆಗಿನ ಕಾಲದಲ್ಲಿ ತುಂಬಾ ಗೌರವ ಮತ್ತು ಲಾಭ. ಹೀಗಾಗಿ ನೌಕರಿ ಕೊಟ್ಟ ಕಂಪನಿ ಸರಕಾರಕ್ಕೆ ಸಿಪಾಯಿಯು ಚಿರಋಣಿಯಾಗಿರುತ್ತಿದ್ದನು. ಆದುದರಿಂದ ಯುದ್ಧದಲ್ಲಿ ಸಿಪಾಯಿ ಅಪ್ರತಿಮ ಶೌರ್ಯವನ್ನೂ ಸ್ವಾಮಿನಿಷ್ಠೆಯನ್ನೂ ತೋರಿಸುತ್ತಿದ್ದನು.

ಈ ಸೌಹಾರ್ದವು ಬಹಳದಿನ ಉಳಿಯಲಿಲ್ಲ. ೧೮೦೦ರ ಈಚೆಗೆ ಸರಕಾರ ಮತ್ತು ಸಿಪಾಯಿಗಳಲ್ಲಿ ಮತಭೇದಗಳು ವ್ಯಕ್ತವಾಗತೊಡಗಿದ್ದವು. ಆದರೆ ಸಾರ್ವತ್ರಿಕ ಬಂಡಾಯವಾಗುವಂತೆ ಪರಿಸ್ಥಿತಿಯು ವಿಕೋಪಕ್ಕೆ ಹೋಗಿರಲಿಲ್ಲ.

ಅಂದಿನ ಸಿಪಾಯಿಯ ಧಾರ್ಮಿಕ ಭಾವನೆಗಳು ಇಂದಿನಕಿಂತಲೂ ಚುರುಕಾಗಿದ್ದವು. ತನ್ನ ಧರ್ಮಾಚಾರಗಳಿಂದ ಸಿಪಾಯಿಯು ಎಂದೂ ಚ್ಯುತನಾಗಿರುತ್ತಿರಲಿಲ್ಲ. ಯಾವ ಕಾರಣದಿಂದಲೊ ಅಂದಿನ ದಳಗಳಲ್ಲಿ ಹಲವೊಂದು ಭಾಗಗಳಲ್ಲಿ ಬ್ರಾಹ್ಮಣರೇ ಹೆಚ್ಚಾಗಿದ್ದರು. ಹಿಂದುಧರ್ಮಶಾಸ್ತ್ರವು ಸಮುದ್ರಪರ್ಯಟನವನ್ನು ಬಹಿಷ್ಕರಿಸುತ್ತಿದ್ದ ಮೂಲಕ ಕೆಲವು ಪಡೆಗಳು ತಮ್ಮನ್ನು ಸಮುದ್ರದಾಚೆಗೆ ಕಳಿಸತಕ್ಕದ್ದಲ್ಲವೆಂಬ ಸ್ಪಷ್ಟ ಕರಾರು ಹಾಕಿಯೇ ಸೇರ್ಪಡೆಯಾಗಿದ್ದವು.

ಕಂಪನಿ ಸರಕಾರದ ರಾಜಧಾನಿಯು ಕಲಕತ್ತೆಯಾಗಿತ್ತು. ಕಲಕತ್ತೆಯು ಮುಂದೆ ೧೯೧೨ರ ವರೆಗೆ ಬ್ರಿಟಿಶ್ ಹಿಂದುಸ್ತಾನದ ರಾಜಧಾನಿಯಾಗಿಯೇ ಇತ್ತು. ಕಲಕತ್ತೆಯ ಹತ್ತಿರವೇ ಡಮ್‌ಡಮ್, ಬ್ಯಾರೆಕಪೂರ, ಬಹರಾಮಪೂರ ಮೊದಲಾದ ಕೆಲವು ಮಹತ್ವದ ಠಾಣ್ಯಗಳಿದ್ದವು. ಹಿಂದುಸ್ತಾನದ ಎಲ್ಲ ಸೈನಿಕ ಮತ್ತು ಮುಲ್ಕಿ ವಿಷಯಗಳ ಅಧಿಪತಿಯು ಗವರ್ನರಜನರಲ್ಲನೇ ಆಗಿದ್ದು ಅವನು ಕಲಕತ್ತೆಯಲ್ಲಿರುತ್ತಿದ್ದನು. ಆದರೂ ಸೈನಿಕವಿಷಯಗಳನ್ನು ಪ್ರಧಾನ ಸೇನಾಪತಿಯ ಕಡೆಗೆ ಬಿಡಲಾಗುತ್ತಿತ್ತು. ಸೇನಾಪತಿಯು ಕಲಕತ್ತೆಯಿಂದ ಸಾವಿರ ಮೈಲಿನ ಮೇಲಿರುವ ಅಂಬಾಲಾದಲ್ಲಿರುತಿದ್ದನು. ಇಷ್ಟೊಂದು ಸಾರಿಗೆ

ಸಂಪರ್ಕಗಳ ತೊಂದರೆಯಿದ್ದ ದಿನಗಳಲ್ಲೂ ಈ ಉಚ್ಚ ಅಧಿಕಾರಿಗಳು ಒಬ್ಬರಿಂದೊಬ್ಬರು ಹೀಗೆ ದೂರವಾಗಿರುತ್ತಿದ್ದುದು ವಿಚಿತ್ರವಾಗಿತ್ತು. ಬಂಡಾಯದ ಅವಸರದಲ್ಲಿ ಇದರಿಂದ ಸಾಕಷ್ಟು ತೊಂದರೆಯೂ ಆಯಿತು.

ಗವರ್ನರಜನರಲನ ಸೈನಿಕ ಕಾರ್ಯದರ್ಶಿಯ ಕಚೇರಿಯು ಕಲಕತ್ತೆಯಲ್ಲಿದ್ದಿತು. ಸೇನಾಪತಿಯ ಕೈಯೊಳಗಿನ ಪ್ರಧಾನ ಸಂಪರ್ಕಾಧಿಕಾರಿಯ (Adjutant General of the Army.) ಕಚೇರಿಯೂ ಕಲಕತ್ತೆಯಲ್ಲಿಯೇ ಇದ್ದಿತು.

೧೮೫೭ನೆಯ ಇಸ್ವಿ ಮೇ ತಿಂಗಳ ೧೦ನೆಯ ದಿನಾಂಕದ ಇತಿಹಾಸ ರಕ್ತಾಕ್ಷರದಲ್ಲಿ ಬರೆದಿಡುವಂಥದು. ಆಕಳ ಮತ್ತು ಹಂದಿ ನೆಣವನ್ನು ಹಚ್ಚಿದ ಕಾಡತೂಸುಗಳನ್ನು ಹಲ್ಲಿನಿಂದ ಕಡಿಯುವ ಪ್ರಸಂಗವನ್ನು ವಿರೋಧಿಸಿ ಮೀರತದಲ್ಲಿ ಅಂದು ಸಿಪಾಯಿ ಬಂಡಾಯವು ಸುರುವಾಯಿತು. ಕೂಡಲೆ ಎರಡು ದಿನಗಳಲ್ಲಿ ದಿಲ್ಲಿಯು ಇಂಗ್ಲೀಷರ ಕೈಬಿಟ್ಟಿತು; ಇಂಗ್ಲೀಷರ ಸಾರ್ವತ್ರಿಕ ಕೊಲೆಯು ನಡೆಯಿತು. ಸಿಪಾಯಿದಳಗಳು ಮತ್ತು ಕಂಪನಿ ಸರಕಾರದ ನಡುವೆ ಪ್ರತ್ಯಕ್ಷ ಯುದ್ಧವೇ ಪ್ರಾರಂಭವಾಗಿ ಬಿಟ್ಟಿತು. ಸೈನ್ಯ ಪಡೆಗಳಲ್ಲಿ ಇದೇ ಮೊದಲನೆಯ ಬಂಡಾಯವೆಂದು ತಿಳಿಯಕೂಡದು. ನಾಲ್ಕು ತಿಂಗಳ ಮುಂಚೆ ಮಂಗಲಪಾಂಡೆ ಬಹರಾಮಪುರದಲ್ಲಿ ತನ್ನ ಮೇಲಾಧಿಕಾರಿಯನ್ನು ಕೊಂದು ಗಲ್ಲಿಗೇರಿದ್ದನು. ಸಿಪಾಯಿದಳಗಳಲ್ಲಿ ಅಸಂತೋಷ ಹೆಚ್ಚಾಗಿ ವ್ಯಕ್ತವಾಗುತ್ತಿದ್ದ ಮೂಲಕ ಪಂಜಾಬದಲ್ಲಿ ಸೇನಾಪತಿ ಚಾರ್ಲಸ್ ನೇಪಿಯರನು ಕೆಲವು ಪರಿಹಾರ ಉಪಕ್ರಮಗಳನ್ನು ಕೈಕೊಂಡ ಕಾರಣದಿಂದ ಡಾಲಹೌಸಿಗೂ ಅವನಿಗೂ ಮತಭೇದಗಳು ಉದ್ಭವಿಸಿದವು. ಸೈನ್ಯದಲ್ಲಿ ಬಂಡಾಯದ ಪ್ರವೃತ್ತಿಯೇ ಇಲ್ಲವೆಂದು ಡಾಲಹೌಸಿಯು ಒಂದು ಸರಕಾರಿ ಪತ್ರವನ್ನು ಹೊರಡಿಸಲು ಸರ ಚಾರ್ಲಸ್ ನೇಪಿಯರನು ರಾಜಿನಾಮೆ ಕೊಟ್ಟನು.

ದಕ್ಷಿಣ ಹಿಂದುಸ್ತಾನದಲ್ಲಿ ೧೮೦೬ರ ಮೊದಲಿನಿಂದಲೂ ಸಣ್ಣಪುಟ್ಟ ಸಿಪಾಯಿ ಬಂಡಾಯಗಳು ಆಗುತ್ತಲೆ ಇದ್ದವು. ೧೮೫೭ರ ಬಂಡಾಯವು ಠಾಣ್ಯದಿಂದ ಠಾಣ್ಯಕ್ಕೆ ಹಬ್ಬಿ, ಭಾರತವನ್ನೆ ವ್ಯಾಪಿಸಿ, ಒಂದು ಯುದ್ಧದ ಸ್ವರೂಪವನ್ನು ತಾಳಿದ್ದರಿಂದ ಅದಕ್ಕೆ ಹೆಚ್ಚಿನ ಮಹತ್ವವು ಬಂದಿದೆ.

ಮೊದಲು ನಡೆದ ಈ ಚಿಲ್ಲರೆ ಬಂಡಾಯಗಳಿಗೂ ಇಂಥವೆ ಕೆಲವು ವಿಶಿಷ್ಟ

ಕಾರಣಗಳಿದ್ದವು. ಹಿಂದು ಮತ್ತು ಮುಸಲ್ಮಾನ ಧರ್ಮಗಳ ಮೇಲೆ ಕ್ರಿಶ್ಚಿಯನ್ ಸರಕಾರವು ಅತಿಕ್ರಮಣವನ್ನು ನಡೆಸುತ್ತಿದೆ ಎಂಬ ತಕರಾರೂ ಇದ್ದೇ ಇತ್ತು. ಹಿಂದೀ ಸಿಪಾಯಿಗಳು ಹಾಗೂ ಅವರ ಬ್ರಿಟಿಶ್ ಅಧಿಕಾರಿಗಳ ನಡುವೆ ಮೊದಲು ಕೆಲವು ವ್ಯಾವಹಾರಿಕ ತೊಂದರೆಗಳೂ ಬಂದವು.

ರಾಬರ್ಟ ಕ್ಲೈವನು ಬಂಗಾಲ ಸೈನ್ಯವನ್ನು ಸ್ಥಾಪನೆ ಮಾಡಿದ ಏಳು ವರ್ಷಗಳಲ್ಲಿಯೇ ಅಲ್ಲಿ ಬಂಡಾಯದ ಪೂರ್ವ ಚಿಹ್ನೆಗಳು ವ್ಯಕ್ತವಾದವು. ಇದಕ್ಕೆ ಬಿಳಿಯ ಸೈನಿಕರೇ ಕಾರಣರಾದರು. ಮೀರ ಝಾಫರನು ಕೊಡ ಮಾಡಿದ ಕೆಲವು ಹಣವು ಇನ್ನೂ ತಮ್ಮ ಕೈಸೇರಿಲ್ಲವೆಂದು ೧೭೬೪ರಲ್ಲಿ ಬಿಳಿಯ ಸೈನಿಕರು ಬಂಡು ಮಾಡಿದರು. ಅದರಲ್ಲಿ ತಮಗೂ ಪಾಲು ಬೇಕೆಂದು ಹಿಂದೀ ಸಿಪಾಯಿಗಳೂ ಬಂಡಾಯ ಮಾಡಿ ತಮ್ಮ ಇಂಗ್ಲೀಷ ಅಧಿಕಾರಿಯನ್ನು ಸೆರೆ ಹಿಡಿದರು. ಕೂಡಲೆ ಇಪ್ಪತ್ತುನಾಲ್ಕು ಸಿಪಾಯಿಗಳನ್ನು ಬಂಡಾಯದ ಆರೋಪಕ್ಕೆ ಗುರಿಪಡಿಸಿ ತೋಫಿನ ಬಾಯಿಗೆ ಕೊಡಲಾಯಿತು! ಇಂಥ ಉಗ್ರ ಶಿಕ್ಷೆಯಿಂದ ಬಂಗಾಲ ಸೈನ್ಯ ಒಮ್ಮೆಲೆ ಶಾಂತವಾಗಿಬಿಟ್ಟಿತು. ಮೇಜರ ಹೆಕ್ಟರ ಮನ್ರೊ ಈ ಶಿಕ್ಷೆಯನ್ನು ಕೊಟ್ಟನು. ಆರೋಪಿಗಳನ್ನು ತೋಫಿನ ಬಾಯಿಗೆ ಕಟ್ಟುವಾಗ ಅವರಲ್ಲಿಯಮರೆ ನಾಲ್ಕು ಗ್ರೆನೆಡಿಯರರು ಮುಂದೆ ಬಂದು ನಿಂತು ತಮ್ಮನ್ನು ಮೊದಲು ತೋಫಿನ ಬಾಯಿಗೆ ಕೊಡಬೇಕೆಂದು ಪ್ರಾರ್ಥನೆ ಮಾಡಿದರು. ಅವರ ಪ್ರಾರ್ಥನೆಯು ಮಾನ್ಯವಾಯಿತು. ಮನ್ರೊ ಅವರನ್ನೆ ಮೊದಲು ಹಾರಿಸಲು ಆಜ್ಞಾಪಿಸಿದ! (Kaye Vol. 1. P. 150).

ಬಿಳಿಯರ ವಿರುದ್ಧ ಸಿಪಾಯಿಯವರ ಸಾಕಷ್ಟು ತಕರಾರುಗಳಿದ್ದವು. ಮೊದಮೊದಲು ಹಿಂದೀಯರನ್ನು ಬೇಕಾದ ಉಚ್ಚ ಅಧಿಕಾರಕ್ಕೆ ನಿಯಮಿಸಿ ಕೊಳ್ಳುತ್ತಿದ್ದರು. ಹಿಂದೀ ಸೇನಾಪತಿಗಳ ಕೆಳಗೆ ಬಿಳಿಯ ಸೈನ್ಯ ಯುದ್ಧ ಮಾಡಿದ ಉದಾಹರಣೆಗಳು ದಕ್ಷಿಣ ಹಿಂದುಸ್ತಾನದಲ್ಲಿ ಆಗಿವೆ. ಆದರೆ ಬಿಳಿಯರ ಈ ಔದಾರ್ಯವು ಬಹಳ ದಿನ ಉಳಿಯಲಿಲ್ಲ. ಸುಬೆದಾರ ಹುದ್ದೆಯ ಮೇಲಿನ ಅಧಿಕಾರಗಳನ್ನು ಹಿಂದೀಯರಿಗೆ ಕೊಡುತ್ತಿರುವ ದಿನಗಳು ಮುಗಿದೆ ಬಿಟ್ಟವು. ಇದರಿಂದ ಉಚ್ಚಕುಲದ ಹಾಗೂ ಅಧಿಕಾರ ನಡೆಸುವ ಪ್ರವೃತ್ತಿಯುಳ್ಳ ವ್ಯಕ್ತಿಗಳು ಸೈನ್ಯದಲ್ಲಿ ಸೇರುವದನ್ನು ಬಿಟ್ಟುಬಿಟ್ಟರು. ಇದ್ದವರೂ ತುಂಬಾ ಅಸಂತುಷ್ಟರಾದರು. ಹಿಂದೀ ಸಿಪಾಯಿ ದಳಗಳಲ್ಲಿ ಶಿಸ್ತುಸಂಯಮಗಳು ತಗ್ಗಹತ್ತಿದವು.

ಸಿಪಾಯಿಗಳ ಧಾರ್ಮಿಕ ಭಾವನೆಗಳ ಮೇಲೆ ೧೮೦೬-೭ರಲ್ಲಿ ಮದ್ರಾಸಿ

ನಲ್ಲಿ ಸಾವಕಾಶವಾಗಿ ಅತಿಕ್ರಮಣವು ನಡೆಯಿತು. ಆಗಿನ ಸಿಪಾಯಿಯು ತಪ್ಪದೆ ಗಂಧ ಹಚ್ಚುತ್ತಿದ್ದನು; ರುಮಾಲು ಸುತ್ತುತ್ತಿದ್ದನು; ಕಿವಿಗಳಲ್ಲಿ ಮುತ್ತು ಬಾವಲಿ ಹಾಕಿಕೊಳ್ಳುತ್ತಿದ್ದನು. ಆಂಗ್ಲ ಸೇನಾಪತಿಗಳು ಈ ಪರಿಪಾಠಗಳನ್ನು ಸುಧಾರಿಸಹತ್ತಿದರು. ಸಿಪಾಯಿಯು ಸೈನ್ಯ ಕಾಯದೆಗಳ ಮೇರೆಗೆ ತನ್ನ ಗಡ್ಡಮೀಸೆಗಳನ್ನು ತಿದ್ದಿಕೊಳ್ಳಬೇಕೆಂದು ವಿಧಿಸಲಾಯಿತು. ಕವಾಯಿತಿಗೆ ಬರುವಾಗ ಅವನು ಗಂಧವನ್ನು ಹಚ್ಚಬಾರದೆಂದು ಅಪ್ಪಣೆ ಕೊಡಲಾಯಿತು. ಕಿವಿಯಲ್ಲಿಯ ಬಾವಲಿ ಹೋಯಿತು. ತಲೆಯ ಮೇಲಿನ ರುಮಾಲವೂ ಹೋಗಿ ಒಂದು ಚರ್ಮದ ಟೊಪ್ಪಿಗೆ ಬಂದಿತು. ಆಗ ಕ್ರಿಶ್ಚಿಯನ್ನರನ್ನು ಜನರು "ಟೋಪೀವಾಲಾ" ಎಂದು ಕರೆಯುತ್ತಿದ್ದರು.

೧೮೦೬ರಲ್ಲಿ ಈ ಸುಧಾರಕ ಕ್ರಮಗಳ ಮೊದಲನೆಯ ಉಗ್ರಪ್ರತಿಕ್ರಿಯೆಯು ವೆಲ್ಲೂರಿನಲ್ಲಿ ಆಯಿತು. ವೆಲ್ಲೂರ ಕೋಟೆಯಲ್ಲಿ ಆಗ ಟಿಪ್ಪೂ ಸುಲ್ತಾನನ ಮೂರೂ ಮಕ್ಕಳು ಸೆರೆಯಾಳಾಗಿದ್ದರು. ನಾಲ್ಕು ಕಂಪನಿಗಳಷ್ಟು ಮಾತ್ರ ಅಲ್ಲಿ ಯುರೋಪಿಯನ್ ಸೈನಿಕರಿದ್ದರು. ಸಿಪಾಯಿಗಳ ಸಂಖ್ಯೆಯು ಅವರ ಎಷ್ಟೋ ಪಟ್ಟು ಅಧಿಕವಾಗಿತ್ತು. ತಮ್ಮ ವೇಷಭೂಷಣಗಳ ಮೇಲೆ ನಡೆದ ಆಕ್ರಮಣಗಳಿಂದ ಸಂತಪ್ತರಾದ ಸಿಪಾಯಿಗಳು ಬಂಡಾಯ ಹೂಡಲು ಒಳಸಂಚು ನಡೆಸಿದರು. ಗುಪ್ತ ಕಾರಸ್ಥಾನಗಳು ನಡೆದವು. ಮೈಸೂರಿನ ಅಸಂತುಷ್ಟ ಪಾಳಯಗಾರರಿಗೆ ಪತ್ರಗಳನ್ನು ಬರೆಯಲಾಯಿತು.[1] ಒಂದು ವಾರ ವೆಲ್ಲೂರ ಕೋಟೆಯನ್ನು ಆಕ್ರಮಿಸಿದರೆ ಇಡಿಯ ಮೈಸೂರರಾಜ್ಯವೇ ಇಂಗ್ಲೀಷರ ವಿರುದ್ಧ ಏಳುವಂತೆ ಸಿಪಾಯಿದಳಗಳು ಹೊಂಚುಹಾಕಿದವು.

ಜುಲೈ ಮೊದಲು ವಾರ ಪರಿಸ್ಥಿತಿಯು ಪ್ರಕ್ಷುಬ್ಧವಾಯಿತು. ಜನರಲ್ಲಿ ಗುಜುಗುಜು ಮಾತುಗಳು ಸುರುವಾದವು. ಕೆಲವು ಯುರೋಪಿಯನ್ನರಿಗೂ ಸುದ್ದಿ ಮುಟ್ಟಿತು. ಆದರೆ ಅವರು ಇಂಥ ಅಶುಭವಾರ್ತೆಯನ್ನು ನಂಬಲು ಸಿದ್ಧರಿರಲಿಲ್ಲ. ಕೆಟ್ಟ ಸುದ್ದಿಯನ್ನು ತಂದ ಸಿಪಾಯಿಯನ್ನು ಅವರು ಬೇಡಿ ಹಾಕಿ ಇಟ್ಟುಬಿಟ್ಟರು ! ಹಿಂದೀ ಸೇನಾಧಿಕಾರಿಗಳು ತಮ್ಮ ದಳದ ಕೀರ್ತಿಗೆ ಕಲಂಕ ಹಚ್ಚಲು ಈ ಸಿಪಾಯಿ ಹೀಗೆ ಸುಳ್ಳು ವಾರ್ತೆಯನ್ನು ಹಬ್ಬಿಸುತ್ತಿರುವನೆಂದು ಹೇಳಿ ಆಂಗ್ಲ ಸೇನಾಪತಿಗಳ ಕಣ್ಣಲ್ಲಿ ಮಣ್ಣೆರಚಿಬಿಟ್ಟರು. ಬಂಡಾಯ

1. ಜನರಲ್ಲಿ "ಚಪಾತಿ" ಗಳನ್ನು ಹಂಚುವದು ಮೊದಲು ವೆಲ್ಲೂರ ಬಂಡಾಯದ ಕಾಲಕ್ಕೇ ಕಣ್ಣಿಗೆ ಬಿದ್ದಿತು.

ವೇನೊ ಆಗಿಯೇ ಬಿಟ್ಟಿತು. ಮೊದಲು ಸುದ್ದಿ ಹೇಳಿದ ಮುಸ್ತಾಫಾ ಬೇಗ ಎಂಬುವವನಿಗೆ ಸರಕಾರಿ ತಿಜೋರಿಯಿಂದ ೨೦೦೦ ಪಗೋಡಾಗಳ ( ನಾಣ್ಯ ) ಇನಾಮು ಕೊಡಲಾಯಿತು. ಇವನೆ ಬಂಡಾಯದ ಸಂಜ್ಞೆಯನ್ನು ಕೊಟ್ಟ ನೆಂದು ನಂತರ ಗೊತ್ತಾಯಿತು ! ಅಂತಹ ಅಧಿಕಾರಿಗಳೂ ಅಂತಹ ಸಿಪಾಯಿ ಗಳೂ ಆಗ ವೆಲ್ಲೂರಿನಲ್ಲಿದ್ದರು.

ಜುಲೈ ೧೧ನೆಯ ತಾರೀಖಿನ ದಿನ ಯುರೋಪಿಯನ್ನರ ಭಯಂಕರ ಕೊಲೆಯು ನಡೆಯಿತು. ಸೆಂಟ್ರಿಗಳನ್ನೂ ಗಾರ್ಡರನ್ನೂ ಮಧ್ಯರಾತ್ರಿ ಗುಂಡಿಕ್ಕಿ ಕೊಲ್ಲಲಾಯಿತು. ಸಮಾಚಾರವೇನೆಂದು ನೋಡಲು ಹೊರಗೆ ಬಂದ ಬ್ರಿಟಿಶ್ ಅಧಿಕಾರಿಗಳು ಸಿಪಾಯಿಗಳ ಗುಂಡಿಗೆ ಆಹುತಿಯಾದರು. ಫ್ಯಾನ್‌ಸೇಕ ಎಂಬ ಕಿಲ್ಲೆಯ ಪ್ರಮುಖ ಸೇನಾನಿಯು ತನ್ನ ಸೈನ್ಯಕ್ಕೆ ಆಜ್ಞೆ ಕೊಡುವಾಗ ಗುಂಡಿಗೆ ಬಲಿಯಾದನು. ಹದಿನಾಲ್ಕು ಅಧಿಕಾರಿಗಳು, ತೊಂಭತ್ತೊಂಭತ್ತು ಆಂಗ್ಲ ಸೈನಿಕರು ಅಲ್ಲಿಂದಲ್ಲೆ ಸತ್ತರು. ಉಳಿದ ಕೆಲವರೂ ನಂತರ ಗಾಯಗಳಿಂದ ಮಡಿದರು. ಆಫೀಸರರ ಬಂಗ್ಲೆಗಳನ್ನು ಲೂಟಿಮಾಡಿ ಸುಡಲಾಯಿತು. ಸ್ತ್ರೀಯರುಮಕ್ಕಳಿಗೆ ಮಾತ್ರ ಯಾವ ಅಪಾಯವೂ ಸಂಭವಿಸಲಿಲ್ಲ. ಬೆಳ-ಗಾಗುವದರೊಳಗೆ ವೆಲ್ಲೂರ ಕಿಲ್ಲೆಯ ಮೇಲೆ ಟಿಪ್ಪೂ ಸುಲ್ತಾನನ ಧ್ವಜವು ಹಾರಾಡಹತ್ತಿತು. ಗಲಭೆಯಾದದ್ದು ರಾತ್ರಿ ಕತ್ತಲೆಯಲ್ಲಿ; ಕಿಲ್ಲೆಯ ಹೊರಗಿದ್ದ ಓರ್ವ ಆಂಗ್ಲ ಅಧಿಕಾರಿ ಮೇಜರ ಕೋಟ್ಸ್ ಒಳಗಿನ ಗಲಭೆ ಯನ್ನು ಕೇಳಿ ಅಂಥ ಅಂಧಕಾರದಲ್ಲಿಯೆ ಅರ್ಕಾಟಿಗೆ ಓಡಿದನು. ಅಲ್ಲಿ ಬ್ರಿಟಿಶ್ ಸೈನ್ಯವಿತ್ತು ; ಕರ್ನಲ್ ಗಿಲೆಸ್ಪಿ ಎಂಬ ಅಧಿಕಾರಿಯಿದ್ದನು. ಕೂಡಲೆ ಅವನು ಕೆಲವು ಬಿಳಿಯ ಸೈನ್ಯ, ಕೆಲವು ಹಿಂದೀ ಅಶ್ವಾರೋಹಿಗಳೊಡನೆ ವೆಲ್ಲೂರಿಗೆ ಬಂದನು. ಕಿಲ್ಲೆಯ ಒಳಬಾಗಿಲು ಮುಚ್ಚಿತ್ತು. ಈ ಧೀರನು ಗೋಡೆ ಹತ್ತಿ ಒಳಗೆ ಹೋದಮೇಲೆ ಹಿಂದಿನಿಂದ ಅವನ ಸೈನ್ಯ ಬಂದಿತು. ಕೋಟೆಯು ವಶವಾದ ಮೇಲೆ ಬಂಡಾಯ ಹೂಡಿದ ಸಿಪಾಯರ ಮೇಲೆ ಉಗ್ರವಾದ ಸೇಡು ನಡೆಯಿತು. ಟಿಪ್ಪೂನ ಮಕ್ಕಳು ಅಂದು ಉಳಿದವರೇ ಅಲ್ಲ. ಅವರ ಪಾಲಕತ್ವ ವನ್ನು ವಹಿಸಿಕೊಂಡಿದ್ದ ಕರ್ನಲ್ ಮ್ಯಾರಿಯಟ್ ಅವರನ್ನು ಕಾಪಾಡಿದನು.

ಟಿಪ್ಪೂನ ಮಕ್ಕಳಿಂದಲೇ ಬಂಡಾಯದ ಉಗಮವಾಯಿತೆಂದು ಯಾವ ಐತಿಹಾಸಿಕ ಕಾಗದಪತ್ರಗಳಿಂದಲೂ ಸಿದ್ಧವಾಗಿಲ್ಲ. ಅವರು ದಣಿದ ಬಂಡುಗಾ ರರಿಗೆ ತಮ್ಮ ಅರಮನೆಯಿಂದ ಆಹಾರನೀರುಗಳನ್ನು ಕಳಿಸುತ್ತಿದ್ದರೆಂದೂ ಅವ

ರನ್ನು ಹುರಿದುಂಬಿಸುತ್ತಿದ್ದರೆಂದೂ ಕೆಲವು ಇತಿಹಾಸಕಾರರು ಆರೋಪಿಸಿದ್ದಾರೆ. ಮದ್ರಾಸ ಸರಕಾರವು ಮಾತ್ರ ಕೂಡಲೆ ಸಿಪಾಯಿಗಳ ಧಾರ್ಮಿಕ ಭಾವನೆಗಳಿಗೆ ನೋವಾಗುವಂತಹ ಯಾವ ಬದಲಾವಣೆ-ಸುಧಾರಣೆಗಳನ್ನು ಒತ್ತಾಯಪಡಿಸ ತಕ್ಕದ್ದಲ್ಲವೆಂದು ಸಾರಿ ತನ್ನ ಮೊದಲಿನ ಆಜ್ಞೆಯನ್ನು ಹಿಂತೆಗೆದುಕೊಂಡಿತು. ಟಿಪ್ಪೂನ ಮಕ್ಕಳಿಂದಲೆ ಈ ಗಲಭೆಗಳಾಗಿದ್ದರೆ ಮದ್ರಾಸ ಸರಕಾರವು ತನ್ನ ಆಕ್ಷೇಪಾರ್ಹ ಆಜ್ಞೆಯನ್ನು ರದ್ದುಪಡಿಸಲು ಕಾರಣವಿರಲಿಲ್ಲ.

ಸಿಪಾಯಿಗಳ ಧರ್ಮಾಚಾರಗಳ ಮೇಲೆ ಕಂಪನಿಸರಕಾರವು ಆಕ್ರಮಣ ಮಾಡುತ್ತಿವೆ ಎಂಬ ಭಯ ಮತ್ತು ಸಂಶಯಗಳು ದಕ್ಷಿಣಭಾರತದಲ್ಲಿ ೧೮೦೦ ರಿಂದಲೆ ಹರಡಿಕೊಂಡಿದ್ದವು. ವೆಲ್ಲೂರ ಬಂಡಾಯದ ಕಾಲಕ್ಕೆ ಊರುಗಳ ಸಂತೆಗಳಲ್ಲಿ ಫಕೀರರು ಸರಕಾರದ ವಿರುದ್ಧ ಪ್ರಚಾರಮಾಡುವದು ನಡೆದಿತ್ತು; ಚಪಾತಿಗಳ ಹಂಚುವಿಕೆಯೂ ನಡೆದಿತ್ತು. ಸಂಬಳ ಮತ್ತು ಭತ್ತೆಗಳ ಸಲು ವಾಗಿ ಸೈನ್ಯದಲ್ಲಿ ತಂಟೆಯು ನಡೆದಿತ್ತು. ಹಿಂದೀಯರಿಗೆ ಸೈನ್ಯದಲ್ಲಿ ಮೇಲು ಸ್ಥಳಗಳು ದೊರೆಯಲಾರವೆಂಬ ದೂರು ಅಲ್ಲಲ್ಲಿ ಕೇಳಬರುತ್ತಿತ್ತು. ಬಿಳಿಯರಲ್ಲಿ ಹಿಂದೀಯರ ಬಗ್ಗೆ ಇದ್ದ ತಿರಸ್ಕಾರವು ಸೈನ್ಯದಲ್ಲಿ ಆಗಾಗ್ಗೆ ವ್ಯಕ್ತವಾಗಹತ್ತಿತ್ತು.[2]

ಜನರಲ್ ಆರ್ಥರ ವೆಲ್ಲೆಸ್ಲಿಯು ಗಾಯಗೊಂಡ ಸಿಪಾಯರನ್ನು ಗುಂಡಿಕ್ಕಿ ಕೊಲ್ಲಬೇಕೆಂಬ ಆಜ್ಞೆಯನ್ನು ಹೊರಡಿಸಿರುವನೆಂದು ಒಮ್ಮೆ ದಟ್ಟವಾಗಿ ವಾರ್ತೆ ಹಬ್ಬಿತು! ವೆಲ್ಲೂರು ಬಂಡಾಯವು ಶಾಂತವಾದರೂ ಸಿಪಾಯಿಗಳ ಅಂತ ರಂಗವು ಶಾಂತವಾಗಿರಲಿಲ್ಲ. ತನ್ನ ಸ್ವಾಮಿಯ ಮೇಲೆ ಸಿಪಾಯಿಗೆ ತುಂಬಾ ಸಂಶಯವುಂಟಾಗಿ ಹೋಯಿತು. ಅವನ ಸರಳ ಮನಸ್ಸು ಇಂಗ್ಲೀಷರ ಮೇಲೆ ಯಾರು ಏನೇ ದೂರು ಹೇಳಿದರೂ ನಂಬತೊಡಗಿತು.

ಮುಂದೆ ನಂದಿದುರ್ಗ, ಹೈದರಾಬಾದ, ಪಲಿಯಾಮಕೊಟ್ಟೆ ಹಾಗೂ

2. ಹಿಂದೀ ಅಧಿಕಾರಿಗಳಿಗೆ ಬಿಳಿಯ ಸೈನಿಕರು ಸಲಾಂ ಸಹ ಮಾಡುತ್ತಿರಲಿಲ್ಲ. ಕವಾಯಿತಿನ ವೇಳೆಯಲ್ಲಿ ಇಂಗ್ಲೀಷರು ತಪ್ಪಿದರೆ ಹಿಂದೀಯರನ್ನು ಬೈಯಲಾಗುತ್ತಿತ್ತು. ಸೈನಿಕ ಜೀವನದಲ್ಲಿ ಕೂದಲು ಬೆಳ್ಳಗಾದ ಹಿಂದೀ ಅಧಿಕಾರಿಗಳಿಗೆ ಆದೇ ಬಂದ ಬಿಳಿಯ ತರುಣರು ಮನಬಂದಂತೆ ಮಾತಾಡುತ್ತಿದ್ದರು. ಆಂಗ್ಲ ಅಧಿಕಾರಿಗಳು ತಮ್ಮೊಡನೆ ದೇಶದ ಸುಂದರ ಸ್ತ್ರೀಯರ ಒಂದು ಅಂತಃಪುರವನ್ನೇ ತರುತ್ತಿದ್ದರು. ಆದರೆ ಸಿಪಾಯಿಗೆ ಒಂದು ಗುಲಾಮರ ಹುಡಿಗೆಯನ್ನು ಸಹ ನೋಡುವ ಸ್ವತಂತ್ರತೆ ಇದ್ದಿರಲಿಲ್ಲ. Kaye, Vol. I-161.

ವಲಾಜಹಾಬಾದ ಮೊದಲಾದ ಅನೇಕ ಠಾಣ್ಯಗಳಲ್ಲಿ ಸೈನಿಕರು ಒಳಸಂಚು ನಡೆಸಿದರು. ಆದರೆ ಅವು ಬೇಗನೆ ಬಯಲಿಗೆ ಬಂದು ಸಿಪಾಯಿಗಳ ಯಾವ ಪ್ರಯತ್ನವೂ ಸಫಲವಾಗಲಿಲ್ಲ. ಮತ್ತು ಈ ಎಲ್ಲ ಪ್ರಸಂಗಗಳಲ್ಲಿ ಬ್ರಿಟಿಶರ ನೀತಿಯಿಂದ ತಾನು ಧರ್ಮಭ್ರಷ್ಟನಾಗುವ ಭಯವೇ ಸಿಪಾಯಿಗೆ ಮುಖ್ಯ ವಾಗಿತ್ತು. ಆಗ ಇನ್ನೂ ೧೮೫೭ರ ಕಾಡತೂಸು ಬಂದಿರಲಿಲ್ಲ. ೧೮೫೭ರ ಬಂಡಾಯಕ್ಕೆ ಕನಿಷ್ಠ ಐವತ್ತು ವರುಷಗಳ ಹಿನ್ನೆಲೆ ಹಾಗೂ ಕಾರಣಗಳು ಇವೆ. ಸಿಪಾಯಿಯ ಸಾಮಾಜಿಕ ಮತ್ತು ನೌಕರಿ ಪರಿಸ್ಥಿತಿಯೇ ವಿಲಕ್ಷಣವಾಗಿತ್ತು. ಅವನು ಯಾವ ಬಗೆಯ ರಾಷ್ಟ್ರೀಯ ಅಭಿಮಾನದಿಂದ ಅಥವಾ ದೇಶಸೇವೆ ಗೆಂದು ಕಂಪನಿ ಸೈನ್ಯವನ್ನು ಸೇರಿದವನಲ್ಲ. ಅದರಂತೆ ರಾಷ್ಟ್ರಘಾತವೂ ಅವನ ಕಲ್ಪನೆಗೆ ಮೀರಿದ ವಿಷಯವಾಗಿತ್ತು. ಕೇವಲ ತನ್ನ ಉಪಜೀವನದ ಸಲು ವಾಗಿ ಹಿಂದೀ ಸಿಪಾಯಿಯು ಕಂಪನಿಯ ಸೈನ್ಯ ಸೇರಿದ್ದ. ಉಂಡ ಮನೆಗೆ ದ್ರೋಹ ಬಗೆಯಬಾರದೆಂಬುದೊಂದು ಅವನಿಗೆ ಗೊತ್ತಿತ್ತು. ಆದರೆ ತನ ಧನಿಯು ವಚನಭಂಗಮಾಡಿದರೆ ಅವನು ಸಂತಪ್ತನಾಗಿ ತಾನೂ ತನ್ನ ಮಾತು ಮುರಿಯುತ್ತಿದ್ದನು. ಈ ಬಗೆಯ ಉದಾಹರಣೆಗಳನ್ನು ಆಂಗ್ಲ ಬರಹಗಾರರೆ ಸಾಕಷ್ಟು ಕೊಟ್ಟಿದ್ದಾರೆ. ಎರಡನೆಯದಾಗಿ ತನ್ನ ಧರ್ಮ ಮತ್ತು ವರ್ಣಾ ಶ್ರಮಗಳಿಗೆ ಧಕ್ಕೆ ಬರುವ ಪ್ರಸಂಗ ಬಂದಲ್ಲಿ ಅವನು ತನ್ನ ಧನಿಯನ್ನು ಕೇಳುತ್ತಿರಲಿಲ್ಲ. ಯಾಕಂದರೆ ಇಷ್ಟೆಲ್ಲ ಕಷ್ಟ ಸಹಿಸಿಯೂ ಜಾತಿನೀತಿಗಳಿಂದ ಭ್ರಷ್ಟರಾಗುವ ಹೊತ್ತು ಬರಬೇಕೇ, ಎಂಬುದೇ ಅವನ ಪ್ರಶ್ನೆ. ಕ್ರಿಶ್ಚಿಯನ್ ಸರಕಾರಕ್ಕೆ ಇದು ಕೊನೆಯವರೆಗೂ ತಿಳಿಯಲಿಲ್ಲ.

ಸೀತಾರಾಮನೆಂಬ ಓರ್ವ ಹಿಂದು ಸುಭೇದಾರನು ಆಗಿನ ಧಾರ್ಮಿಕ ಭಾವನೆ ಗಳ ಬಗ್ಗೆ ಹೀಗೆ ಬರೆದಿದ್ದಾನೆ— "ಸಿಂಧು ನದಿಯನ್ನು ದಾಟುವದೆಂದರೆ ನಮ್ಮ ಮೈಯಲ್ಲಿ ನಡಗು ಹುಟ್ಟುತ್ತಿತ್ತು. ಪರದೇಶಗಮನವನ್ನು ಹಿಂದು ಧರ್ಮವು ಬಹಿಷ್ಕರಿಸುತ್ತದೆ. ಇದರಿಂದ ಎಷ್ಟೋ ಸಿಪಾಯರು ಸೈನ್ಯ ಬಿಟ್ಟು ಓಡಿಹೋದರು. ಹಿಂದು ಸಿಪಾಯಿ ಮರಣಹೊಂದಿದರೆ ಅಲ್ಲಿ ನಮಗೆ ಗಂಗೋದಕವು ಸಿಗುತ್ತಿರಲಿಲ್ಲ. ದಹನ ಮಾಡಲು ಕಟ್ಟಿಗೆಯು ಸಿಗುತ್ತಿರಲಿಲ್ಲ. ಸತ್ತವನು ನರಿಯ ಪಾಲಾಗುವದೆ." ಕಾಬೂಲದಲ್ಲಿ ಸೀತಾರಾಮನು ವೈರಿಗಳ ಕೈಗೆ ಸಿಕ್ಕನು. ಮುಂದೆ ಹೇಗೋ ಪಾರಾಗಿ ಭಾರತಕ್ಕೆ ಮರಳಿದನು. ಆಮೇಲಿನ ತನ್ನ ಅನುಭವವನ್ನು ಅವನು ಹೀಗೆ ಹೇಳಿದ್ದಾನೆ: "ನನ್ನ ಅಪ್ಪ

ಸ್ನೇಹಿತರು ನನ್ನನ್ನು ಜಾತಿಭ್ರಷ್ಟನೆಂದು ಕರೆದು ನನ್ನೊಡನೆ ಎಲ್ಲ ಸಂಪರ್ಕ ವನ್ನೂ ತ್ಯಜಿಸಿದರು. ನನಗೆ ಇವನ್ನೆಲ್ಲ ನೋಡಿ ನಾನು ಕಾಬೂಲಿನಲ್ಲಿಯೇ ಯಾಕೆ ಉಳಿಯಲಿಲ್ಲ ಎನಿಸಿತು. ಅಲ್ಲಿ ನನ್ನನ್ನು ಯಾರೂ ನಿಷ್ಕರುಣೆಯಿಂದ ಕಂಡಿರಲಿಲ್ಲ. ಮನೆಗೆ ಹೋದರೆ ನನ್ನ ತಂದೆಯು ಒಳಗೆ ಸಹ ಬರಗೊಡಲಿಲ್ಲ; ನನ್ನ ಬಂಧುವಂತೂ ನನ್ನ ವೈರಿಯೇ ಆಗಿಬಿಟ್ಟನು. ನನ್ನನ್ನು ಒತ್ತಾಯದಿಂದ ಭ್ರಷ್ಟಗೊಳಿಸಲಾಗಿತ್ತೆಂಬ ನಾನು ಸಿದ್ಧಮಾಡಿದ ಮೇಲೆ ನನ್ನ ತಂದೆಯು ಹಣ ವೆಚ್ಚ ಮಾಡಿ ನನಗೆ ತಕ್ಕ ಪ್ರಾಯಶ್ಚಿತ್ತವನ್ನು ಕೊಡಿಸಿದನು." (ಸೀತಾರಾಮನ ಕಥೆಗಾಗಿ ಸೇನ, ಪುಟ ೬, ನೋಡಿರಿ.)

ಸಿಪಾಯಿಗಳ ಧಾರ್ಮಿಕ ಭಾವನೆಗಳ ಸತ್ವಪರೀಕ್ಷೆಯು ೧೮೨೪ರಲ್ಲಿ ಮತ್ತೊಮ್ಮೆ ವಿಶೇಷ ಉಗ್ರಸ್ವರೂಪದಲ್ಲಿ ನಡೆಯಿತು. ಹಿಂದುಗಳಿಗೆ ಸಮುದ್ರ ಪರ್ಯಟನವು ಬಹಿಷ್ಕೃತವಿದ್ದುದು ಕಂಪನಿ ಸರಕಾರಕ್ಕೆ ಗೊತ್ತಿತ್ತು. ಆದ್ದರಿಂದ ಕೆಲವು ದಳಗಳನ್ನು ಹಿಂದುಸ್ತಾನದಿಂದ ಹೊರಗೆ ಕಳಿಸತಕ್ಕದ್ದಲ್ಲವೆಂಬ ಕರಾರಿನ ಮೇಲೆಯೆ ರಿಕ್ರೂಟ ಮಾಡಿಕೊಳ್ಳಲಾಗಿತ್ತು. ಕೆಲವು ದಳಗಳು ಬೇಕಾದಲ್ಲಿ ಹೋಗಿ ಯುದ್ಧ ಮಾಡುವ ಒಪ್ಪಿಗೆ ಕೊಟ್ಟೇ ಸೇರಿದ್ದವು. ಮೊದಲಿನ ದಳಗಳಿಗೆ "ಸ್ಪೆಶಲ್ ಸರ್ವಿಸ್ ಯೂನಿಟ್ಸ" ಎಂದೂ ಎರಡನೆಯ ವರ್ಗಗಳಿಗೆ "ಜನರಲ್ ಸರ್ವಿಸ್ ಯೂನಿಟ್ಸ" ಎಂದೂ ಕರೆಯಲಾಗುತ್ತಿತ್ತು. ೧೮೨೪ರಲ್ಲಿ ಬ್ರಹ್ಮದೇಶದ ರಾಮೂ ಎಂಬಲ್ಲಿ ಬ್ರಿಟಿಶರಿಗೆ ಬ್ರಹ್ಮೀಯರಿಂದ ಪ್ರಚಂಡ ಸೋಲಾಯಿತು. ಪೂರ್ವಬಂಗಾಲದ ಪೇಟೆಗಳಲ್ಲೆಲ್ಲ ವಿಲಕ್ಷಣ ವಾರ್ತೆಗಳು ಹಬ್ಬಿದವು. ಬ್ರಹ್ಮೀಯರು ಹಿಂದೀ ಸಿಪಾಯರನ್ನು ಧ್ವಂಸಮಾಡಿ ಬಂಗಾಲದ ಮೇಲೆ ದಂಡೆತ್ತಿ ಬರುತ್ತಿರುವರೆಂದೂ ಹಿಂದುಸ್ತಾನದ ಪ್ರಧಾನ ಸೇನಾಪತಿಯು ಹತನಾಗಿರುವ ನೆಂದೂ ಗವರ್ನರ ಜನರಲನು ವಿಷಪಾನದಿಂದ ಗತಪ್ರಾಣನಾದನೆಂದೂ ಹೋದಲ್ಲೆಲ್ಲ ಜನರು ಆಡಹತ್ತಿದರು! ಕಂಪನಿ ಆಳಿಕೆಯ ಅಧಿಕೃತ ಮುಕ್ತಾಯದ ಸುದ್ದಿಯನ್ನು ಕೇಳಲು ಎಲ್ಲರೂ ಸಿದ್ಧರಾದರು.[3] ಈ ಅವಮಾನದ ಪರಿಸ್ಥಿತಿಯನ್ನು ಹೋಗಲಾಡಿಸಲು ಬ್ರಹ್ಮದೇಶದ ಮೇಲೆ ದಂಡೆತ್ತಿ ಹೋಗಬೇಕೆಂದು ಕಂಪನಿ ಸರಕಾರವು ನಿಶ್ಚಯಮಾಡಿತು. ಜನರಲ್ ಸರ್ವಿಸ್ ವರ್ಗದಲ್ಲಿದ್ದ ಕೆಲವು ದಳಗಳನ್ನು ಜಲಮಾರ್ಗದಿಂದ ಮದ್ರಾಸದಿಂದ ಸುಸೂತ್ರವಾಗಿ ಸಾಗಿಸಲಾಯಿತು. ಬ್ಯಾರೆಕಪೂರದಲ್ಲಿದ್ದ ಬಂಗಾಲ ಸೈನ್ಯದ ೪೭ನೆಯ ದಲಕ್ಕೂ

3. Kaye, Vol. I–194.

ಬ್ರಹ್ಮದೇಶಕ್ಕೆ ಹೊರಡಲು ಆಜ್ಞೆಯು ಬಂದಿತು. ೪೭ನೆಯ ದಲವು ಸ್ಪೆಶಲ್ ಸರ್ವಿಸ್ ವರ್ಗದ್ದು. ಆದ್ದರಿಂದ ಜಲಮಾರ್ಗದಿಂದ ಕಳಿಸುವ ಪ್ರಶ್ನೆಯೇ ಇರಲಿಲ್ಲ. ಚಿತಗಾಂಗಮಾರ್ಗವಾಗಿ ಭೂಮಾರ್ಗದಿಂದಲೆ ಇವರನ್ನು ಬ್ರಹ್ಮೀ ಗಡಿಗೆ ಕಳಿಸುವ ಸಿದ್ಧತೆಗಳು ಭರದಿಂದ ನಡೆದವು. ಆದರೂ ಎತ್ತು ಗಾಡಿಗಳು ಲಗುಬಗೆಯಿಂದ ದೊರೆಯದೆ ಮಳೆಗಾಲದಲ್ಲಿ ಸಾಗಿಸುವ ಕೆಲಸವು ಬಹಳ ಮಂದವಾಗಿ ನಡೆಯಿತು. ಈ ವಿಲಂಬದ ಸಮಯದಲ್ಲಿ ಸಿಪಾಯಿಗಳು ಸರಕಾರದ ಹುಕುಮನ್ನು ಎದುರಿಸಲು ಸಿದ್ಧತೆ ನಡೆಸಿದರು; ಮತ್ತು ಭತ್ತೆಯನ್ನು ಇಮ್ಮಡಿಗೊಳಿಸದೆ ಬ್ರಹ್ಮದೇಶಕ್ಕೆ ಹೋಗುವದಿಲ್ಲವೆಂದು ಅಧಿಕಾರಿಗಳಿಗೆ ಸ್ಪಷ್ಟವಾಗಿ ತಿಳಿಸಿಬಿಟ್ಟರು. ಚಿತಗಾಂಗಿಗೆ ಹೇಗಾದರೂ ಹೋದರೆ ಮುಂದೆ ತಮ್ಮನ್ನು ಬಲವಂತದಿಂದ ಹಡಗುಗಳಲ್ಲಿಯೇ ಒಯ್ಯಲಾಗುವದೆಂದು ಸಿಪಾಯಿಗಳಿಗೆ ಯಾರೊ ಹೆದರಿಸಿಬಿಟ್ಟಿದ್ದರು!

ಪ್ರಧಾನಸೇನಾಪತಿ ಸರ್ ಎಡ್ವರ್ಡ ಪೇಜೆಟ ಬಹಳ ನಿಷ್ಠುರನಿದ್ದನು. ಹಿಂದೀ ಸಿಪಾಯಿಗಳ ಬಗ್ಗೆ ಅವನಿಗೆ ಬಹಳ ತಿರಸ್ಕಾರವಿತ್ತು. ಅವನು ೧-೧೧-೧೮೨೪ನೆಯ ದಿನ ಸಿಪಾಯಿ ದಳಗಳನ್ನು ಕವಾಯಿತಿಗೆ ಮೈದಾನದಲ್ಲಿ ಕೂಡಿಸಿದನು. ಹಿಂದೆ ಯುರೋಪಿಯನ್ ಸೈನ್ಯ ನಿಂತಿತ್ತು. ಯುರೋಪಿಯನ್ ಸೈನ್ಯವು ತಮ್ಮ ಮೇಲೆ ಗೋಳಿಬಾರು ಮಾಡಲು ಸಿದ್ಧವಾಗಿ ನಿಂತಿದೆಯೆಂಬುದು ಸಿಪಾಯರಿಗೆ ತಿಳಿದಿರಲಿಲ್ಲ. ಯಾಕಂದರೆ ಅಧಿಕಾರಿಗಳು ಈ ಸಂಗತಿಯನ್ನು ಅವರಿಗೆ ತಿಳಿಸಿಯೇ ಇರಲಿಲ್ಲ! ಪ್ರಧಾನಸೇನಾಪತಿಗಳು ನಿಷ್ಠುರ ಮಾತುಗಳನ್ನಾಡಿ 'ಬ್ರಹ್ಮದೇಶಕ್ಕೆ ನಡೆಯಿರಿ ಇಲ್ಲವೆ ಶಸ್ತ್ರಗಳನ್ನು ಕೆಳಗಿಳಿಸಿರಿ' ಎಂದು ಸ್ಪಷ್ಟ ಹೇಳಿದರು. ಸಿಪಾಯಿಗಳು ಎರಡೂ ಮಾಡದೆ ಸ್ತಬ್ಧ ನಿಂತಿದ್ದರು. ಗೋಳಿಬಾರಿನ ಹುಕುಮಾಯಿತು. ಸಿಪಾಯಿಗಳು ಗಾಬರಿಗೊಂಡು ಬಂದೂಕುಗಳನ್ನು ಒಗೆದು ಓಡಹತ್ತಿದರು. ಎಷ್ಟೋ ಸಿಪಾಯಿಗಳು ಗುಂಡಿಗೆ ಬಲಿಯಾದರು. ನದಿಯ ಕಡೆಗೆ ಓಡಿದವರು ನದಿಯಲ್ಲಿ ಮುಳುಗಿದರು. ಸಿಪಾಯಿವರ್ಗದಲ್ಲಿ ಹಾಹಾಕಾರವಾಯಿತು. ಸಿಪಾಯಿಗಳು ಎದುರಾಗಿ ನಿಂತು ಯುದ್ಧ ಮಾಡಲೆ ಇಲ್ಲ; ಯುದ್ಧಮಾಡುವ ವಿಚಾರವೆ ಅವರಿಗೆ ಇರಲಿಲ್ಲ. ಅವರು ಚೆಲ್ಲಿಹೋದ ಒಂದೂ ಬಂದೂಕಿನಲ್ಲಿ ಕಾಡತೂಸು ಇರಲಿಲ್ಲ![4] ತಮ್ಮ ನ್ಯಾಯವಾದ ಬೇಡಿಕೆಗಳ ಸಲುವಾಗಿ ಅವರು ಹಾಗೆ

4. Kaye, Vol. 1,194-195

ವರ್ತಿಸಿದ ಮಾತ್ರಕ್ಕೆ ಇಂಥ ಅತ್ಯಾಚಾರವು ನಡೆದುಹೋಯಿತು. ಇದರಿಂದ ಎಷ್ಟೋ ವರ್ಷ ಸಿಪಾಯರಲ್ಲಿ ಶಿಸ್ತು ಉಳಿಯಿತೆಂದು ಆಂಗ್ಲ ಇತಿಹಾಸಕಾರರು ಜಂಭ ಕೊಚ್ಚಿದ್ದಾರೆ. ಆದರೆ ಆಗ ಸಿಪಾಯಿಗಳು ಸುಮ್ಮನಾದರೂ ಅವರ ಬಂಡಾಯದ ಮನೋವೃತ್ತಿ ಹೋಗಲಿಲ್ಲ. ೪೭ ನೆಯ ದಳವನ್ನು ವಿಸರ್ಜಿಸಿ ಮುಖಂಡರನ್ನು ಗಲ್ಲಿಗೇರಿಸಲಾಯಿತು.

೧೮೪೩ರಲ್ಲಿ ಕಂಪನಿಸರಕಾರವು ಸಿಂಧಪ್ರಾಂತದ ಮೇಲೆ ದಾಳಿಯನ್ನು ನಡೆಸಿದಾಗ ವಚನಭಂಗದ ಇನ್ನೊಂದು ಪ್ರಕರಣವು ನಡೆಯಿತು. ಬಂಗಾಲ ಸಿಪಾಯಿಗಳನ್ನು ಆಗ ಸಿಂಧಕ್ಕೆ ಕಳಿಸಬೇಕಾಯಿತು. ಸಿಂಧದ ಹವಾಮಾನವು ಆಗ ತುಂಬಾ ಅನಾರೋಗ್ಯಕರ. ಹೀಗೆ ದೂರ ಹೋದವರಿಗೆ ಊಟದ ಹೆಚ್ಚಿನ ಭತ್ತೆಯನ್ನು ಕೊಡಬೇಕೆಂಬುದೊಂದು ಹಳೆಯ ನಿಯಮ. ಆದರೂ ಒಂದು ದಳವು ಸಿಂಧಕ್ಕೆ ಮುಟ್ಟಿದ ಮೇಲೆ ಮತ್ತು ಇನ್ನೊಂದು ದಾರಿಯಲ್ಲಿರುವಾಗ ಈ ಭತ್ತೆಯನ್ನು ನಿರಾಕರಿಸಲಾಯಿತು ! ಸೈನ್ಯದಳಗಳು ಸ್ವಾಭಾವಿಕವಾಗಿ ಮುಂದೆ ಹೋಗಲು ನಿರಾಕರಿಸಿದವು. ಸಿಪಾಯಿಗಳ ಮಾತು ಸರಿಯಾಗಿತ್ತು ; ಆದರೆ ಸರಕಾರವು ಅವರನ್ನು ಸಮಾಧಾನಮಾಡದೆ ಅವರ ಮೇಲೆ ಹರಿಹಾಯ್ದು ಒಂದು ದಳವನ್ನು ವಿಸರ್ಜನೆ ಮಾಡಿ ಮತ್ತೊಂದವನ್ನು ಉಗ್ರ ಶಿಕ್ಷೆಗೆ ಗುರಿಪಡಿಸಿತು. ಸರಕಾರವು ಕೊಡುವ ವಚನಗಳಿಗೆ ಇದರಿಂದ ಬೆಲೆಯೇ ಇಲ್ಲದಾಯಿತು. ( Malleson, Vol. III, 473-4 )

ಈ ಘಟನೆಯಲ್ಲಿ ಧರ್ಮಾಚಾರಗಳಿಗೆ ಸಂಬಂಧಿಸಿದ ವಿಷಯಗಳೇ ಇರಲಿಲ್ಲ. ೧೮೫೨ ರಲ್ಲಿ ಇದಕ್ಕೂ ಗಂಭೀರಸ್ವರೂಪದ ಘಟನೆಯೊಂದು ನಡೆಯಿತು. ೧೮೫೨ರಲ್ಲಿ ಡಾಲಹೌಸಿಯು ಆಗಲೆ ಗವರ್ನರಜನರಲ್ಲನಾಗಿ ಹಿಂದುಸ್ಥಾನಕ್ಕೆ ಬಂದಿದ್ದನು. ಬ್ರಹ್ಮದೇಶದಲ್ಲಿಯ ಗಸ್ತಿ ಚಟುವಟಿಕೆಗಳಿಗೆ ಕೆಲವು ಸೈನ್ಯವನ್ನು ಕಳಿಸುವ ಪ್ರಸಂಗವು ಬಂದಿತು. ಡಾಲಹೌಸಿಯು ಬ್ಯಾರೆಕಪೂರದಲ್ಲಿಯ ಒಂದು ಸಿಪಾಯಿದಳಕ್ಕೆ ಬ್ರಹ್ಮದೇಶಕ್ಕೆ ಹೋಗಲು ಆಜ್ಞೆ ಮಾಡಿದನು. ಈ ದಳವು ಸ್ಪೆಶಲ್ ಸರ್ವಿಸ ವರ್ಗದ್ದಿದ್ದು ಹಿಂದುಸ್ತಾನದ ಹೊರಗೆ ಕಳಿಸಬಾರದೆಂಬ ಕರಾರಿನಮೇಲೆ ಸೇರ್ಪಡೆ ಹೊಂದಿತ್ತು. ಆದ್ದರಿಂದ ಗವರ್ನರಜನರಲ್ಲನ ಆಜ್ಞೆಯನ್ನು ಅವರು ನಿರಾಕರಿಸಿ, “ನಾವು ಹೋಗುವದಿಲ್ಲ” ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಸಿಪಾಯಿಗಳು ಕಾಯದೆ ದೃಷ್ಟಿಯಿಂದ ಸರಿಯಾಗಿದ್ದರಿಂದ ಡಾಲಹೌಸಿಯು ಸುಮ್ಮನಾಗಬೇಕಾಯಿತು. ಆದರೆ

ಅವನಿಗೆ ಅತೀವ ಸಿಟ್ಟು ಬಂದಿತು. ಗವರ್ನರಜನರಲ್ಲರದೇ ತಪ್ಪಿದ್ದರೂ ಅಂಥ ಉಚ್ಚ ಅಧಿಕಾರಿಯ ಆಜ್ಞೆಯನ್ನು ಯಶಸ್ವಿಯಾಗಿ ಎದುರಿಸಿದ್ದು ಸಿಪಾಯಿಗಳ ಶಿಸ್ತನ್ನು ಸಡಲಿಸಲು ಕಾರಣವಾಯಿತು. ( Malleson, III, 476-77 )

ಈ ಮೂಲಕ ಕಂಪನಿಯ ಸರಕಾರದ ಸದುದ್ದೇಶಗಳ ಬಗ್ಗೆ ಸಿಪಾಯಿಯು ತುಂಬಾ ಸಂಶಯಪಡಲಾರಂಭಿಸಿದನು. ಸರಕಾರದ ಆಶ್ವಾಸನಗಳಿಗೆ ಮೊದಲಿನಂತೆ ಬೆಲೆ ಉಳಿಯಲಿಲ್ಲ. ಸರಕಾರಿ ಆಜ್ಞೆಗಳನ್ನು ಸಿಪಾಯಿಗಳು ಸಹಜವಾಗಿ ಉಲ್ಲಂಘನೆ ಮಾಡತೊಡಗಿದರು. ೧೮೫೬ ರಲ್ಲಿ ಔಧದ ನವಾಬ ವಜೀರ ಅಲಿಯನ್ನು ಪದಚ್ಯುತಗೊಳಿಸಿ ಔಧವನ್ನು ಕಂಪನಿರಾಜ್ಯಕ್ಕೆ ಸೇರಿಸಿಕೊಳ್ಳಲಾಯಿತು. ಇದರ ಪರಿಣಾಮಗಳು ಗಂಭೀರವಾಗಬಹುದೆಂದು ಕಂಪನಿ ಅಧಿಕಾರಿಗಳಿಗೆ ಸಹ ಕಲ್ಪನೆಯಿರಲಿಲ್ಲ. ತನ್ನ ರಾಜ್ಯತೃಷ್ಣೆಯನ್ನು ಹಿಂಗಿಸಲು ಡಾಲಹೌಸಿಯು ಈ ಕ್ರಮವನ್ನು ಸ್ವಲ್ಪ ಉದ್ದಾಮತನದಿಂದಲೆ ಕೈಕೊಂಡನು. ಬಂಗಾಲಸೈನ್ಯದಲ್ಲಿ ಬಹ್ವಂಶವು ಮತ್ತು ಮುಂಬೈಯಲ್ಲಿ ಕೆಲವಂಶವು ಔಧ ಸೈನಿಕರದೇ ಇತ್ತು. ನವಾಬನ ಪದಚ್ಯುತಿಯ ವಾರ್ತೆಯಿಂದ ಅವರಿಗೆ ಆಕಾಶವೇ ಕಳಚಿಬಿದ್ದಂತಾಯಿತು. ಔಧ ನವಾಬರು ಮೊದಲಿನಿಂದಲೂ ಕಂಪನಿ ಸರಕಾರದ ಪರಮಮಿತ್ರರು. ಪಂಜಾಬ, ಸಿಂಧ ಮತ್ತು ಅಫಗಾನಿಸ್ತಾನ ದಾಳಿಗಳಲ್ಲಿ ಕಂಪನಿಸರಕಾರಕ್ಕೆ ಅವರು ತನುಮನಧನಗಳಿಂದ ಸಹಾಯ ಮಾಡಿದ್ದರು. ಇಂಥವರಿಗೆ ಈ ಗತಿಯೆ ಎಂದು ಸಿಪಾಯಿಯು ಮರುಗಿದನು. ಇಂಗ್ಲೀಷ ಸರಕಾರದ ಮೇಲೆ ಉಳಿದಷ್ಟು ವಿಶ್ವಾಸವೂ ಹೋಗಿಬಿಟ್ಟಿತು. ನವಾಬನ ಸರಕಾರವು ಅವ್ಯವಸ್ಥಿತವಿದ್ದರೆ ಅದನ್ನೆ ಸುಧಾರಿಸಲು ಬರುತ್ತಿರಲಿಲ್ಲವೆ? ನವಾಬನ ಪದಚ್ಯುತಿಗೆ ರಾಜ್ಯಲಾಲಸೆಯಲ್ಲದೆ ಮತ್ತೇನು ಕಾರಣ ಎಂದು ಸಿಪಾಯಿಯ ಅಂತರಂಗವು ಆಲ್ಲೋಲಕಲ್ಲೋಲವಾಯಿತು.

ಎಲ್ಲ ರೀತಿಯಿಂದಲೂ ತಮ್ಮ ದೇಶದಲ್ಲಿಯೇ ತಮ್ಮ ಸ್ಥಾನಮಾನವು ಇಳಿಯತೊಡಗಿದೆಯೆಂದು ೧೮೫೦ರ ಸುಮಾರಿಗೆ ಹಿಂದೀಯರಿಗೆ ಹೊಳೆಯತೊಡಗಿತು. ಕಂಪನಿಸರಕಾರದ ಅಧಿಕಾರವು ಬೆಳೆದಹಾಗೆ ದೇಶದಲ್ಲಿಯ ಬಿಳಿಯರ ವರ್ತನವೂ ಬದಲಾಯಿತು. ಮೊದಲಿನ ಮೈತ್ರಿಯನ್ನು ಅವರು ಬಿಟ್ಟು ದುರಭಿಮಾನ-ತಿರಸ್ಕಾರಗಳಿಂದ ವರ್ತಿಸಹತ್ತಿದರು. ಆಗ ಭಾರತೀಯರಿಗೆ ತಮ್ಮ ಸ್ವಾತಂತ್ರ್ಯಗೌರವಗಳು ಹೋದವೆಂದು ಗೊತ್ತಾಯಿತು. ನಡೆದ ಸಂಗತಿಗಳ ಬಗ್ಗೆ ಜನರು ಇಷ್ಟು ಅಜ್ಞಾನವನ್ನು ಪ್ರದರ್ಶಿಸಿದ್ದು

ವಿಚಿತ್ರವೆ. ಅಖಿಲ ಭಾರತೀಯ ಸ್ವರೂಪದ ಒಂದು ಜಾಗೃತಿಯು ಇಲ್ಲದೆ ಇರುವದು ಈ ಪರಿಸ್ಥಿತಿಗೆ ಕಾರಣವಾಗಿರಬೇಕು. ನಮ್ಮ ಧರ್ಮ ನಮ್ಮ ಸಂಸ್ಕೃತಿಗಳು ಒಂದೇ ಆಗಿದ್ದರೂ ರಾಜಕೀಯದಲ್ಲಿ ಯಾವ ಐಕ್ಯಭಾವವೂ ಬೆಳೆದುಬಂದಿರಲಿಲ್ಲ.

ಇಂಗ್ಲೀಷರ ದಿಗ್ವಿಜಯವೂ ಒಂದು ವಿಶಿಷ್ಟ ಸ್ವರೂಪದ್ದೆ ಇತ್ತು. ಮೊದಲು ಕಂಪನಿಸರಕಾರದ ನೌಕರರು ರಾಜಪ್ರಜರೊಡನೆ ಅತ್ಯಂತ ದೀನರಾಗಿ ನಡೆದುಕೊಳ್ಳುತ್ತಿದ್ದರು. ರಾಜ್ಯವು ಕೈಗೆ ಬಂದಮೇಲೆ ಇಂಗ್ಲೀಷರು ತಮ್ಮ ಶೂರತನವನ್ನು ಹೇಳಿಕೊಳ್ಳಹತ್ತಿದರು. ಮೊದಲು ಶೂರತನದ ಸುದ್ದಿಯಿರಲಿಲ್ಲ. ಕಂಪನಿಯ ಆಸ್ತಿಯನ್ನೂ ಹಿತಸಂಬಂಧಗಳನ್ನೂ ಸಂರಕ್ಷಣೆಮಾಡಲು ಕ್ಲೈವ ಮೊದಲಾದವರು ತಮ್ಮ ಸೈನಿಕ ಚಟುವಟಿಕೆಗಳನ್ನು ಪ್ರಾರಂಭ ಮಾಡಿದರು. ಬ್ರಿಟಿಶ ಅರಸು ಅಥವಾ ಸೈನ್ಯದ ಹೆಸರಿನಲ್ಲಿ ಒಂದೂ ಯುದ್ಧವು ಆಗಲಿಲ್ಲ. ಬಾಬರ, ಅಲೆಕ್ಝಾಂಡರರಂತೆ ಹಿಂದುಸ್ತಾನದ ಮೇಲೆ ವಿಜಯಯಾತ್ರೆಯನ್ನು ನಡೆಸುವ ಧೈರ್ಯ ಅವರಿಗೆ ಎಂದೂ ಇರಲಿಲ್ಲ. ಹಾಗೆ ಮಾಡಿದ್ದರೆ ಹಿಂದೀಯರಿಗೆ ಅದರ ಅರ್ಥವಾಗಿ ಬೇಗನೆ ಇಂಗ್ಲೀಷರನ್ನು ಹೊರಗೆ ದೂಡಲಾಗುತ್ತಿತ್ತು. ಇಂಗ್ಲೀಷರ ನಿಜವಾದ ಉದ್ದೇಶವು ಹೊರಬಿದ್ದು ಜನರು ವಿರೋಧ ಮಾಡಲು ಸಿದ್ಧವಾಗುವಷ್ಟರಲ್ಲಿ ಇಂಗ್ಲೀಷರು ದೇಶದಾದ್ಯಂತ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡೇ ಬಿಟ್ಟಿದ್ದರು.

ಧಾರ್ಮಿಕ ಆಕ್ರಮಣದ ವಿಷಯದಲ್ಲಿ ಹಿಂದೀಯರಿಗೆ ಇಂಗ್ಲೀಷರ ಬಗ್ಗೆ ಇದ್ದ ಸಂಶಯಗಳು ನಿರಾಧಾರವಾಗಿರಲಿಲ್ಲ. ೧೮೫೦ರ ಸುಮಾರಿಗೆಂದರೆ ಮಿಶನರಿಗಳು ದೇಶದಾದ್ಯಂತ ಅಲೆದಾಡುತ್ತಿದ್ದರು. ಸಂತೆ ಪೇಟೆಗಳಲ್ಲಿ ಅವರು ಹಿಂದುಮುಸಲ್ಮಾನ ಧರ್ಮಗಳ ಅವಮಾನಮಾಡಿ ಮಾಡುತ್ತಿದ್ದ ಭಾಷಣಗಳು ಮೇಲಿಂದ ಮೇಲೆ ಕಿವಿಗೆ ಬೀಳುತ್ತಿದ್ದವು; ಸರಕಾರದ ಅಪ್ರತ್ಯಕ್ಷ ಆಶ್ರಯದಲ್ಲಿ ದೊಡ್ಡದೊಡ್ಡ ಮಿಶನರಿ ಸಂಸ್ಥೆಗಳು ಶೈಕ್ಷಣಿಕ ಚಟುವಟಿಕೆಗಳ ಹೆಸರಿನಲ್ಲಿ ಮತಾಂತರ ಚಟುವಟಿಕೆಗಳನ್ನು ಮಾಡುತ್ತಿದ್ದರು. ಬ್ರಿಟಿಶರ ವಿರೋಧಿ ಚಟುವಟಿಕೆಗಳನ್ನೆಲ್ಲ ಈ ಮಿಶನರಿಗಳು ಅಧಿಕಾರಿಗಳಿಗೆ ಗುಪ್ತವಾಗಿ ವರದಿ ಮಾಡುತ್ತಿದ್ದರು. ಮಿಶನರಿಗಳ ಸಂರಕ್ಷಣೆಗಾಗಿ ಒಮ್ಮೊಮ್ಮೆ ಪೋಲಿಸರ ಪಡೆ ಇರುತ್ತಿದ್ದದರಿಂದ ಇದು ಸರಕಾರೀ ಚಳವಳಿಯೆಂದೆ ಜನರಿಗೆ ಕಲ್ಪನೆಯಾಗುತ್ತಿತ್ತು. ಹಿಂದು ಮುಸಲ್ಮಾನರು ಸಹ ಸಾರ್ವಜನಿಕ ಸ್ಥಳಗಳಲ್ಲಿ ಎಂದೂ ಧಾರ್ಮಿಕ

ಭಾಷಣಗಳನ್ನು ಮಾಡುತ್ತಿರಲಿಲ್ಲ. ಹೀಗಿದ್ದರೂ ಮಿಶನರಿಯು ಮಾತ್ರ ಸರಕಾರಿ ಸಂರಕ್ಷಣೆಯಲ್ಲಿ ನಿಂತು ಹಿಂದುಮುಸಲ್ಮಾನ ಧರ್ಮಗಳ ಬಗ್ಗೆ ಬಹಿರಂಗ ಸ್ಥಳಗಳಲ್ಲಿ ಒಮ್ಮೊಮ್ಮೆ ಅತ್ಯಂತ ನಿಂದ್ಯವಾದ ವಿಷಯಗಳನ್ನಾಡುತ್ತಿದ್ದ. ಶಾಲೆ ಕಾಲೇಜುಗಳಲ್ಲಿ ಬೈಬಲ ಅಧ್ಯಯನವನ್ನು ಪ್ರಾರಂಭಮಾಡಲಾಯಿತು. ಮುಲ್ಕೀ ಮತ್ತು ಸೈನಿಕ ಅಧಿಕಾರಿಗಳಲ್ಲಿ ಸಹ ಅನೇಕರು ಧಾರ್ಮಿಕ ವಿಷಯಗಳಲ್ಲಿ ಪ್ರತ್ಯಕ್ಷ ಆಸ್ಥೆಯನ್ನು ವಹಿಸಿ ಕ್ರಿಶ್ಚಿಯನ್ ಧರ್ಮದ ಪ್ರಚಾರವನ್ನು ಮಾಡುತ್ತಿದ್ದರು. ಜೇಲುಗಳಲ್ಲಿ ಕ್ರಿಶ್ಚಿಯನ್ ಧರ್ಮಪ್ರಚಾರವು ನಡೆಯಿತು. ಅಲ್ಲಿಯ ಅಡಿಗೆ ಊಟಗಳಲ್ಲಿ ೧೮೪೫ರ ಸುಮಾರಿಗೆ ಜಾತಿಯ ವಿಂಗಡನೆಯನ್ನು ಬಿಟ್ಟು ಬಿಡಲಾಯಿತು.

ಧರ್ಮಾಂತರ ಮಾಡಿದವನಿಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ದೊರೆಯಬೇಕೆಂದು ೧೮೫೦ ರಲ್ಲಿ ವಿಧಿಸಲಾಯಿತು. ಇವತ್ತು ನಮಗೆ ಇದು ನ್ಯಾಯವಾಗಿ ಕಂಡರೂ ೧೮೫೦ ರಲ್ಲಿ ಜನರು ಕ್ರಿಶ್ಚಿಯನ್ ಧರ್ಮವನ್ನು ಪ್ರೋತ್ಸಾಹಿಸುವದೇ ಇದರ ಉದ್ದೇಶವೆಂದು ಟೀಕೆ ಬರೆದರು. ಸತ್ತ ಗಂಡನೊಡನೆ ಮಹಿಳೆಯರು ಸತಿ ಹೋಗುವದಾಗಲಿ, ನರಬಲಿ ಕೊಡುವದಾಗಲಿ ಪ್ರತಿಬಂಧ ಮಾಡಿದ್ದನ್ನು ಮಾನವೀಯ ದೃಷ್ಟಿಯಿಂದ ಇಪ್ಪತ್ತನೆಯ ಶತಮಾನದಲ್ಲಿ ಯಾರೂ ಆಕ್ಷೇಪಿಸಲಾರರು. ಆದರೆ ಆಗ ಮಾತ್ರ ಸನಾತನಿಗಳ ಮನಸ್ಸಿನ ಮೇಲೆ ಈ ಉಪಕ್ರಮಗಳಿಂದ ಸಾಕಷ್ಟು ಆಘಾತವಾಯಿತು.

೧೮೫೬ರಲ್ಲಿ ಲಾರ್ಡ ಕ್ಯಾನಿಂಗನು ಬಂದೊಡನೆ ಹಿಂದು ವಿಧವೆಯರಿಗೆ ಪುನರ್ವಿವಾಹದ ಹಕ್ಕನ್ನು ದಯಪಾಲಿಸುವ ಒಂದು ಕಾಯಿದೆಯನ್ನು ಜಾರಿಗೆ ತಂದನು. ಅಂದಿನ ಸಮಾಜಸುಧಾರಕರಾದ ಈಶ್ವರಚಂದ್ರ ವಿದ್ಯಾಸಾಗರರೇ ಈ ಉಪಕ್ರಮಕ್ಕೆ ಬೆಂಬಲವನ್ನು ಕೊಟ್ಟಿದ್ದರೂ ಧಾರ್ಮಿಕ ವಿಷಯಗಳ ಮೇಲಿನ ಈ ಆಕ್ರಮಣದಿಂದ ಹಿಂದುಗಳಿಗೆ ಸರಕಾರದ ಬಗ್ಗೆ ಸಂಶಯ ಉಂಟಾಗಿ ಬಿಟ್ಟಿತು.[5]

5. ಸದುದ್ದೇಶದಿಂದ ಮಾಡಿದ ಕಾಯದೆಗಳೂ ಉಗ್ರಟೀಕೆಗೆ ಪಾತ್ರವಾದವು. ಬೆಂಟಿಂಕನು ರಾಮಮೋಹನ ರಾಯ, ದ್ವಾರಕಾನಾಥ ಠಾಕೂರ ಮೊದಲಾದ ಶ್ರೇಷ್ಠ ಸಮಾಜಸುಧಾರಕರ ಬೆಂಬಲದಿಂದ ಸತಿಹೋಗುವದನ್ನು ೧೮೨೯ರಲ್ಲಿ ಪ್ರತಿಬಂಧಿಸಿದರೂ ಬಂಡಾಯದ ಮುಖಂಡರು ಅದನ್ನೂ ಧರ್ಮಾಚಾರಗಳ ಮೇಲೆ ಆಕ್ರಮಣವೆಂದೇ ಸಾರಿ ಜನತೆಯನ್ನು ಕಂಪನಿಸರಕಾರದ ವಿರುದ್ಧ ರೊಚ್ಚಿಗೆಬ್ಬಿಸಿದರು.

ಈ ಮೊದಲೇ ಹೇಳಲಾದ ಕಾರಣಗಳ ಮೂಲಕ ಸಿಪಾಯಿಯ ಅಂತ ರಂಗವು ಒಂದೇಸವನೆ ತಳಮಳಗೊಳ್ಳುತ್ತಿತ್ತು. ಅವನ ನೌಕರಿದರ್ಜೆಯೂ ಕೂಡ ಕೆಳಗಿಳಿಯಲಾರಂಭಿಸಿತ್ತು. ಈ ಮಾತೂ ಅವನಿಗೆ ಸ್ಪಷ್ಟವಾಯಿತು. "ಕಾಲ್ದಳಗಳಲ್ಲಿ ಸಿಪಾಯಿಗೆ ತಿಂಗಳಿಗೆ ಏಳು ರೂಪಾಯಿ ಮಾತ್ರ ದೊರೆಯು ತ್ತಿತ್ತು. ಅಶ್ವದಳಗಳ ಸವಾರನಿಗೆ ೨೭ ರೂ. ದೊರೆತರೂ ಕುದುರೆಯನ್ನು ಅವನೇ ತರಬೇಕಾಗುತ್ತಿತ್ತು. ಹಿಂದೀಯರಲ್ಲಿ ಹೈದರ ಅಲಿಯಷ್ಟು ಜಾಣನಿದ್ದರೂ ಅವ ನಿಗೆ ಬಿಳಿಯ ಕಪ್ತಾನನ ಕೆಳಗಿನ ಅಧಿಕಾರಿಗಿಂತ ಎಂದೂ ಹೆಚ್ಚಿನ ದರ್ಜೆ ಅಥವಾ ಸಂಬಳ ದೊರೆಯುವದು ಸಾಧ್ಯವಿರಲಿಲ್ಲ. . . . . . ಹಿಂದುಸ್ತಾನದ ಸೈನ್ಯದ ಒಟ್ಟು ಸಂಖ್ಯೆ ೩,೧೫,೫೨೦ ಇದೆ; ಇದರ ವೆಚ್ಚವು ೯೮,೦೨,೨೩೫ ಪೌಂಡು ಇದೆ. ಬ್ರಿಟಿಶರು ೫೧,೩೧೬ ಮಾತ್ರ ಇದ್ದಾರೆ. ಆದರೆ ಅವರ ಸಲುವಾಗಿ ೫೬,೬೮,೧೧೦ ಪೌಂಡುಗಳನ್ನು ಖರ್ಚು ಮಾಡಲಾಗುತ್ತಿದೆ. ಬಿಳಿಯ ಸೈನ್ಯವು ಯಾವ ಶ್ರಮದ ಕೆಲಸವನ್ನೂ ಮಾಡುವದಿಲ್ಲ. ಅವರ ಸುಖ ಜೀವನವು ಹೇಗಿದೆ ಎಂಬುದರ ಕಲ್ಪನೆಯು ಕೂಡ ಸಿಪಾಯಿಗಳಿಗೆ ಬರಲು ಸಾಧ್ಯವಿಲ್ಲ. ಇದಲ್ಲದೆ ಯುರೋಪಿಯನ್ನರ ಉದ್ದಾಮ ವರ್ತನೆಯೂ ಹೆಚ್ಚಾ ಯಿತು. ೧೮೧೭ರಲ್ಲಿ ಯುರೋಪಿಯನ್ ಸಾರ್ಜಂಟನೋರ್ವನು ಮೇಲಿಂದ ಮೇಲೆ ತಮ್ಮನ್ನು ಹೊಡೆಯುತ್ತಾನೆಂದು ಸೈನ್ಯದ ಸಂಪರ್ಕಾಧಿಕಾರಿಗೆ ತಿಳಿಸಿ ದರೆ ಆತನು ಸಾರ್ಜಂಟನ ಪಕ್ಷವನ್ನೇ ಹಿಡಿದನು.[೬]" ಕವಾಯಿತಿನ ಕಾಲಕ್ಕೂ ಬಿಳಿಯರು ಸಿಪಾಯಿಗಳಿಗೆ ಅಶ್ಲೀಲ ಬೈಗಳನ್ನು ಬೈಯುವದು ತೀರಾ ಸಾಮಾನ್ಯವಾಗಿ ಹೋಗಿತ್ತು. ಉಚ್ಚ ಕುಲದ ಬ್ರಾಹ್ಮಣರು, ಮುಸಲ್ಮಾನರು ಇದರಿಂದ ತುಂಬಾ ಸಂತಪ್ತರಾಗಿದ್ದರು.

ಬಿಳಿಯ ಮುಲ್ಕೀ ಅಧಿಕಾರಿಗಳೂ ಕೈಕೆಳಗಿನವರನ್ನು ಎಷ್ಟು ಅವಮಾನ ದಿಂದ ನಡೆಸಿಕೊಳ್ಳುತ್ತಿದ್ದರೆಂಬ ಬಗ್ಗೆ ೧೮೫೮ರಲ್ಲಿ ಮದ್ರಾಸ ಪತ್ರಿಕೆಯೊಂದು ಉದಾಹರಣೆಯನ್ನು ಕೊಟ್ಟಿದೆ. ಯುರೋಪಿಯನ್ ಸಬ್ ಕಲೆಕ್ಟರನೊಬ್ಬನು ದೇಶೀ ತಾಲೂಕದಾರನಿಗೆ ಹೀಗೆ ಪತ್ರ ಬರೆದನಂತೆ : 'ನೀನು ನನ್ನ ಎದುರಿಗೆ ಹಾಜರಿದ್ದಾಗ ನಾಲ್ಕೈದು ದಿನಗಳಲ್ಲಿ ಗವರ್ನರರಿಗೆ ಒಂದು . . . . ವನ್ನು ತರುವೆನೆಂದು ಹೇಳಿ ಹೋದಿ. ತಿರುಗಿ ಬರಲಿಲ್ಲ. ನಿನ್ನ ವರ್ತನದಿಂದ ನೀನು ಸುಳ್ಳು ಹೇಳುವವನಂತೆ ತೋರುತ್ತದೆ. ನಂಬಲು ನೀನು ಯೋಗ್ಯನಲ್ಲ.

೬. ಸೆನ, ೨೧.

ಸರಕಾರಿ ಕೆಲಸದ ಮಹತ್ವವನ್ನು ತಿಳಿಯದೆ ಇಂಥ ಸುಳ್ಳು ನೀನು ಹೇಗೆ ನುಡಿದೆ ಎಂಬ ಬಗ್ಗೆ ಕೂಡಲೆ ಬಂದು ಜವಾಬು ಕೊಡಬೇಕು.[7] ' ಇಂಥವರ ಕೈಯಲ್ಲಿ ದುಡಿಯಲು ಎಂಥವರು ಬರಬೇಕು ಎಂದು ಪತ್ರಿಕೆಯು ಪ್ರಶ್ನೆ ಮಾಡಿದೆ.

ಯಾವ ಹಿಂದೀಯನಾದರೂ ಡೆಪ್ಯೂಟಿ ಕಲೆಕ್ಟರನಾದರೆ ಪರಮಾವಧಿ ಯಾಗಿ ಹೋಯಿತು. ಕಂಪನಿ ಸರಕಾರದ ನೌಕರಿಗೆ ಹೋದ ಅನೇಕ ಉಮೇದ ವಾರರಲ್ಲಿ ತಮ್ಮ ಅಪ್ಪ ಅಜ್ಜಂದಿರು ಸೇನಾಪತಿ, ಸುಭೇದಾರ ಸರದಾರರಾಗಿ ಕೆಲಸ ಮಾಡಿದ್ದನ್ನು ಕಣ್ಣಾರೆ ಕಂಡವರಿದ್ದರು. ಆದರೆ ಈಗ ಕೀಳು ನೌಕರಿ ಗಳ ಹೊರತು ಗತ್ಯಂತರವೇ ಇಲ್ಲದಾಯಿತು.

ಬ್ರಿಟಿಶ ನ್ಯಾಯಾಲಯಗಳೂ ಸಾಕಷ್ಟು ಅಸಂತೋಷಕ್ಕೆ ಕಾರಣವಾ ದವು. ಅದುವರೆಗೆ ಹಿಂದೀ ಪದ್ಧತಿಯಲ್ಲಿ ಪಂಚಾಯತಿಗಳೆ ಪ್ರಮುಖವಾಗಿದ್ದು ಅಗ್ಗ ನ್ಯಾಯದಾನ ಮಾಡುತ್ತಿದ್ದವು. ಕೋರ್ಟು ಕಚೇರಿಗಳಲ್ಲಿ ಬಂದ ಸ್ಟಾಂಪ ಕಾಗದಗಳು ಜನರನ್ನು ಬಹಳ ಅಸಂತುಷ್ಟಗೊಳಿಸಿದವು. ನ್ಯಾಯದಾನದ ಬದಲು ಇದು ನ್ಯಾಯದ ಮಾರಾಟ ಎಂದು ಜನ ಆಡಿಕೊಂಡಿತು. ಕ್ಷಿಪ್ರ ನ್ಯಾಯದಾನವಂತೂ ಬ್ರಿಟಿಶ್ ಕೋರ್ಟುಗಳಲ್ಲಿ ಶಕ್ಯವೇ ಇರಲಿಲ್ಲ. ಪ್ರತಿವಾದಿ ಮತ್ತು ಸಾಕ್ಷಿದಾರರು "ಸಮನ್ಸ" ತಪ್ಪಿಸಿದಾಗೊಮ್ಮೆ ವಾದಿಯು ಭತ್ತೆ ಹೆಚ್ಚಬೇಕಾಗುತ್ತಿತ್ತು. ಅತ್ತ ಅಡ್ಡಾಡಿ ಅಡ್ಡಾಡಿ ಸಾಕ್ಷಿದಾರರು ಬೇಸರಿ ಯುತ್ತಿದ್ದರು. ಬೇಲೀಫ ಮತ್ತು ಕಾರಕೂನರ ಲಂಚಗೂಳಿತನವೂ ಈ ಪ್ರಕ್ಷೋಭಕ್ಕೆ ಕಾರಣವಾಯಿತು.

ಸೋತವರಿಂದ ಗೆದ್ದವರಿಗೆ ಆಸ್ತಿಯನ್ನಲ್ಲದೆ ಕೋರ್ಟಿನ ಖರ್ಚನ್ನೂ ಕೊಡಿ ಸುತ್ತಿದ್ದರು. ಪ್ರಸಂಗ ಬಿದ್ದರೆ ಆಸ್ತಿ ಲಿಲಾವು ಮಾಡಿಸಿ ಡಿಕ್ರಿ ಹಣ ಕೊಡಿಸು ತ್ತಿದ್ದರು. ಈ ಎಲ್ಲ ವಿಚಾರಗಳು ಹಿಂದೀಯರಿಗೆ ಆಗ ತೀರ ಹೊಸ ಹಾಗೂ ಕ್ಷೋಭಕಾರಕವಾದವು. ಕೋರ್ಟ ಕಚೇರಿಗಳು ಜನರಿಗೆ ಭಾರವಾಗಿ ಆದಷ್ಟು ಜನರು ಅಲ್ಲಿಗೆ ಹೋಗುವ ಪ್ರಸಂಗಗಳನ್ನೆ ತಪ್ಪಿಸುತ್ತಿದ್ದರು.

ಸಾವಂತವಾಡಿ ಗಲಭೆಗಳ ಸಮಯಕ್ಕೆ ಗೋವಾ ಗಡಿಯಲ್ಲಿ ಪರೋಡೆ ಗಾರರು ಒಂದು ಹಳ್ಳಿಯಲ್ಲಿ ಅಪ್ಪ ಮಗ ಮತ್ತು ಮೊಮ್ಮಗ ಹೀಗೆ ಮೂವ

7. Charles Ball. Vol. I, P. 636. ಉಪಯೋಗಿಸಿದ ಬೈಗಳ ಶಬ್ದಗಳು liar, shuffler ಮತ್ತು unworthy of trust ಎಂದಿವೆ.

ರನ್ನೂ ಕೊಲೆಮಾಡಿದರು. ಅವರನ್ನು ಉಳಿಸಲು ಪ್ರಯತ್ನ ಪಟ್ಟ ಮಗನ ಹೆಂಡತಿಯು ಸರಕಾರದ ಪತಿಯಿಂದ ಮುಖ್ಯ ಸಾಕ್ಷಿಯಾದಳು. ಕೆಲವು ಆರೋಪಿಗಳನ್ನು ಸಾವಂತವಾಡಿ ಕೋರ್ಟಿಗೆ ತಂದರು. ಇತರರನ್ನು ರತ್ನಾಗಿರಿಗೆ ಒಯ್ದರು. ವಿಚಾರಣೆಯು ಎರಡು ವರ್ಷ ನಡೆಯಲು ಮಗನ ಹೆಂಡತಿಯು ತೀರಾ ಬೇಸತ್ತಳು. ಕೊನೆಗೊಮ್ಮೆ ಸಾವಂತವಾಡಿ ಕೋರ್ಟಿನಲ್ಲಿ ಅವಳು ಹೀಗೆ ಜವಾಬು ಕೊಟ್ಟಳು, "ನಾನು ಎಷ್ಟು ಸಲ ಹೇಳಿದ್ದೇ ಹೇಳಲಿ? ಮಾಯ್ದ ಗಾಯಗಳನ್ನು ಎಷ್ಟು ಸಲ ಮತ್ತೆ ಕೆದರಲಿ? ಅವರೇನೂ ಒಮ್ಮೆ ಕೊಲೆಯಾಗಿ ಪಾರಾದರು. ಆದರೆ ಕಂಪನಿ ಸರಕಾರವು ನನ್ನನ್ನು ದಿನಾಲು ಕೊಲೆ ಮಾಡು ತ್ತಿದೆ! ಕೊಲೆಯಾದ ದಿನದಿಂದ ನನ್ನ ಮನಃಶಾಂತಿಯೇ ಹೋಗಿಬಿಟ್ಟಿದೆ. ಇಲ್ಲಿ, ಅಲ್ಲಿ ಎಲ್ಲಕಡೆಗೂ ನನ್ನನ್ನು ಕರೆಯಲಾಗುತ್ತಿದೆ. ಈಗ ಇಲ್ಲಿಗೆ, ನಾಳೆ ವೆಂಗುರ್ಲೆಗೆ, ನಾಡದು ಮಾಲವಣಕ್ಕೆ, ಮುಂದೆ ರತ್ನಾಗಿರಿಗೆ! ಓಡಾಡಿ ನನ್ನ ಪಾದರಕ್ಷೆಗಳು ಹರಿದವು: ನನ್ನ ಹೃದಯ ದಿನಾಲು ಬಿರಿಯುತ್ತಿದೆ. ದಿನಾಲು ಹೊಸಹೊಸ ಸಮನ್ಸುಗಳ ದಾರಿ ನೋಡುವದರಲ್ಲಿ ನನಗೆ ವಿಶ್ರಾಂತಿಯೇ ಇಲ್ಲ ದಾಗಿದೆ. ನನ್ನ ಗಂಡನೊಡನೆ ಅವರು ನನ್ನನ್ನೂ ಕೊಂದುಬಿಟ್ಟಿದ್ದರೆ ಎಷ್ಟು ಒಳಿತಾಗುತ್ತಿತ್ತು? ಇವರೆ ಕೊಲೆಮಾಡಿದರೆಂದು ನಾನು ಎಷ್ಟು ಸಲ ಹೇಳಿ ದ್ದೇನೆ? ಮತ್ತೂ ಮತ್ತೂ ಅದೇನು ನಿಮ್ಮ ಪ್ರಶ್ನೆ? ಯಾಕೆ ನನಗೆ ಹೀಗೆ ತಾಪ ಕೊಡುವಿರಿ.[8] "



8. *Western India before and during the Mutinees;* by Le Grand Jacob. Page 131-32.

# ಐದನೆಯ ಅಧ್ಯಾಯ

## ಸಂಸ್ಥಾನಗಳ ಸಂಹಾರ

**೧೮೦೦**ರಿಂದ ೧೮೫೭ರವರೆಗೆ ಉತ್ತರ ಮತ್ತು ದಕ್ಷಿಣ ಹಿಂದುಸ್ತಾನದಲ್ಲಿ ಅನೇಕ ಸ್ವತಂತ್ರ ಹಿಂದೀ ರಾಜ್ಯಗಳು ಬ್ರಿಟಿಶ್ ರಾಜ್ಯತೃಷ್ಣೆಗೆ ಬಲಿಯಾದವು. ಬ್ರಿಟಿಶರು ರಾಜಮನೆತನದವರನ್ನು ಬಹಳ ಅನ್ಯಾಯದಿಂದ ಹಾಗೂ ಕೂಟ ನೀತಿಯಿಂದ ಮುರಿಬಡಿದರು. ಇವರಿಂದ ಉದ್ಭವಿಸಿದ ವ್ಯಥೆ ಮತ್ತು ನೋವು ಗಳು ಮುಂದೆ ಬಂಡಾಯಕ್ಕೆ ಮುಖ್ಯ ಕಾರಣವಾದವು. ದಕ್ಷಿಣದಲ್ಲಿ ಸಾತಾರೆ, ತಂಜಾವರ, ಪೇಶ್ವೆ ಮತ್ತು ನಾಗಪೂರಗಳಲ್ಲಿ ಉತ್ತರದಲ್ಲಿ ಝಾಂಸಿ, ಪಂಜಾಬ ಮತ್ತು ಔಧಗಳಲ್ಲಿ ಆದ ಅನ್ಯಾಯ ದಬ್ಬಾಳಿಕೆಗಳು ಬಂಡಾಯಕ್ಕೆ ಪೂರ್ವ ಪೀಠಿಕೆಯಾದವು.

**ಸಾತಾರಾ**

ಛತ್ರಪತಿ ಶಿವಾಜಿಯು ೧೬೮೦ರಲ್ಲಿ ಮರಣಹೊಂದಿದ ನಂತರ ಅವನ ಮಗನಾದ ಸಂಭಾಜಿಯನ್ನು ಔರಂಗಜೇಬನು ೧೬೮೯ನೆಯ ಇಸ್ವಿಯಲ್ಲಿ ಅತ್ಯಂತ ಕ್ರೂರರೀತಿಯಲ್ಲಿ ಕೊಲ್ಲಿಸಿದನು; ಅವನ ಹೆಂಡತಿಯನ್ನೂ ಅಲ್ಪ ವಯಿ ಮಗನಾದ ಶಾಹುನನ್ನೂ ಸೆರೆಯಲ್ಲಿಟ್ಟನು. ೧೭೦೭ರಲ್ಲಿ ಔರಂಗಜೇಬನು ಸತ್ತನು; ೧೭೦೮ರಲ್ಲಿ ಶಾಹೂನ ಬಿಡುಗಡೆಯಾಗಿ ಅವನಿಗೆ ರಾಜ್ಯಾಭಿಷೇಕ ವಾಯಿತು. ಆದರೆ ಅವನು ಆಲಸಿಯೂ ವಿಲಾಸಿಯೂ ಇದ್ದುದರಿಂದ ಬಾಳಾಜಿ ವಿಶ್ವನಾಥ ಭಟ ಎಂಬ ಶೂರ ಬ್ರಾಹ್ಮಣನು ೧೭೧೩ರಲ್ಲಿ ಸೇನಾಪತಿಪದಕ್ಕೆ ಏರಿ ಮುಂದೆ ಶಾಹೂ ಛತ್ರಪತಿಯ ರಾಜ್ಯದಲ್ಲಿ ಪೇಶ್ವೆ ಮಂತ್ರಿಪದವನ್ನು ಸಂಪಾದನೆ ಮಾಡಿದನು. ಪೇಶ್ವೆ ಮಂತ್ರಿಪದವು ಛತ್ರಪತಿಯ ಅಷ್ಟಪ್ರಧಾನರ ಪೈಕಿ ಒಂದಾಗಿತ್ತು. ಆದರೂ ಇತರ ಪಂತಸಚಿವ, ಪಂತ ಅಮಾತ್ಯ, ಸೇನಾ ಪತಿ ಇವರಲ್ಲಿ ಯಾರೂ ಶೂರ ಮತ್ತು ತೇಜಸ್ವಿ ಪುರುಷರು ಇಲ್ಲದ್ದರಿಂದ ಬಾಳಾಜಿ ವಿಶ್ವನಾಥನೇ ಛತ್ರಪತಿಯ ಹೆಸರಿನಲ್ಲಿ ಸಕಲ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದನು. ಶಾಹು ಸಾತಾರೆಯನ್ನು ತನ್ನ ರಾಜಧಾನಿಯನ್ನಾಗಿ

ಮಾಡಿಕೊಂಡು ಎಲ್ಲ ಅಧಿಕಾರವನ್ನೂ ಪೇಶ್ವೆಯರಿಗೆ ಬಿಟ್ಟುಕೊಟ್ಟನು. ಪೇಶ್ವೆಯರು ಪುಣೆಯಲ್ಲಿ ಸ್ಥಾನಾಪನ್ನರಾದರು.

ಪೇಶ್ವೆಯರ ಇತಿಹಾಸವು ಶೌರ್ಯ ಸಾಹಸಗಳ ಇತಿಹಾಸವಾಗಿದೆ. ಅವರ ಸಾಹಸದಿಂದಲ್ಲದೆ ಮರಾಠರ ಕೀರ್ತಿಯು ಬೆಳಗುವದು ಸಾಧ್ಯವೆ ಇರಲಿಲ್ಲ. ಹೀಗಿದ್ದರೂ ಅವರು ಸಾತಾರಾ ಛತ್ರಪತಿಯ ಮರ್ಯಾದೆಯನ್ನು ತುಂಬಾ ಕಾಯುತ್ತಿದ್ದರು. ಸರಕಾರಿ ಹುಕುಮುಗಳೆಲ್ಲ ಛತ್ರಪತಿಯ ಹೆಸರಿನಿಂದಲೆ ಹೊರಡುತ್ತಿದ್ದವು. ಒಬ್ಬ ಪೇಶ್ವೆಯು ಸತ್ತನೆಂದರೆ ಅವನ ವಾರಸದಾರನು ಸಾತಾರೆಯ ಛತ್ರಪತಿಯಿಂದ ಪೇಶ್ವಾಯಿಯ ಸನದು, ವಸ್ತ್ರಾಲಂಕಾರಗಳನ್ನು ಪಡೆದುಕೊಂಡು ಬರುತ್ತಿದ್ದನು.

ಶಾಹು ಛತ್ರಪತಿಯ ವಂಶಜನಾದ ಪ್ರತಾಪಸಿಂಹನೆಂಬುವವನು ೧೮೦೮ ರಲ್ಲಿ ಸಾತಾರೆಯ ಛತ್ರಪತಿಯಾದನು. ಇತ್ತ ಪುಣೆಯಲ್ಲಿ ಎರಡನೆಯ ಬಾಜಿರಾಯನು ಪೇಶ್ವೆ ಆಗಿದ್ದನು. ಈ ಸಮಯಕ್ಕೆ ಮರಾಠಾ ಅರಸುಮನೆತನಗಳಲ್ಲಿ ಒಡಕು ದುರ್ಬಲತೆಗಳು ತಲೆದೋರಹತ್ತಿದವು. ಪ್ರತಾಪಸಿಂಹನ ಬಂಧುಗಳು ಕೊಲ್ಲಾಪುರದಲ್ಲಿ ರಾಜ್ಯಸ್ಥಾಪನೆಯನ್ನು ಮಾಡಿದ್ದರು. ಆದ್ದರಿಂದ ಅತ್ತ ಸಾತಾರಾ ಕೊಲ್ಹಾಪೂರಗಳ ಒಳಜಗಳಗಳಿಂದಲೂ ಇತ್ತ ನಾರಾಯಣರಾವ ಮತ್ತು ರಾಘೋಬಾ ಇವರ ನಡುವಿನ ಜಗಳಗಳಿಂದಲೂ ದುರ್ಬಲತೆಯು ಹೆಚ್ಚುತ್ತ ನಡೆಯಿತು. ನಾರಾಯಣರಾಯನ ಕೊಲೆಯಾದರೂ ರಾಘೋಬನಿಗೆ ಪೇಶ್ವಾಯಿಯು ಬಹಳ ದಿನ ನಡೆಯಲಿಲ್ಲ. ಪೇಶ್ವೆ ಗಾದಿಯ ಬಲಿಷ್ಠ ಸಚಿವರು ಮುಂದೆ ಕೆಲದಿನಗಳ ಮೇಲೆ ಹುಟ್ಟಿದ ಸವಾಯಿ ಮಾಧವರಾಯನನ್ನು ಪಟ್ಟಗಟ್ಟಿದರು. ರಾಘೋಬನಿಗೆ ಇದರಿಂದ ಬಹಳ ಸಂತಾಪವಾಗಿ ಅವನು ಇಂಗ್ಲೀಷರ ಸಹಾಯಪಡೆದು ಪೇಶವಾಯಿ ಸಂಪಾದನೆ ಮಾಡಲು ಪ್ರಯತ್ನಪಟ್ಟನು.

ಸುಮಾರು ಇಲ್ಲಿಂದ ಮರಾಠಾರಾಜ್ಯಗಳಲ್ಲಿ ಇಂಗ್ಲೀಷರ ಕುಟಿಲ ಕಾರಸ್ಥಾನವು ಪ್ರಾರಂಭವಾಯಿತೆನ್ನಲು ಅಡ್ಡಿಯಿಲ್ಲ. ಸವಾಯಿ ಮಾಧವರಾಯನು ೧೭೯೬ ರಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ರಾಘೋಬನ ಮಗನಾದ ಎರಡನೆ ಬಾಜಿರಾಯನಿಗೆ ಪಟ್ಟವು ದೊರೆಯಿತು. ರಾಘೋಬನ ಕಾಲದಿಂದಲೆ ಇಂಗ್ಲೀಷರ ಸಖ್ಯವಿದ್ದ ಬಾಜಿರಾಯನು ಹೋಳಕರನ ದಾಳಿಗೆ ಹೆದರಿ ಇಂಗ್ಲೀಷರನ್ನು ಕೂಡಿಕೊಂಡು ಅವರ ಎಲ್ಲ ಕರಾರುಗಳಿಗೆ ಒಪ್ಪಿ ತನ್ನ ರಾಜ್ಯದಲ್ಲಿ ೬,೦ ಇಂಗ್ಲೀಷ ಸೈನ್ಯವನ್ನು ಇಟ್ಟುಕೊಂಡನು !

ಸಾತಾರೆಯಲ್ಲಿ ಪ್ರತಾಪಸಿಂಹನು ೧೮೧೮ರಲ್ಲಿಯೇ ಛತ್ರಪತಿ ಪಟ್ಟಕ್ಕೆ ಬಂದನು. ೧೮೩೯ರ ವರೆಗೆ ಇವನಿಗೆ ಅಧಿಕಾರವಿಲ್ಲದಿದ್ದರೂ ಮೊಗಲ ಬಾದಶಹನಂತೆ ಜನತೆಯ ಮರ್ಯಾದೆಗೆ ತುಂಬಾ ಪಾತ್ರನಾಗಿದ್ದನು. ಪ್ರತಾಪಸಿಂಹನು ಬಹಳೇ ಭೋಳೇ ಸ್ವಭಾವದವನಿದ್ದುದರಿಂದ ಇಂಗ್ಲೀಷರ ಪ್ರಭಾವಕ್ಕೆ ಒಳಗಾಗಲು ತಡವಾಗಲಿಲ್ಲ. ಪೇಶ್ವೆಯರ ವಿರುದ್ಧ ಛತ್ರಪತಿಯನ್ನು ಎಬ್ಬಿಸಿ ಕೂಡ್ರಿಸಲಾಯಿತು. ಪ್ರತಾಪಸಿಂಹನ ಆಪ್ತನೊಬ್ಬನು ಆಗ ಮುಂಬಯಿ ಗವರ್ನರ ಎಲ್ಫಿನ್‌ಸ್ಟನ್ ಸಾಹೇಬನ ಕೈಯೊಳಗಿದ್ದನು. ಛತ್ರಪತಿಯೇ ನಿಜವಾಗಿ ಮರಾಠಾ ಸಾರ್ವಭೌಮನೆಂದೂ ಇಂಥ ಛತ್ರಪತಿಯು ಬಂಡಖೋರ ಪೇಶ್ವೆಯ ಕೈದಿನಲ್ಲಿರುವದು ಲಾಂಛನಾಸ್ಪದವೆಂದೂ ಮತ್ತು ಇಂಗ್ಲೀಷರನ್ನು ಕೂಡಲು ಛತ್ರಪತಿಯು ಒಪ್ಪಿದರೆ ಇಂಗ್ಲೀಷರು ಪೇಶ್ವೆನನ್ನು ಸೋಲಿಸಿ ಛತ್ರಪತಿಗೆ ಪಟ್ಟಕಟ್ಟುವರೆಂದೂ ಪ್ರತಾಪಸಿಂಹನ ಕಿವಿಯಲ್ಲಿ ಊದಲಾಯಿತು. ಭೋಳಾ ಪ್ರತಾಪಸಿಂಹನು ಆಶೆಗೆ ಬಲಿಯಾದನು. ಇತ್ತ ಬಾಜಿರಾಯನ ಕೂಡ ಯುದ್ಧ ನಡೆದಾಗ ಪ್ರತಾಪಸಿಂಹನು ಇಂಗ್ಲೀಷರ ಚಿತಾವಣಿಯಿಂದ "ಎರಡನೆಯ ಬಾಜೀರಾಯನು ಅಯೋಗ್ಯನಿದ್ದು ಅವನನ್ನು ಪೇಶ್ವಾಯಿಯಿಂದ ತೆಗೆದುಹಾಕಲಾಗಿದೆ; ಅವನ ದುರ್ಗುಣಗಳ ಸಲುವಾಗಿ ಮರಾಠಿ ರಾಜ್ಯಕ್ಕೆ ಬಹಳ ಹಾನಿ ತಟ್ಟಿದೆ; ಇನ್ನು ಮುಂದೆ ಅವನಿಗೆ ಸಹಾಯ ಮಾಡಿದವರನ್ನು ಬಂಡುಗಾರರೆಂದು ತಿಳಿಯಲಾಗುವದು" ಎಂದು ಘೋಷಣೆ ಹೊರಡಿಸಿಬಿಟ್ಟನು !

ಪ್ರತಾಪಸಿಂಹನ ಹಿಂದೆ ಕಂಪನಿಸೈನ್ಯವಿದ್ದದ್ದು ಜನರಿಗೆ ಗೊತ್ತಿತ್ತು. ಕೆಲವರಿಗೆ ಛತ್ರಪತಿಯ ಬಗ್ಗೆ ನಿಷ್ಠೆಯೂ ಇತ್ತು. ಛತ್ರಪತಿಯ ಈ ಘೋಷಣೆಗೆ ಬಹಳ ಬೆಲೆ ಬಂದು ಬಾಜಿರಾಯನು ಅಪ್ರತಿಭನಾದನು. ಇಂಗ್ಲೀಷರ ಯೂನಿಯನ್ ಜಾಕ್ ಹಾಗೂ ಛತ್ರಪತಿಯ ಭಗವಾ ಝೇಂಡಾ ಕೂಡಿಯೇ ಸರಕಾರಿ ಕಟ್ಟಡಗಳ ಮೇಲೆ ಫಡಫಡಿಸಹತ್ತಿದವು !

ಪೇಶ್ವಾಯಿಯು ಮುರಗಡೆಯಾದನಂತರ ಪೇಶ್ವಾಯಿಯ ಅಧಿಕಾರವೆಲ್ಲ ತನ್ನದೇ ಎಂಬಂತೆ ಪೇಶ್ವಾಯಿಯ ಮಾಜಿ ಪ್ರದೇಶವನ್ನೆಲ್ಲ ಕಂಪನಿಯೇ ವಶಪಡಿಸಿಕೊಂಡಿತು. ಪೇಶ್ವಾಯಿಯ ಪತನದ ನಂತರ ರಾಜ್ಯವೆಲ್ಲ ತನಗೆ ಬರುವದೆಂದು ಪ್ರತಾಪಸಿಂಹನು ಕಾಣುತ್ತಿದ್ದ ಸುಖಸ್ವಪ್ನದ ಭಂಗವಾಯಿತು. ಸಾತಾರೆಯ ಸುತ್ತಲಿನ ಸ್ವಲ್ಪ ಪ್ರದೇಶವನ್ನು ಪ್ರತಾಪಸಿಂಹನಿಗೆ ದಯಪಾಲಿಸಿ

ಕಂಪನಿಯು ಸಾತಾರೆಯನ್ನು ಒಂದು ಚಿಕ್ಕ ಸಂಸ್ಥಾನವನ್ನಾಗಿ ನಿರ್ಮಿಸಿತು. ನಿರ್ಬಲ ದುರ್ಬಲ ಪ್ರತಾಪಸಿಂಹನು ನಿರುಪಾಯನಾಗಿ ಸುಮ್ಮನಾದನು.

ಹೀಗೆ ಕುಟಿಲ ಕಾರಸ್ಥಾನ, ವಿಶ್ವಾಸಘಾತಗಳಿಂದ ಪೇಶವಾಯಿಯು ಉರುಳಿ ಉದಯವಾದ ಸಾತಾರಾ ಸಂಸ್ಥಾನವೂ ಮುಂದೆ ಬಹಳ ದಿನ ಬಾಳಲಿಲ್ಲ

ಪೇಶವಾಯಿಯನ್ನು ಉರುಳಿಸಲು ನೆರವಾದಾಗ ಪ್ರತಾಪಸಿಂಹನಿಗೆ ಇಂಗ್ಲೀಷರು ಕೊಟ್ಟ ಆಶ್ವಾಸನಗಳನ್ನು ಅವರು ಮುಂದೆ ಪಾಲಿಸಲಿಲ್ಲ. ಇದರಿಂದ ಪ್ರತಾಪನು ನೊಂದುಕೊಂಡಿದ್ದನು. ಇಷ್ಟರಲ್ಲಿ ಅವನ ಸ್ವಾತಂತ್ರ್ಯವೂ ಮಾಯವಾಗಿತ್ತು. ಸಾತಾರೆಯಲ್ಲಿ ಓರ್ವ ಬ್ರಿಟಿಶ್ ರೆಸಿಡೆಂಟನು ಇರುತ್ತಿದ್ದ. ಪ್ರತಾಪಸಿಂಹನಿಗೂ ಈ ರೆಸಿಡೆಂಟ ಸಾಹೇಬನಿಗೂ ೧೮೩೩ರ ಸುಮಾರಿನಿಂದ ಕೂಡಿ ನಡೆಯದಾಯಿತು. ಕೆಲವು ಜಹಾಗೀರುಗಳ ಬಗ್ಗೆ ಮುಂಬೈ ಸರಕಾರ ದೊಡನೆಯೂ ಭಿನ್ನಾಭಿಪ್ರಾಯಗಳಾದವು. ಫಲಟಣ ಜಹಾಗೀರಿನ ಮೇಲೆ ಇಬ್ಬರೂ ತಮ್ಮ ತಮ್ಮ ಹಕ್ಕು ಇವೆ ಎಂದು ತಂಟೆ ನಡೆಯಿತು. ಲಾರ್ಡ ಕ್ಲೆಯರನು ಆಗ ಮುಂಬೈ ಗವರ್ನರನಾಗಿದ್ದ. ೧೮೧೯ರ ಒಡಂಬಡಿಕೆಯ ಕಾಲಕ್ಕೆ ಮುಂಬಯಿ ಗವರ್ನರನಾಗಿದ್ದ ಎಲ್‌ಫಿನ್‌ಸ್ಟನ್ನನ ಅಭಿಪ್ರಾಯ ಕೇಳಿ ಈ ಪ್ರಕರಣದ ನಿಕಾಲೆಯನ್ನು ಮಾಡಬೇಕೆಂದು ಪ್ರತಾಪಸಿಂಹನು ಮುಂಬೈ ಸರಕಾರಕ್ಕೆ ವಿನಂತಿ ಮಾಡಿಕೊಂಡನು. ಆದರೆ ಮುಂಬೈ ಗವರ್ನರನು ಅದನ್ನು ಕೇಳದೆ ಲಂಡನ್ನಿನ ಕಂಪನಿ ಡೈರೆಕ್ಟರರ ಮಂಡಳಕ್ಕೆ ಕಾಗದಗಳನ್ನು ಕಳಿಸಿ ಕೊಟ್ಟನು! ಡೈರೆಕ್ಟರರು ಮುಂಬೈ ಸರಕಾರದ ವಿರುದ್ಧ ತೀರ್ಪುಕೊಟ್ಟರು! ಇಷ್ಟರಲ್ಲಿ ಲಾರ್ಡ ಕ್ಲೆಯರನು ನಿವೃತ್ತನಾಗಿ ಸರ್ ರಾಬರ್ಟ ಗ್ರ್ಯಾಂಟ ಎಂಬುವವನು ಮುಂಬೈ ಗವರ್ನರನಾಗಿ ಬಂದಿದ್ದನು. ಪ್ರತಾಪಸಿಂಹನು ಮುಂಬೈಸರಕಾರದ ವಿರುದ್ಧ ಅಪೀಲು ಮಾಡಿದ್ದೇ ಆ ಮಹಾರಾಯನಿಗೆ ಸಿಟ್ಟು ಬಂದಿತ್ತು! ಪ್ರತಾಪಸಿಂಹನಿಗೆ ಅನುಕೂಲವಾಗಿದ್ದ ಡೈರೆಕ್ಟರ ಮಂಡಳದ ತೀರ್ಪನ್ನೂ ಸಹ ಪ್ರತಾಪಸಿಂಹನಿಗೆ ತಿಳಿಸದೆ ಮುಚ್ಚಿಟ್ಟುಬಿಟ್ಟನು. ಈ ಬಗ್ಗೆ ಪ್ರತಾಪಸಿಂಹನನ್ನು ಭೆಟ್ಟಿಯಾಗಲು ಸಹ ಗವರ್ನರ ಸಾಹೇಬನು ನಿರಾಕರಿಸಿ ಅವನಿಗೆ ಅವಮಾನ ಮಾಡಿಬಿಟ್ಟನು. ಪ್ರತಾಪಸಿಂಹನನ್ನು ಕುರಿತು ಬೆಹರೆಯವರು ಹೀಗೆ ಬರೆದಿದ್ದಾರೆ: "ಪ್ರತಾಪಸಿಂಹನು ರಾಜ್ಯಾ-ಡಳಿತದಲ್ಲಿ ಸಹ ಕುಶಲನಿದ್ದನು; ಅನೇಕ ರೆಸಿಡೆಂಟರು ಅವನನ್ನು ಕೊಂಡಾಡಿ ಕಂಪನಿ ಡಾಯರೆಕ್ಟರರಿಗೆ ಪತ್ರಗಳನ್ನು ಬರೆದದ್ದರಿಂದ ಡೈರೆಕ್ಟರ ಮಂಡಳವು

ಪ್ರತಾಪಸಿಂಹನಿಗೆ ಒಂದು ಪ್ರಶಂಸಾರ್ಹ ಪತ್ರವನ್ನೂ ಹಾಗು ರತ್ನಖಚಿತವಾದ ಖಡ್ಗವನ್ನೂ ಮುಟ್ಟಿಸಲು ಮುಂಬೈ ಗವರ್ನರರ ಕಡೆಗೆ ಕಳಿಸಿಕೊಟ್ಟಿದ್ದರು. ಸರ್ ರಾಬರ್ಟ ಗ್ರಾಂಟ ಸಾಹೇಬನು ಕೊನೆವರೆಗೂ ಅವುಗಳನ್ನು ಪ್ರತಾಪ ಸಿಂಹನಿಗೆ ಮುಟ್ಟಿಸಲೇ ಇಲ್ಲ!"

ಹೀಗೆ ಪ್ರತಾಪಸಿಂಹನ ಬಗ್ಗೆ ಮುಂಬಯಿ ಸರಕಾರದ ಹೊಟ್ಟೆಯಲ್ಲಿ ವಿಷ ತುಂಬಿತ್ತು. ಪೇಶ್ವೆಯವರನ್ನು ಗೊತ್ತಿಗೆ ಹಚ್ಚಲು ಪ್ರತಾಪಸಿಂಹನು ಮಾಡಿದ ಉಪಕಾರವನ್ನೆಲ್ಲ ಇಂಗ್ಲೀಷರು ಮರೆಯಲು ತಡವಾಗಲಿಲ್ಲ. ಬಾಳಾಜಿಪಂತ ನಾತೂ ಎಂಬ ಓರ್ವ ರಾಷ್ಟ್ರಘಾತಕ ಬ್ರಾಹ್ಮಣನು ಪ್ರತಾಪಸಿಂಹನ ವಿರುದ್ಧ ಇಂಗ್ಲೀಷರಿಗೆ ಕೂಡಿಕೊಂಡನು. ಪೇಶವೆಯರು ಸಾತಾರೆಯ ಛತ್ರಪತಿಗಳ ಮಂತ್ರಿಗಳು ಎಂಬ ಸಂಗತಿಯನ್ನು ಹೊರಗೆಡವಿ ಬಾಜೀರಾಯನನ್ನು ಉರುಳಿ ಸುವ ಚಾಣಕ್ಯಮಾರ್ಗವನ್ನು ಇಂಗ್ಲೀಷರಿಗೆ ಹೇಳಿಕೊಟ್ಟವನೇ ಈ ಬಾಳಾಜಿ ಪಂತನು. ಇವನನ್ನು ಮಂತ್ರಿಯನ್ನಾಗಿ ಮಾಡಬೇಕೆಂಬ ಇಂಗ್ಲೀಷರ ಸೂಚನೆ ಯನ್ನು ಪ್ರತಾಪಸಿಂಹನು ನಿರಾಕರಿಸಿದ್ದನು. ಅದರ ಸಿಟ್ಟು ಇಂಗ್ಲೀಷರಿಗೂ ಇತ್ತು, ಬಾಳಾಜಿಪಂತನಿಗೂ ಇತ್ತು.

ಸರಳ ಸ್ವಭಾವದ ಪ್ರತಾಪಸಿಂಹನ ಮೇಲೆ ಅವರು ಸಲ್ಲದ ಆರೋಪ ಗಳನ್ನು ಹೊರಿಸಲು ಪ್ರಾರಂಭಮಾಡಿದರು. ಪ್ರತಾಪಸಿಂಹನ ಸ್ವತಂತ್ರ ವೃತ್ತಿಯು ಇಂಗ್ಲೀಷ ಸಾರ್ವಭೌಮತ್ವಕ್ಕೆ ಅಪಾಯಕಾರಕವೆಂದು ಬಾಳಾಜಿ ಪಂತನು ರೆಸಿಡೆಂಟನ ಮನಸ್ಸನ್ನು ಕಲುಷಿತಗೊಳಿಸಹತ್ತಿದನು. ತೋಳವು ಕುರಿಮರಿಯ ಮೇಲೆ ಸಿಟ್ಟಿಗೆದ್ದೇ ಬಿಟ್ಟಿತು! ಕರ್ನಲ್ ಲಡ್ವಿಗ್ ಆಗ ಸಾತಾರೆಯ ಬ್ರಿಟಿಶ್ ರೆಸಿಡೆಂಟನಾಗಿದ್ದನು. ಚಾಡಿಯನ್ನು ಸಾಕಷ್ಟು ಕೇಳು ವದು ಅವನ ಸ್ವಭಾವವಾಗಿದ್ದಿತು. ಪ್ರತಾಪಸಿಂಹನು ಇಂಗ್ಲೀಷ ಸರಕಾರದ ವಿರುದ್ಧ ದ್ರೋಹನಡೆಸಿರುವನೆಂದೂ ಅಲ್ಲಿಯ ಸೈನ್ಯಕ್ಕೆ ಫಿತೂರಿ ಸಲಹೆ ಯನ್ನೂ ಕೊಡುತ್ತಿರುವನೆಂದೂ ಮುಂಬಯಿಸರಕಾರಕ್ಕೆ ವರದಿ ಮಾಡಿದನು. ಕ್ಲೆಯರ ಸಾಹೇಬನೂ ಇದರ ಹಾದಿ ಕಾಯುತ್ತಿದ್ದನು. ಕೂಡಲೆ ಸರಕಾರವು ಓವ್ಹಾನ್ಸ್ ಮತ್ತು ವಿಲೊವಿ ಎಂಬುವವರನ್ನು ಕಳಿಸಿ ರೆಸಿಡೆಂಟನೊಡನೆ ಒಂದು ವಿಚಾರಣಾ ಮಂಡಳದ ರಚನೆ ಮಾಡಿಕೊಂಡು, ಕಾರ್ಯಪ್ರಾರಂಭಮಾಡ ಬೇಕೆಂದು ವಿಧಿಸಿತು.

ಈ ಮಹನೀಯರು ತಮ್ಮ ವಿಚಾರಣೆಯನ್ನೆಲ್ಲ ಗುಪ್ತವಾಗಿ ನಡೆಸಿದರು.

ಅವರು ಯಾವ ಸಾಕ್ಷೀಪುರಾವೆಗಳನ್ನು ಸಂಗ್ರಹಮಾಡಿದರು ಎಂಬುದು ಪ್ರತಾಪ ಸಿಂಹನಿಗೆ ತಿಳಿಯಲಿಲ್ಲ. ಪ್ರತಾಪಸಿಂಹನ ಓರ್ವ ಅತ್ಯಂತ ವಿಶ್ವಾಸಿ ದಿವಾಣನಾದ ಗೋವಿಂದರಾವ ಎಂಬುವವನನ್ನು ಸಾತಾರಾ, ಪುಣೆ, ಅಹಮದನಗರಗಳಲ್ಲಿ ಕತ್ತಲೆ ಕೊಠಡಿಗಳಲ್ಲಿ ಇಡಲಾಯಿತು. ಹೀಗೆ ಅವನಿಗೆ ಎಷ್ಟೋ ಪೀಡೆ ಕೊಟ್ಟರೂ ಅವನು ಪ್ರತಾಪಸಿಂಹನ ವಿರುದ್ಧ ಸಾಕ್ಷ್ಯಹೇಳಲು ಖಂಡತುಂಡ ನಿರಾಕರಿಸಿದನು.

ಓವಾನ್ಸ ಪ್ರಭೃತಿಗಳು ಖೊಟ್ಟಿಸಾಕ್ಷ್ಯಗಳನ್ನು ಸಂಗ್ರಹ ಮಾಡುವದು ನೋಡಿ ರೆಸಿಡೆಂಟ ಲಡ್‌ವಿಗ್‌ಸು ಬೇಸತ್ತು ತನ್ನ ಹುದ್ದೆಗೆ ಶರಣು ಹೊಡೆದನು. ವಿಚಾರಣಾಮಂಡಳದವರು ಸಂಗ್ರಹಮಾಡಿದ ಸಾಕ್ಷಿಗಳಿಗೆ ಏನೂ ಜಿಲಿ ಇಲ್ಲವೆಂದು ಅವನು ಬಹಿರಂಗವಾಗಿ ಹೇಳಿಬಿಟ್ಟನು. ಲಡ್ವಿಗ್‌ಸು ಹೋದನಂತರ ಓವಾನ್ಸನನ್ನೆ ರೆಸಿಡೆಂಟನನ್ನಾಗಿ ನೇಮಿಸಲಾಯಿತು. ಆನಂತರವಂತೂ ಪ್ರತಾಪಸಿಂಹನ ವಿರುದ್ಧ ಒಂದು ಅನ್ಯಾಯದ ಸತ್ರವೇ ನಡೆಯಿತು. ಖೊಟ್ಟಿ ಸಾಕ್ಷಿಗಳನ್ನು ಸಂಗ್ರಹಿಸಲು ಇಂಗ್ಲೀಷರು ಸಾಕಷ್ಟು ಹಣ ಖರ್ಚು ಮಾಡಿ ಶ್ರಮಪಟ್ಟರು. ನಾಗಪೂರದ ಪದಚ್ಯುತ ಭೋಸಲೆ ಮನೆತನದವರ ಕೂಡ ಮತ್ತು ಗೋವಾ ಗವರ್ನರ ಜನರಲ್ಲರ ಕೂಡ ಪ್ರತಾಪಸಿಂಹನು ರಾಜಕೀಯ ಕಾರಸ್ಥಾನವನ್ನು ನಡೆಸಿದನೆಂದು ಸಿದ್ಧಪಡಿಸಲು ಬಾಳಾಜಿಪಂತ ನಾತೂ ಇವನು ಖೊಟ್ಟಿ ಪುರಾವೆಗಳನ್ನು ಸಿದ್ಧಪಡಿಸಿ ಕೊಟ್ಟನು. ಪ್ರತಾಪಸಿಂಹನೊಡನೆ ತಮ್ಮ ಯಾವ ಪತ್ರವ್ಯವಹಾರವೂ ನಡೆದಿಲ್ಲವೆಂದು ಗೋವಾ ಗವರ್ನರರು ಸ್ಪಷ್ಟವಾಗಿ ಹೇಳಿದರೂ ಓವಾನ್ಸ ಸಾಹೇಬನಿಗೆ ಬಾಳಾಜಿಪಂತ ನಾತೂನ ಸಾಕ್ಷಿಯೇ ವಿಶ್ವಾಸಾರ್ಹವಾಯಿತು.

ತನ್ನ ವಿರುದ್ಧ ಸಂಗ್ರಹಿಸಲಾದ ಎಲ್ಲ ಸಾಕ್ಷಿಪುರಾವೆಗಳನ್ನು ತನಗೆ ತೋರಿಸಬೇಕೆಂದು ಪ್ರತಾಪಸಿಂಹನು ಕಲಕತ್ತೆಗೆ ಗವರ್ನರ ಜನರಲ್ಲರೆಡೆಗೆ ಮೊರೆಯಿಟ್ಟನು. ಅಪೆಲ್ಲವುಗಳನ್ನು ಓದಿ ತೋರಿಸಬೇಕೆಂದು ಹಿಂದುಸ್ತಾನಸರಕಾರದಿಂದ ಆಜ್ಞೆ ಬಂದರೂ ಮುಂಬೈ ಗವರ್ನರನಾದ ಗ್ರಾಂಟ್‌ಸಾಹೇಬನು ಅದನ್ನು ಮುಚ್ಚಿಟ್ಟನು. ಮುಂದೆ ಗ್ರಾಂಟ್‌ಸಾಹೇಬನು ಗಲಬಿಲರಲ್ಲಿ ಸತ್ತು ಹೋಗಿ ಕಾರ್ನೆಕ್ ಗವರ್ನರನಾಗಿ ಬಂದನು. ಅತ್ತ ಹಿಂದುಸ್ತಾನ ಸರಕಾರದವರು ಮತ್ತು ಕಂಪನಿಯ ಡೈರೆಕ್ಟರರು, ಪ್ರತಾಪಸಿಂಹನ ವಿರುದ್ಧ ಸಾಕ್ಷಿ ಪುರಾವೆಗಳು ಸಮಾಧಾನಕರವಾಗಿಲ್ಲವೆಂದು ಅಭಿಪ್ರಾಯಪಟ್ಟು ವಿಚಾರಣೆ

ಯನ್ನು ತಡೆಹಿಡಿಯತಕ್ಕದ್ದೆಂದು ವಿಧಿಸಿದರು. ಇಷ್ಟರಲ್ಲಿ ಹೊಸ ಗವರ್ನರನು ಸಾತಾರೆಗೆ ಭೆಟ್ಟಿಕೊಟ್ಟು ಮೇಲಧಿಕಾರಿಗಳ ಯಾವ ಆಜ್ಞೆಯೂ ಇಲ್ಲದೆ ರೆಸಿಡೆಂಟನ ಕಿವಿಮಾತು ಕೇಳಿ ಪ್ರತಾಪಸಿಂಹನನ್ನು ಪದಚ್ಯುತಗೊಳಿಸಿಬಿಟ್ಟನು !

ಇದಕ್ಕೆ ನಿಜವಾದ ಕಾರಣ ಹೀಗಾಯಿತು. ಪ್ರತಾಪಸಿಂಹನಿಗೆ "ನೀನು ಆರೋಪಗಳಿಗೆ ಕಬೂಲಿ ಕೊಟ್ಟುಬಿಡು ; ಎಂದರೆ ಕ್ಷಮಿಸಿಬಿಡುತ್ತೇವೆ" ಎಂದು ಸಾಹೇಬರು ಹೇಳಿದರು ! ಪ್ರತಾಪಸಿಂಹನು ಸುಳ್ಳು ಆರೋಪಗಳನ್ನು ಒಪ್ಪಲು ನಿರಾಕರಿಸಿದನು. ಅವನು ಕಬೂಲಿಕೊಟ್ಟಿದ್ದರೂ ಇಂಗ್ಲೀಷರು ಅವನನ್ನು ತಳ್ಳಿಹಾಕದೆ ಬಿಡುತ್ತಿರಲಿಲ್ಲ. ಈ ಎಲ್ಲ ಒಳಸಂಚಿನಲ್ಲಿ ಸೇರಿಕೊಂಡಿದ್ದ ಪ್ರತಾಪಸಿಂಹನ ತಮ್ಮನಾದ ಅಪ್ಪಾಸಾಹೇಬನಿಗೆ ಪಟ್ಟವಾಯಿತು. ಬಾಳಾಜಿಪಂತ ನಾತು ದಿವಾಣನಾದನು ! ಪ್ರತಾಪಸಿಂಹನು ಕಾಶಿಯಲ್ಲಿ ನಜರಕೈದಿಯಾದನು!

ಇಷ್ಟಾದರೂ ಪ್ರತಾಪಸಿಂಹನು ನಿರಾಶೆಹೊಂದಲಿಲ್ಲ. ತನ್ನ ಎಲ್ಲ ಕಾಗದ ಪತ್ರಗಳನ್ನು ರಂಗೋ ಬಾಪೂಜಿ ಎಂಬ ಓರ್ವ ಅತ್ಯಂತ ಚಾಣಾಕ್ಷ ವಕೀಲನಿಗೆ ಒಪ್ಪಿಸಿ ಅವನನ್ನು ಇಂಗ್ಲಂಡಿಗೆ ಕಳುಹಿಸಿದನು. ರಂಗೋ ಬಾಪೂಜಿಯು ಅತ್ಯಂತ ಕಾರ್ಯನಿಷ್ಠನಿದ್ದನು. ಅವನನ್ನು ಇಂಗ್ಲಂಡಿಗೆ ಹೋಗಗೊಡಬಾರದೆಂದು ಮುಂಬೈ ಸರಕಾರವು ಬಹಳ ಪ್ರಯಾಸಪಟ್ಟರೂ ರಂಗೊ ಬಾಪೂಜಿ ಇಂಗ್ಲಂಡ ಮುಟ್ಟಿಯೇ ಬಿಟ್ಟ.

ರಂಗೊ ಬಾಪೂಜಿ ಇಂಗ್ಲಂಡದಲ್ಲಿ ಮಾಡಿದ ಪ್ರಯತ್ನ ಅಷ್ಟಿಷ್ಟಲ್ಲ. ಪ್ರತಾಪಸಿಂಹನ ಮೇಲೆ ಸುಳ್ಳು ಖಟ್ಲೆಯನ್ನು ಹೇಗೆ ನಡೆಯಿಸಲಾಯಿತೆಂಬುದರ ಒಂದು ಸಂಪೂರ್ಣ ಮತ್ತು ಅಧಿಕೃತವಾದ ಹೊತ್ತಿಗೆಯನ್ನು ಮುದ್ರಿಸಿ ರಂಗೊ ಬಾಪೂಜಿಯು ಪ್ರತಿಯೊಬ್ಬ ಪಾರ್ಲಿಮೆಂಟ ಸದಸ್ಯನಿಗೆ ಒಂದೊಂದು ಪ್ರತಿ ಮುಟ್ಟಿಸಿದನು. ಅಲ್ಲಿ ಅವನು ಇದ್ದಾಗಲೆ ಒಮ್ಮೆ ಚುನಾವಣೆಗಳು ಬಂದವು. ಆಗ ಉಮೇದವಾರರೊಡನೆ ಹೋಗಿ ಚುನಾವಣೆ ಪ್ರಚಾರದಲ್ಲಿ ಸಹ ಜನರಿಗೆ ಸಾತಾರಾದ ಕಥೆಯನ್ನು ತಿಳಿಸಿದನು. ಏನಾದರೂ ಉಪಯೋಗವಾಗಲಿಲ್ಲ. ಗವರ್ನರರಿಗೆ ಮುಖಭಂಗವಾಗುವಂಥ ಪ್ರತಿನಿರ್ಣಯವನ್ನು ಕೈಕೊಳ್ಳಲು ಮೇಲಿನವರು ಸಿದ್ಧರಿರಲಿಲ್ಲ. ೧೮೪೫ರಲ್ಲಿ ಪ್ರತಾಪಸಿಂಹನು ಗವರ್ನರ ಜನರಲ್ಲರ ಮುಖಾಂತರ ಒಂದು ಅಪೀಲನ್ನು ಇಂಗ್ಲಂಡಿಗೆ ಕಳಿಸಿದನು. ಅವನು ೧೮೪೭ರಲ್ಲಿ ಮರಣಹೊಂದಿದ ಮೇಲೆ ಗವರ್ನರ ಜನರಲ್ ಸಾಹೇಬನು

ಅದನ್ನು ಇಂಗ್ಲಂಡಿಗೆ ಕಳಿಸಿದನು. ರಂಗೊ ಬಾಪೂಜಿ ಇಂಗ್ಲಂಡದಲ್ಲಿರುವಾಗಲೆ ಪ್ರತಾಪಸಿಂಹನ ಮರಣವಾರ್ತೆ ಆವನಿಗೆ ತಲುಪಿತು. ಮುಂದೆ ಪ್ರತಾಪಸಿಂಹನ ರಾಣಿಯು ಹಿಂದುಸ್ತಾನ ಸರಕಾರದಿಂದ ಪ್ರೋಟಗಿ ಕೇಳಿದರೆ ರಂಗೊ ಬಾಪೂಜಿಯನ್ನು ವಾಪಸು ಕರೆಯಿಸಿಕೊಳ್ಳಬೇಕೆಂದು 'ಇಂಗ್ಲೀಷರು ಅವಳಿಗೆ ಕರಾರು ಹಾಕಿದರು. ರಂಗೊ ಬಾಪೂಜಿಯು ನಿರುಪಾಯನಾಗಿ ಬರಿಗೈಯಿಂದ ೧೮೫೩ರಲ್ಲಿ ಭಾರತಕ್ಕೆ ಮರಳಿದನು.

ಅಂದಿನ ಕಂಪನಿಸರಕಾರವು ಜನರಿಗೆ ಎಷ್ಟು ಘೋರ ಅನ್ಯಾಯವನ್ನು ಮಾಡಿ ತನ್ನ ರಾಜ್ಯತೃಷ್ಣೆಯನ್ನು ತೃಪ್ತಗೊಳಿಸಿಕೊಳ್ಳುತ್ತಿತ್ತೆಂಬ ಬಗ್ಗೆ ಸಾತಾರೆಯ ಒಂದೆ ಉದಾಹರಣೆ ಸಾಕು.[1] ರಂಗೋ ಬಾಪೂಜಿಯ ವಕೀಲಿಯ ಮೂಲಕ ಬ್ರಿಟಿಶರ ಎಷ್ಟೋ ಕೃಷ್ಣಕಾರಸ್ಥಾನಗಳು ಹೊರಬಿದ್ದವು.

## ಬಾಜಿರಾವ ಮತ್ತು ನಾನಾಸಾಹೇಬ

ಎರಡನೆ ಬಾಜಿರಾಯನು ಮೂರನೆ ಮರಾಠಾ ಯುದ್ಧದ ನಂತರ ೧೮೧೮ರಲ್ಲಿ ಇಂಗ್ಲೀಷರ ಪೆನ್ಶನರನಾಗಿ ಬ್ರಹ್ಮಾವರ್ತದಲ್ಲಿ ವಾಸಿಸತೊಡಗಿದನು. ಅವನಿಗೆ ವರ್ಷಕ್ಕೆ ಎಂಟು ಲಕ್ಷ ರೂಪಾಯಿ ಪೆನ್ಶನ್ ಗೊತ್ತುಮಾಡಿ ಅವನ ಎಲ್ಲ ರಾಜ್ಯವನ್ನು ಇಂಗ್ಲೀಷರು ಎತ್ತಿಹಾಕಿದರು. ಶಿಂದೆ, ಹೋಳಕರ ಗಾಯಕವಾಡರಂತೂ ಮೊದಲೆ ಇಂಗ್ಲೀಷರ ಮಾಂಡಲಿಕರಾಗಿದ್ದರು. ಹೀಗೆ ಇಂಗ್ಲೀಷರು ೧೮೦೦ರಿಂದ ೧೮೫೦ರೊಳಗೆ ಇಡಿಯ ಮರಾಠಾ ಸಾಮ್ರಾಜ್ಯವನ್ನೆ ಎತ್ತಿಹಾಕಿದರು.

ಬಾಜಿರಾಯನು ೧೮೫೧ರ ವರೆಗೆ ಬ್ರಹ್ಮಾವರ್ತದಲ್ಲಿದ್ದನು. ಇಂಗ್ಲೀಷರಿಂದ ತನಗೆ ಬಗೆಬಗೆಯ ಅನ್ಯಾಯಗಳಾಗಿದ್ದರೂ ಅವರೊಡನೆ ಅವನು ಸಖ್ಯದಿಂದಲೆ ಇದ್ದನು. ಅವರಿಗೆ ಮೇಲಿಂದಮೇಲೆ ಹಣಸಹಾಯ ಮಾಡುತ್ತಿದ್ದನು. ಬಂದ ಇಂಗ್ಲೀಷ ಅಧಿಕಾರಿಗಳು ಆವನಲ್ಲಿಯೇ ಇಳಿದುಕೊಳ್ಳುತ್ತಿದ್ದರು. ಅಫಗಾನಿಸ್ತಾನದ ಮೇಲೆ ಇಂಗ್ಲೀಷರು ದಂಡೆತ್ತಿಹೋದಾಗ ಇಂಗ್ಲೀಷರಿಗೆ ಅವನು ಐದು ಲಕ್ಷ ರೂಪಾಯಿ ಸಾಲಕೊಟ್ಟನು. ತನ್ನ ಉಳಿತಾಯವನ್ನು ಸಹ

1. ಹೆಚ್ಚಿನ ವಿವರಗಳಿಗಾಗಿ ಬೆಹರೆಯವರ "೧೮೫೭" ಎಂಬ ಮರಾಠಿ ಪುಸ್ತಕವನ್ನು ಓದಿರಿ. ಮೇಜರ ಬಸು ಇವರು *Story of Satara* ಎಂಬ ಸ್ವತಂತ್ರ ಪುಸ್ತಕವನ್ನೆ ಬರೆದಿರುವರು.

ಬಾಜಿರಾಯನು ಕಂಪನಿಯ ಹೆತ್ತಿರವೆ ಶೇವು ಇಟ್ಟಿದ್ದನು. ಬಾಜಿರಾಯನಿಗೆ ಗಂಡುಸಂತತಿಯಿರಲಿಲ್ಲ. ಆದ್ದರಿಂದ ಅವನು ತನ್ನ ಆಶ್ರಿತವರ್ಗದವರಲ್ಲಿ ಮಾಧವರಾವ ಭಟ ಎಂಬ ಸದ್ಗೃಹಸ್ಥನ ಔರಸಪುತ್ರನಾದ ಘೋಂಡೋಪಂತ ಎಂಬ ಬಾಲಕನನ್ನು ೭-೭-೧೮೨೭ನೆಯ ದಿನ ದತ್ತಕ ಮಾಡಿಕೊಂಡನು. ಇವನಿಗೆ ನಾನಾ ಸಾಹೇಬ ಎಂದು ಹೆಸರಿಡಲಾಯಿತು. ದತ್ತಕಸಮಯಕ್ಕೆ ನಾನಾಸಾಹೇಬನಿಗೆ ಕೇವಲ ೨½ ವರ್ಷಗಳಾಗಿದ್ದವು. ಅವನೇ ಮುಂದೆ ಶೂರವೀರ ಯೋದ್ಧನಾದನು.

ತನ್ನ ಜೀವಮಾನದ ನಂತರ ನಾನಾಸಾಹೇಬನೆ ಪೇಶ್ವೆಯರ ಗಾದಿಗೆ ಬರಬೇಕೆಂದೂ ತನ್ನ ಎಂಟುಲಕ್ಷ ಪೆನ್‌ಶೆನ್ನಿಗೆ ಅವನೇ ಬಾಧ್ಯಸ್ಥನೆಂದೂ, ಗಾದಿಗೆ ಸಂಬಂಧಪಟ್ಟ ಬಿರುದಾವಳಿಗಳೆಲ್ಲ ಅವನಿಗೇ ನಡೆಯಬೇಕೆಂದೂ ಬಾಜಿರಾಯನು ೧೮೩೯ರಲ್ಲಿ ಮೃತ್ಯುಪತ್ರಮಾಡಿ ಕಂಪನಿಗೆ ತಿಳಿಸಿದನು. ಕಂಪನಿಯವರು ಈಗ ಯಾಕೆ ಈ ವಿಷಯದ ಬಗ್ಗೆ ಅವಸರ ಎಂದು ಹಾರಿಕೆಯ ಉತ್ತರ ಕೊಟ್ಟರು

೧೮೫೧ರಲ್ಲಿ ಬಾಜಿರಾಯನು ಸ್ವರ್ಗಸ್ಥನಾದನು. ಆಗ ನಾನಾ ಘೋಂಡೋಪಂತ ಪೇಶ್ವೆ ಇವನು ಕೇವಲ ೨೭ ವರ್ಷದ ತರುಣನಿದ್ದನು. ಮುಂದೆ ಮೂರುನಾಲ್ಕು ವರ್ಷ ಬ್ರಹ್ಮಾವರ್ತದಲ್ಲಿ ಎಲ್ಲ ರೀತಿಯು ಮೊದನಂತೆಯೇ ನಡೆಯಿತು. ಇಂಗ್ಲೀಷ ಅಧಿಕಾರಿಗಳು ಎಂದಿನಂತೆ ಬ್ರಹ್ಮಾವರ್ತಕ್ಕೆ ಬಂದು ನಾನಾನ ಆತಿಥ್ಯ ಸ್ವೀಕರಿಸಿ ಮನಸಾರೆ ಅವನನ್ನು ಕೊಂಡಾಡಿ ಹೋಗುತ್ತಿದ್ದರು. ನಾನಾಸಾಹೇಬನು ಶಾಂತನೂ, ಮಿತಭಾಷಿಯೂ ಸಜ್ಜನನೂ ಇದ್ದಾನೆಂದು ಅನೇಕ ಉಲ್ಲೇಖಗಳು ದೊರೆತಿವೆ.

ಬಾಜಿರಾಯನು ನಾನಾಸಾಹೇಬನಿಗೆ ಸುಮಾರು ೨೮ ಲಕ್ಷ ರೂಪಾಯಿ ನಗದು ಬಿಟ್ಟು ತೀರಿಕೊಂಡನು. ಮಗನಿಗೂ ಕಂಪನಿಸರಕಾರ ಪೆನ್ಶನ್ ಕೊಡುವದೆಂಬ ಕಲ್ಪನೆಯಿಂದ ಅವನು ಹೆಚ್ಚಿಗೆ ಉಳಿತಾಯ ಮಾಡಲಿಲ್ಲ. ಪೆನ್ಶನ್ನಿಗಾಗಿ ನಾನಾಸಾಹೇಬನು ಸರಕಾರಕ್ಕೆ ಮಾಡಿಕೊಂಡ ವಿನಂತಿಯನ್ನು ಲಾರ್ಡ ಡಾಲಹೌಸಿಯು ತಿರಸ್ಕರಿಸಿ, "ನಿಮ್ಮ ತಂದೆ ಕಂಪನಿ ಹಣವನ್ನು ೩೩ ವರ್ಷ ತಿಂದಿದ್ದಾನೆ; ನಿನಗೆ ಸಾಕಷ್ಟು ಬಿಟ್ಟಿದ್ದಾನೆ." ಎಂದು ಅವಮಾನಕರ ಉತ್ತರ ಕೊಟ್ಟನು. ಸರಕಾರದ ಉತ್ತರದಿಂದ ನಾನಾ ತುಂಬಾ ನೊಂದುಕೊಂಡಿರಬೇಕು. ಆದರೂ ಅವನು ಸುಮ್ಮನಿದ್ದು ಇಂಗ್ಲೀಷರೊಡನೆ ಸಭ್ಯತನ

ದಿಂದಲೇ ಇದ್ದನು.

ತಂದೆಯು ತೀರಿದ ಮೇಲೆ ನಾನಾಸಾಹೇಬನಿಗೆ ತನ್ನ ಆಶ್ರಿತರನ್ನೆಲ್ಲ ನೋಡಿಕೊಂಡು ಹೋಗುವದು ಜಡವಾಗಹತ್ತಿತು. ಇಂಗ್ಲೀಷರ ಧೋರಣೆಯಿಂದ ಅವನು ತುಂಬಾ ಕಷ್ಟಕ್ಕೊಳಗಾದನು. ಬಾಜಿರಾಯನು ತೀರಿದ ಕೂಡಲೆ ನಾನಾಸಾಹೇಬನಿಗೆ ಅನೇಕ ಕಟು ಅನುಭವಗಳು ಬರತೊಡಗಿದವು. ತಂದೆಯ ದಿನಕರ್ಮಾದಿಗಳನ್ನು ಪೂರ್ತಿಗೊಳಿಸುವಾಗ ಬ್ರಾಹ್ಮಣರಿಗೆ ಆನೆ, ಒಂಟೆ, ಚಿನ್ನ, ಮುತ್ತುರತ್ನಗಳು ಮತ್ತು ಭೂಮಿ ಹೀಗೆ ಐದು ಮುಖ್ಯ ಮಹಾದಾನಗಳನ್ನು ಮಾಡುವಾಗ ದಾನಮಾಡಲು ತನ್ನೆಡಗೆ ಭೂಮಿಯೇ ಇಲ್ಲವೆಂದು ನಾನಾಸಾಹೇಬನಿಗೆ ತಿಳಿಯಿತು. ಪೇಶವೆ ಸರದಾರರಾದ ಶ್ರೀ. ರಘುನಾಥರಾವ ವಿಂಚೂರಕರರು ಪೇಶ್ವೆಯವರಿಂದಲೆ ಇನಾಮಾಗಿ ಬಂದ ೫೨ ಹಳ್ಳಿಗಳಲ್ಲಿ ಬೇಕಾದಷ್ಟು ದಾನಮಾಡಿರೆಂದು ನಾನಾಸಾಹೇಬನಿಗೆ ವಿನಂತಿ ಮಾಡಿಕೊಂಡರು. ನಾನಾನ ಕಣ್ಣಲ್ಲಿ ನೀರೊಡೆಯಿತು. ಪೇಶ್ವಾಯಿಯನ್ನೆ ಎತ್ತಿಹಾಕಿದ ಅನೇಕ ಇಂಗ್ಲೀಷರೂ ಸಮಾರಂಭಕ್ಕೆ ಬಂದಿದ್ದರೂ ಅವರಲ್ಲಿ ಒಬ್ಬನೂ ಚಕಾರ ಶಬ್ದ ನುಡಿಯಲಿಲ್ಲ. ( ಸೇನ ೧೨೫-೨೬ )

ಅಜಿಮುಲ್ಲಾ ಖಾನ ಎಂಬ ತನ್ನ ಓರ್ವ ಇಂಗ್ಲೀಷ ಬಲ್ಲ ಮಿತ್ರನನ್ನು ಇಂಗ್ಲಂಡಿಗೆ ಕಳಿಸಿ ಕಂಪನಿಗೆ ಪೆನ್ಶನ ಬಗ್ಗೆ ಆಪೀಲು ಮಾಡಿಕೊಂಡನು. ಅವನ ಆ ಪ್ರಯತ್ನಗಳೆಲ್ಲವೂ ವಿಫಲವಾದವು; ಅವನ ಹೃದಯವು ಕಲ್ಲಾಯಿತು.

ಬಾಜಿರಾಯನೂ ಅವನ ಆಶ್ರಯದಲ್ಲಿದ್ದ ಜನರೂ ಬ್ರಿಟಿಶ್ ನ್ಯಾಯಾಲಯಗಳ ಅಧಿಕಾರಕ್ಕೆ ಒಳಗಾಗಿರಲಿಲ್ಲ. ಬಾಜಿರಾಯನು ತೀರಿಕೊಂಡ ಮೇಲೆ ಫೆಬ್ರುವರಿ ೧೮೫೧ರಲ್ಲಿ ಈ ವಿಶೇಷ ಹಕ್ಕನ್ನು ರದ್ದುಗೊಳಿಸಲಾಯಿತು. ನಾನಾಸಾಹೇಬನನ್ನು ಸಾಮಾನ್ಯ ನಾಗರಿಕರ ದರ್ಜೆಗೆ ಇಳಿಸಲಾಯಿತು.

ಬಾಜಿರಾಯನ ಮೊಹರನ್ನು ನಾನಾ ತನ್ನ ಪತ್ರವ್ಯವಹಾರಗಳಲ್ಲಿ ಉಪ-ಯೋಗಿಸತಕ್ಕದ್ದಲ್ಲವೆಂದು ಬಿಠೂರಿನ ಕಮಿಶನರನು ವಿಧಿಸಿದನು. ಕೂಡಲೆ ನಾನಾಸಾಹೇಬನು "ಪೇಶ್ವೆ ಬಹದೂರ್" ಎಂಬ ಹೊಸದೊಂದು ಮೊಹರನ್ನು ತಯಾರಿಸಿದನು; ಅದಕ್ಕೂ ಕಮಿಶನರನು ಒಪ್ಪಲಿಲ್ಲ. "ಶ್ರೀಮಾನ್ ನಾನಾ ಧೋಂಡೋಪಂತ ಬಹದ್ದೂರ್" ಎಂಬ ಮೊಹರನ್ನು ಮಾತ್ರ ಉಪಯೋಗಿಸಲು ಸಮ್ಮತಿಸಲಾಯಿತು. ( ಸುರೇಂದ್ರನಾಥ ಸೇನ ೧೨೫-೨೬ ).

ಹೀಗೆ ನಾನಾಸಾಹೇಬನು ಅನೇಕ ಅವಮಾನಗಳಿಗೆ ಒಳಗಾಗಿ ಇಂಗ್ಲೀಷರ ಕಡುವೈರಿಯಾದನು.

**ತಂಜಾವರ**

ತಂಜಾವರದ ಕಥೆಯೂ ಸಾಕಷ್ಟು ಸಂತಾಪಕರವಾಗಿದೆ. ಈ ರಾಜ್ಯವನ್ನು ಛತ್ರಪತಿ ಶಿವಾಜಿಯ ತಂದೆಯಾದ ಶಹಾಜಿಯು ಸ್ಥಾಪನೆ ಮಾಡಿದ್ದು ಈ ರಾಜ್ಯದಮೇಲೆ ಬ್ರಿಟಿಶರ ಯಾವ ಅಧಿಕಾರವೂ ಇರಲಿಲ್ಲ. ೧೮೫೫ರಲ್ಲಿ ಕೊನೆಯ ಶಿವಾಜಿ ಮಹಾರಾಜನು ಗಂಡುಸಂತತಿಯಿಲ್ಲದೆ ತೀರಿಕೊಂಡನು. ಮಹಾರಾಜನಿಗೆ ಓರ್ವ ಮಗಳಿದ್ದು ಅವಳಿಗೆ ಪಟ್ಟವಾಗಬೇಕೆಂದು ಅಲ್ಲಿಯ ರೆಸಿಡೆಂಟಸಾಹೇಬರು ಶಿಫಾರಸು ಸಹ ಮಾಡಿದ್ದರು. ಡಾಲಹೌಸಿಗೆ ರಾಜ್ಯವನ್ನು ಖಾಲಸಾ ಮಾಡಲು ಒಂದು ನೆವ ಬೇಕಾಗಿತ್ತು. ೧೮೫೬ರಲ್ಲಿ ತಂಜಾವರದ ಸಿಂಹಾಸನದ ಮೇಲೆ ಓರ್ವ ರಾಣಿಯು ಇದ್ದಳೆಂಬ ಆಧಾರವನ್ನು ತೋರಿಸಿದರೂ ಹಿಂದುಸ್ತಾನ ಸರಕಾರವು ಅದನ್ನು ಮಾನ್ಯಮಾಡಲಿಲ್ಲ. ಅದೇ ವರ್ಷ ಅಕ್ಟೋಬರ ತಿಂಗಳಲ್ಲಿ ತಂಜಾವರ ಮತ್ತು ಅರ್ಕಾಟಗಳೆರಡನ್ನೂ ಬ್ರಿಟಿಶ್ ಸಾಮ್ರಾಜ್ಯದಲ್ಲಿ ಸೇರ್ಪಡೆ ಮಾಡಿಬಿಡಲಾಯಿತು. ತೀರಿಕೊಂಡ ಶಿವಾಜಿ ಮಹಾರಾಜರ ವಿಧವಾ ರಾಣಿ ಕಾಮಾಕ್ಷಿಬಾಯಿಯು ಮದ್ರಾಸ್ ಹೈಕೋರ್ಟಿಗೆ ದಾವೆ ಮಾಡಿದರೆ ಹೈಕೋರ್ಟು ಕಾಮಾಕ್ಷಿಬಾಯಿಗೆ ಅನುಕೂಲವಾದ ತೀರ್ಪನ್ನು ಕೊಟ್ಟಿತು! ಹಿಂದುಸ್ತಾನ ಸರಕಾರವು ಪ್ರಿವ್ಹಿ ಕೌನ್ಸಿಲಿಗೆ ಅಪೀಲು ಮಾಡಲು ಸರಕಾರದ ಈ ಸೇರ್ಪಡೆಯು "ರಾಜಕೃತಿ" ( An Act of State ) ಯಾಗಿದ್ದಮೂಲಕ ಕೋರ್ಟಿಗೆ ಕೈಹಾಕಲು ಅಧಿಕಾರವೇ ಇಲ್ಲವೆಂದು ತೀರ್ಪಾಯಿತು. ರಾಣಿಯು ರಾಜ್ಯ ಕಳೆದುಕೊಂಡಳು. ಆದರೆ ಪ್ರಿವ್ಹಿ ಕೌನ್ಸಿಲಿನವರು ಮಾತ್ರ ತಮ್ಮ ತೀರ್ಪಿನಲ್ಲಿ ಸರಕಾರದ ಈ ಕೃತಿಯನ್ನು "ತಂಜಾವರದ ಲೂಟಿ" ಎಂದು ಧಿಕ್ಕರಿಸಿ ಬರೆದಿದ್ದಾರೆ.

**ನಾಗಪೂರ**

ಹೀಗೆಯೆ ಅನ್ಯಾಯದ ಮೇಲೆ ಅನ್ಯಾಯ ಮಾಡಿ ೧೮೫೪ರಲ್ಲಿ ನಾಗಪೂರ ಸಂಸ್ಥಾನವನ್ನೂ ಡಾಲಹೌಸಿಯು ಎತ್ತಿ ಹಾಕಿದನು. ನಾಗಪೂರದಲ್ಲಿ ಆಗ ಭೋಸಲೆ ರಾಜಮನೆತನದವರು ಆಳುತ್ತಿದ್ದರು. ಬ್ರಿಟಿಶರೊಡನೆ ಮೊದಲಿ

ನಿಂದಲೂ ಇವರ ಸ್ನೇಹವು ವಿಶೇಷವಾಗಿರಲಿಲ್ಲ. ೧೮೫೩ರಲ್ಲಿ ಮೂರನೆಯ ರಾಘೋಜಿಯ ಅಂತವಾಯಿತು. ಅವನಿಗೆ ಔರಸ ದತ್ತಕಪುತ್ರನಿದ್ದರೂ ಡಾಲಹೌಸಿಯು ಅವನನ್ನು ಮಾನ್ಯ ಮಾಡದೆ ಸಂಸ್ಥಾನವನ್ನು ಖಾಲಸಾ ಮಾಡುವ ಆಜ್ಞೆಯನ್ನು ೧೮೫೪ ಜೆನೆವರಿ ೨೮ನೆಯ ದಿನ ಹೊರಡಿಸಿದನು.

ಮೊದಲಿನ ಅನ್ಯಾಯಗಳು ಒತ್ತಟ್ಟಿಗಿರಲಿ. ರಾಜ್ಯವನ್ನು ವಶಮಾಡಿಕೊಂಡ ಮಹನೀಯರು ಅರಸುಮನೆತನದ ಖಾಸಗಿ ಆಸ್ತಿಪಾಸ್ತಿಯನ್ನು ಸಹ ಜಪ್ತ ಮಾಡಿಬಿಟ್ಟರು! ರಾಣಿಯರ ಸ್ತ್ರೀಧನವನ್ನು ಸಹ ಕಿತ್ತುಕೊಂಡರು. ಲಕ್ಷಾಂತರ ರೂಪಾಯಿಗಳ ಆಭರಣಗಳನ್ನೂ ಮುತ್ತು-ರತ್ನಗಳನ್ನೂ ಕಲಕತ್ತೆ ಪೇಟೆಗೆ ಸಾಗಿಸಿ ಲಿಲಾವು ಮಾಡಿಸಿದರು! ಕೆಲವು ಆಭರಣಗಳು ನೇರವಾಗಿ ವಿಲಾಯತಿಗೆ ಹೋದವು!

ರಾಣಿ ಬಾಕಾಬಾಯಿ ಎಂಬ ಹಿರಿಯ ರಾಣಿಗೆ ತುಂಬಾ ವ್ಯಸನವಾಯಿತು. ಅರಮನೆಯ ಖುರ್ಚಿ-ಮೇಜುಗಳಿಗೆ ಕೈಹಚ್ಚಿದರೆ ನಾನು ಅರಮನೆಗೆ ಕೊಳ್ಳಿ ಕೊಡುತ್ತೇನೆ ಎಂದು ಬೆದರಿಕೆ ಹಾಕಿದಳು. ಆದರೂ ಅವಳ ಆಟವು ನಡೆಯಲಿಲ್ಲ. ಖುರ್ಚಿ-ಮೇಜುಗಳ ಲಿಲಾವು ನಡೆದೇಬಿಟ್ಟಿತು. ಉಟ್ಟವಸ್ತ್ರಗಳ ಮೇಲೆ ಭೋಸಲೆ ಅರಸುಮನೆತನದವರು ಅರಮನೆ ಬಿಟ್ಟು ಹೊರಡಬೇಕಾಯಿತು. "ಸೀತಾಬಾಲ್ಡಿ ಎಂಬಲ್ಲಿ ಭೋಸಲೆ ಅರಸರ ಆನೆ, ಕುದುರೆ, ಒಂಟೆ, ದನಕರ ಮೊದಲಾದವು ಲಿಲಾವು ಮಾಡಲಾದವು. ಐವರಿಂದ ಆರುನೂರರ ವರೆಗೆ ಆನೆಗಳು, ಒಂಟೆಗಳು, ಕುದುರೆಗಳು, ಎತ್ತುಗಳು ಲಿಲಾವಿಗೆ ಬಂದವು. ಒಂದು ನೂರು ರೂಪಾಯಿ ಬೆಲೆಬರುವ ದನಕರುಗಳನ್ನು ಐದು ರೂಪಾಯಿಗಳಿಗೆ ಅಂದರೆ ಅವುಗಳ ಮಾಂಸದ ಕಿಮ್ಮತ್ತಿಗೆ ಮಾರಲ್ಪಟ್ಟವು. ರಾಜ್ಯಹಾನಿಗಿಂತಲೂ ಈ ಜಾಹೀರ ಲಿಲಾವಿನಿಂದ ರಾಜರಿಗೂ ಪ್ರಜರಿಗೂ ಸಹಿಸಲಾರದಷ್ಟು ಅವಮಾನ ನೋವುಗಳಾದವು." (Kaye, Vol. 1 P. 60-61).

**ಝಾಂಸಿ**

ಝಾಂಸಿ ಸಂಸ್ಥಾನದ ಹಾಡೂ ಹೀಗೇ ಆಯಿತು. ರಾಣಿ ಲಕ್ಷ್ಮೀಬಾಯಿಯ ಅತುಲ ಪರಾಕ್ರಮದಿಂದಲ್ಲದೆ ಇದುವರೆಗೆ ಝಾಂಸಿಯ ಹೆಸರು ಕೂಡ ಉಳಿಯುತ್ತಿರಲಿಲ್ಲವೇನೊ. ಒಮ್ಮೆ ನಿರಾಶೆ ಹೊಂದಿ ಬ್ರಿಟಿಶರ ಅನ್ಯಾಯದಿಂದ ಸಂತಪ್ತಳಾದ ಲಕ್ಷ್ಮೀಬಾಯಿಯು ಬ್ರಿಟಿಶರ ಕಡುವೈರಿ

ಯಾಗಿ ಕಾದುತ್ತ ರಣರಂಗದಲ್ಲಿಯೇ ಮಡಿದಳು. ಲಕ್ಷ್ಮೀಬಾಯಿಯ ಹೆಸರು ಸ್ವಾತಂತ್ರ್ಯಯುದ್ಧಕ್ಕೆ ಸಹ ಕೀರ್ತಿ ತಂದು ಇಂದಿಗೂ ಬೆಳಗುತ್ತಿದೆ. ಅವಳ ನಿರ್ಮಲ ಚರಿತ್ರೆ, ಅಪಾರ ಕ್ಷಾತ್ರತೇಜ, ಯುದ್ಧದಲ್ಲಿ ಅವಳು ಪ್ರದರ್ಶಿಸಿದ ಶೌರ್ಯ ಸಾಹಸಗಳನ್ನು ನೋಡಿದರೆ ರಾಣಿಯ ವ್ಯಕ್ತಿತ್ವದಲ್ಲಿದ್ದ ಅಗಾಧ ಸುಪ್ತ ಶಕ್ತಿ ಕಷ್ಟನಷ್ಟಗಳಿಂದ ಎಚ್ಚತ್ತು ಆರ್ಭಟದಿಂದ ಆವಿರ್ಭವಿಸಿತೆಂದು ಹೇಳಬಹುದು.

ಝಾಂಸಿಯು ಬುಂದೇಲಖಂಡದ ಚಿಕ್ಕ ಸಂಸ್ಥಾನಗಳಲ್ಲಿ ಒಂದು. ಮೊದಲನೆಯ ಪೇಶ್ವೆ ಬಾಜಿರಾಯನು ಇದನ್ನು ಛತ್ರಸಾಲ ಅರಸರಿಂದ ಇನಾಮಾಗಿ ಪಡೆದಿದ್ದನು; ಇಲ್ಲಿ ನೆವಲಕರ ಎಂಬ ಸರದಾರರ ಮನೆತನವಿತ್ತು. ಇವರೂ ಮಹಾರಾಷ್ಟ್ರೀಯ ಬ್ರಾಹ್ಮಣರೆ. ೧೮೪೨ ರ ಸುಮಾರಿಗೆ ಗಂಗಾಧರರಾವ ಎಂಬುವವನು ಝಾಂಸಿಯ ರಾಜನಾದನು. ಪೇಶ್ವಾಯಿಯ ಆಳಿಗಾಲದೊಡನೆ ಝಾಂಸಿಯು ಕಂಪನಿಸರಕಾರದ ಮಾಂಡಲೀಕ ಸಂಸ್ಥಾನವಾಗಿದ್ದರೂ ಕಂಪನಿ ಸರಕಾರದೊಡನೆ ಝಾಂಸಿಯವರು ವಿಶೇಷ ಸ್ನೇಹವನ್ನು ಬೆಳೆಯಿಸಿದ್ದರು. ಬುಂದೇಲಖಂಡದಲ್ಲಿ ಇಂಗ್ಲೀಷರಿಗೆ ಆಸ್ಪದ ಕೊಟ್ಟವರೆ ಝಾಂಸಿ ರಾಜರು.

೧೮೪೨ರಲ್ಲಿ ಗಂಗಾಧರರಾಯನು ಪಟ್ಟಕ್ಕೆ ಬಂದಾಗ ಝಾಂಸಿ ಸಂಸ್ಥಾನವು ಅವ್ಯವಸ್ಥಿತ ಸ್ಥಿತಿಯಲ್ಲಿತ್ತು. ಮೊದಲಿನ ಕೆಲವು ರಾಜರ ಮಂದಿಸಿಂದಲೂ ಕಂಪನಿಯ ಸೈನ್ಯದ ಖರ್ಚನ್ನು ಹಿಡಿದೂ ಝಾಂಸಿಯು ಬಡವಾಗುತ್ತ ನಡೆದಿತ್ತು. ಗಂಗಾಧರರಾಯನು ಸಾವಕಾಶವಾಗಿ ಉಚಿತ ಸುಧಾರಣೆಗಳನ್ನು ಮಾಡಹತ್ತಿದನು. ಇವನ ಕಾಲದಲ್ಲಿ ಒಂದು ಸರ್ವಶ್ರೇಷ್ಠ ಸಂಸ್ಕೃತಪುಸ್ತಕಗಳ ಲೈಬ್ರರಿ ನಿರ್ಮಾಣವಾಗಿತ್ತು. ಗಂಗಾಧರರಾಯನು ಪಟ್ಟಕ್ಕೆ ಬಂದಾಗ ಲಕ್ಷ್ಮೀಬಾಯಿಯು ಗಂಡನ ಮನೆಗೆ ಬಂದು ಆರೇಳು ತಿಂಗಳುಗಳಾಗಿರಬೇಕು. ಅವಳು ೧೮೩೫ರಲ್ಲಿ ಹುಟ್ಟಿದ್ದು ನಿಜವಿದ್ದರೆ ಲಗ್ನದ ಕಾಲಕ್ಕೆ ಲಕ್ಷ್ಮೀಬಾಯಿಗೆ ಕೇವಲ ಎಂಟೆ ವರ್ಷಗಳಾಗಿರಬೇಕು. ಗಂಗಾಧರರಾಯನಿಗೆ ಆಗಲೆ ಇಳಿವಯಸ್ಸು. ಆದರೂ ಮೊದಲನೆಯ ಹೆಂಡತಿಗೆ ಮಕ್ಕಳಾಗಲಿಲ್ಲವೆಂದು ಲಕ್ಷ್ಮೀಬಾಯಿಯನ್ನು ಮದುವೆಯಾಗಿದ್ದ.

ಲಕ್ಷ್ಮೀಬಾಯಿಯ ತಂದೆಯ ಹೆಸರು ಮೋರೋಪಂತ ತಾಂಬೆ. ಇವರು ಕರಾಡಾ ಬ್ರಾಹ್ಮಣರು. ಎರಡನೆಯ ಬಾಜಿರಾಯನ ಆಶ್ರಯದಲ್ಲಿದ್ದ ಬಡ ಮನೆತನವಿದು; ಲಕ್ಷ್ಮೀಬಾಯಿಯ ತವರುಮನೆ ಹೆಸರು ಮಣಿಕರ್ಣಿಕಾ

ಎಂದಿತ್ತು; ಸಲಿಗೆಯಿಂದ ಮನೂಬಾಯಿ ಎಂದು ಕರೆಯುತ್ತಿದ್ದರು. ಲಕ್ಷ್ಮೀಬಾಯಿಯು ತನ್ನ ಬಾಲ್ಯವನ್ನು ಬ್ರಹ್ಮಾವರ್ತದಲ್ಲಿಯೇ ಕಳೆದಳೆಂದೂ ಆಗ ಅಲ್ಲಿ ನಾನಾಸಾಹೇಬ ಮತ್ತು ತಾತ್ಯಾ ಟೋಪೆ ಇದ್ದರೆಂದೂ ಹೇಳುತ್ತಾರೆ. ಮನೂಬಾಯಿ ಬಾಲ್ಯದಿಂದಲೂ ಜಾಣೆಯೂ ದಿಟ್ಟೆಯೂ ಇದ್ದಳು. ಕುದುರೆ ಹತ್ತುವದು, ಬಯಲಲ್ಲಿ ಆಟಪಾಟಗಳು ಎಂದರೆ ಅವಳಿಗೆ ತುಂಬಾ ಆಸಕ್ತಿಯಿತ್ತು.

೧೮೫೧ ರಲ್ಲಿ ಲಕ್ಷ್ಮೀಬಾಯಿಗೆ ಒಂದು ಗಂಡುಮಗು ಹುಟ್ಟಿತು. ಆದರೆ ಅದು ಎರಡು ಮೂರು ತಿಂಗಳಲ್ಲಿ ತೀರಿಕೊಂಡಿತು. ೧೮೫೩ ರಲ್ಲಿ ಗಂಗಾಧರರಾಯನ ಪ್ರಕೃತಿಯು ಅಸ್ವಸ್ಥವಾಯಿತು. ಆಗ ಮೇಜರ ಎಲಿಸ್ ಎಂಬುವನು ಝಾಂಸಿಯ ರೆಸಿಡೆಂಟನು ಮತ್ತು ಮೇಜರ್ ಮಾಲಕಮ್ ಎಂಬುವನು ಬುಂದೇಲಖಂಡದಲ್ಲಿ ಗವರ್ನರ ಜನರಲ್ಲರ ಏಜಂಟನೂ ಆಗಿದ್ದರು. ಕ್ಯಾಪ್ಟನ್ ಮಾರ್ಟಿನ್ ಎಂಬವನು ಝಾಂಸಿಯಲ್ಲಿ ಕಂಪನಿಯ ಸೇನಾಪತಿಯಾಗಿದ್ದನು. ಗಂಗಾಧರರಾಯನು ಅಸ್ವಸ್ಥತೆಯಿಂದ ಅಧೀರನಾಗಲು ಮರಣದ ಮುಂಚಿನ ದಿನ ಮೇಜರ ಎಲಿಸ್ ಮತ್ತು ಕ್ಯಾಪ್ಟನ್ ಮಾರ್ಟಿನ್ ಇವರ ಸಮಕ್ಷಮ ನೇವಲಕರ ಮನೆತನದವನೆ ಆಗಿದ್ದ ಐದು ವರ್ಷದ ದಾಮೋದರ ಎಂಬ ಹುಡುಗನನ್ನು ದತ್ತಕ ಮಾಡಿಕೊಂಡನು. ನೊವೆಂಬರ ೨೦, ೧೮೫೩ ನೆಯ ಇಸ್ವಿಯ ದಿನ ದತ್ತಕವಿಧಾನವು ಶಾಸ್ತ್ರೋಕ್ತವಾಗಿ ಸಾಂಗವಾಯಿತು. ಗಂಗಾಧರರಾಯನು ಕಂಪನಿಸರಕಾರಕ್ಕೆ ಒಂದು ಪತ್ರವನ್ನು ಬರೆದು, ದಾಮೋದರನು ಝಾಂಸಿಯ ಪಟ್ಟಕ್ಕೆ ವಾರಸದಾರನೆಂದೂ ಲಕ್ಷ್ಮೀಬಾಯಿ ಅವನ ಸಂರಕ್ಷಕ ರಾಜಮಾತೆಯೆಂದೂ ಅದರಲ್ಲಿ ಉಲ್ಲೇಖಿಸಿ, ರೆಸಿಡೆಂಟಸಾಹೇಬರ ಕೈಯಲ್ಲಿ ಕೊಟ್ಟು ಮರುದಿನ ಇಹಲೋಕ ತ್ಯಾಗಮಾಡಿದನು.

ರೆಸಿಡೆಂಟನು ದತ್ತಕವು ಮಾನ್ಯವಾಗಿ ದಾಮೋದರನಿಗೆ ರಾಜ್ಯವು ನಡೆಯಬೇಕೆಂದು ಶಿಫಾರಸುಮಾಡಿದನು. ಡಾಲಹೌಸಿಗೆ ಇದೊಂದು ಅಪೂರ್ವ ಸಂಧಿಯಾಗಿತ್ತು. ಬುಂದೇಲಖಂಡದ ಇತರ ಸಂಸ್ಥಾನಗಳಾದ ದಾತಿಯಾ ಓರ್ಛಾ ಮೊದಲಾದ ಸಂಸ್ಥಾನಗಳಲ್ಲಿ ನಡೆದ ದತ್ತಕಗಳನ್ನು ಕಂಪನಿಸರಕಾರವು ಮಾನ್ಯಮಾಡಿತ್ತು. ಝಾಂಸಿಯು ಆ ಸಂಸ್ಥಾನಗಳಂತೆ ಯಾವಾಗಲೂ ಸ್ವತಂತ್ರವಾಗಿರಲೇ ಇಲ್ಲವೆಂದು ಡಾಲಹೌಸಿಯು ಹಟಹಿಡಿದನು. ಸುತ್ತಲಿನ ಬ್ರಿಟಿಶ ಪ್ರದೇಶಗಳಿಗೆ ಝಾಂಸಿಯ ವಿಲಯನ ಅನುಕೂಲವಿತ್ತು. ಯಾ

ಸಲಹೆಸೂಚನೆಗಳನ್ನು ಕೇಳದೆ ಡಾಲಹೌಸಿಯು ಮಾರ್ಚ ೧೮೫೪ರಲ್ಲಿ ಝಾಂಸಿಯನ್ನು ಖಾಲಸಾ ಮಾಡಿಯೇ ಬಿಟ್ಟನು.

ಲಕ್ಷ್ಮೀಬಾಯಿಗೆ ಅತಿಶಯ ವ್ಯಥೆಯಾಯಿತು. ರೆಸಿಡೆಂಟನು ಒಂದು ಸ್ತಾನಸರಕಾರದ ಹುಕುಮನ್ನು ತೋರಿಸಿದ ಕೂಡಲೆ ರಾಣಿಯ ಕಣ್ಣುಗಳಲ್ಲಿ ನೀರು ಹರಿಯಹತ್ತಿತು. ಗದ್ಗದಿತ ಕಂಠದಿಂದ "ನನ್ನ ಝಾಂಸಿ ಕೊಡಲಾರೆ" ಎಂದು ಲಕ್ಷ್ಮೀಬಾಯಿ ಉದ್ಗಾರ ತೆಗೆದಳಂತೆ! ಅರವತ್ತು ಸಾವಿರ ರೂಪಾಯಿ ಖರ್ಚುಮಾಡಿ ಲಕ್ಷ್ಮೀಬಾಯಿಯು ಉಮೇಶಚಂದ್ರ ಬ್ಯಾನರ್ಜಿ ಎಂಬ ವಕೀಲ ನನ್ನು ಇಂಗ್ಲಂಡಿಗೆ ಕಳಿಸಿ ಡೈರೆಕ್ಟರ ಮಂಡಳಕ್ಕೆ ಅಪೀಲು ಮಾಡಿದಳು; ಏನೂ ಪ್ರಯೋಜನವಾಗಲಿಲ್ಲ.

ಲಕ್ಷ್ಮೀಬಾಯಿಯು ಎಲ್ಲವನ್ನೂ ಶಾಂತತೆಯಿಂದ ಸಹಿಸಿಕೊಂಡಳು. ಅವಳಿಗೆ ಇಂಗ್ಲೀಷರು ತಿಂಗಳಿಗೆ ಆರು ಸಾವಿರ ರೂಪಾಯಿಗಳ ಪನ್ಶನ್ನು ಕೊಟ್ಟರು. ಆದರೆ ಅವಳ ಆಶ್ರಿತರ ಸಂಖ್ಯೆಯು ಬಹಳಿದ್ದ ಮೂಲಕ ಗೌರವ ದಿಂದ ಬಾಳುವದು ಅವಳಿಗೆ ಕಠಿಣವಾಯಿತು. ಕೋಟೆಯನ್ನು ಖಾಲಿ ಮಾಡಿ ಲಕ್ಷ್ಮೀಬಾಯಿಯು ಊರಲ್ಲಿಯ ಒಂದು ವಾಡೆಯಲ್ಲಿ ವಾಸಿಸಬೇಕಾಯಿತು. ಝಾಂಸಿಯ ಸೈನ್ಯವನ್ನು ವಿಸರ್ಜನೆ ಮಾಡಿ ಕೋಟೆಯನ್ನು ಬಂಗಾಲ ಸೈನ್ಯದ ೧೨ನೆಯ ಕಾಲ್ದಳಕ್ಕೆ ಒಪ್ಪಿಸಲಾಯಿತು.

ಇಷ್ಟೇ ಅಲ್ಲದೆ ಝಾಂಸಿರಾಜಮನೆತನಕ್ಕೆ ಇನ್ನೂ ಕೆಲವು ಅಪಮಾನ ಗಳಾದವು. "ಮರಣಕಾಲಕ್ಕೆ ಗಂಗಾಧರರಾಯನ ತಿಜೋರಿಯಲ್ಲಿದ್ದ ಆರು ಲಕ್ಷ ರೂಪಾಯಿಗಳನ್ನು ಅಲ್ಪವಯಿ ದಾಮೋದರನ ಪರವಾಗಿ ಅಮಾನತ ಖಾತೆಗೆ ಕಂಪನಿಯು ಜಮಾಮಾಡಿಕೊಂಡು ಕೊನೆವರೆಗೂ ಲಕ್ಷ್ಮೀಬಾಯಿಗೆ ಕೊಡಲೇ ಇಲ್ಲ. ನೇವಲಕರರ ಕುಲದೇವತೆಯಾದ ಮಹಾಲಕ್ಷ್ಮೀ ದೇವ ಸ್ಥಾನದ ಜಹಾಗೀರ ಹಳ್ಳಿಗಳನ್ನೆಲ್ಲ ಖಾಲಸಾ ಮಾಡಿಬಿಟ್ಟರು! ರಾಣಿಯು ಮೊದಲು ಪೋಟಗಿಹಣವನ್ನು ನಿರಾಕರಿಸಿದ್ದಳು. ನಂತರ ನಿರುಪಾಯಳಾಗಿ ಸ್ವೀಕರಿಸಲು ಸರಕಾರವು ದಿವಂಗತ ಗಂಗಾಧರರಾಯನ ಯಾವದೊ ಹಿಂದಿನ ಸಾಲದ ಕಂತುಗಳನ್ನು ಮುರಿದು ಬಾಕಿ ಹಣವನ್ನು ಲಕ್ಷ್ಮೀಬಾಯಿಗೆ ಮುಟ್ಟಿ ಸಹತ್ತಿತು! ಲಕ್ಷ್ಮೀಬಾಯಿಯು ಪ್ರತಿಬಂಧ ಮಾಡಿದ್ದ ಗೋಹತ್ಯೆಯನ್ನು ಕಂಪನಿ ಸರಕಾರವು ರಾಜ್ಯದಲ್ಲಿ ಪುನಃ ಪ್ರಾರಂಭಮಾಡಿತು. ದಾಮೋದರನ ಉಪನಯನದ ಸಲುವಾಗಿ ಲಕ್ಷ್ಮೀಬಾಯಿಯು ಒಂದು ಲಕ್ಷ ರೂಪಾಯಿಗಳನ್ನು

ಕೇಳಲು ರಾಣಿಯಿಂದ ನಾಲ್ಕು ಜಾಮೀನುಗಳನ್ನು ಕೇಳಲಾಯಿತು!" (ಸೇನ: ೨೬೯).

### ರಣಜಿತಸಿಂಗ

ಪಂಜಾಬದ ಸಿಂಹನೆಂದು ಪ್ರಸಿದ್ಧಿಪಡೆದ ರಣಜಿತಸಿಂಗನು ಅತ್ಯಂತ ಬಲಾಢ್ಯನಿದ್ದು ಪಂಜಾಬ ಮತ್ತು ವಾಯವ್ಯ ಪ್ರಾಂತಗಳಲ್ಲಿ ಇಂಗ್ಲೀಷರನ್ನೂ ಮುಸಲ್ಮಾನರನ್ನೂ ತಲೆ ಎತ್ತಗೊಟ್ಟಿರಲಿಲ್ಲ. ಆದರೂ ಮುಸಲ್ಮಾನರ ಬಗ್ಗೆ ಅವನಲ್ಲಿರುವ ವೈರದ ಮೂಲಕ ಕಂಪನಿಸರಕಾರದ ಕೂಡ ಕೊನೆಯವರೆಗೂ ಸ್ನೇಹದಿಂದಲೇ ಇದ್ದನು. ರಣಜಿತಸಿಂಗನು ೨೭-೬-೧೮೩೯ನೆಯ ದಿನ ಮರಣಹೊಂದಿದಾಗ ಅವನ ಪತ್ನಿ ಮಹಾರಾಣಿ ಜಿಂದಾ ಹಾಗೂ ಚಿಕ್ಕ ಅಲ್ಪವಯಿ ಪುತ್ರನಾದ ದಿಲೀಪಸಿಂಗ ಇವರಿಗೆ ಇಂಗ್ಲೀಷರ ಮೇಲೆ ವಿಶೇಷ ವಿಶ್ವಾಸವಿದ್ದಿತು.

ರಣಜಿತಸಿಂಗನು ಮರಣಹೊಂದಿದೊಡನೆ ಅವನ ಸರದಾರರಲ್ಲಿ ಒಳಜಗಳಗಳು ಪ್ರಾರಂಭವಾದವು. ಈ ಒಳಜಗಳಗಳ ಪೂರಾ ಲಾಭವು ಇಂಗ್ಲೀಷರಿಗೆ ಸಿಕ್ಕಿತು. ದಿಲೀಪಸಿಂಗನ ಪಾಲಕರನ್ನಾಗಿ ಇಂಗ್ಲೀಷರು ತಮ್ಮನ್ನು ತಾವೇ ನಿಯಮಿಸಿಕೊಂಡರು. ತೇಜಸಿಂಗ ಹಾಗೂ ಲಾಲಸಿಂಗ ಎಂಬ ಈರ್ವರು ಸೀಖ ಸರದಾರರನ್ನು ಕೂಡಿ ಇಂಗ್ಲೀಷರು ಉಳಿದವರ ಮೇಲೆ ಯುದ್ಧಮಾಡಿ ಸೋಲಿಸಿದರು. ಈ ಯುದ್ಧದ ಎಲ್ಲ ಖರ್ಚನ್ನೂ ದಿಲೀಪಸಿಂಗನಿಗೆ ಕೊಡ ಹಚ್ಚಿದರು. ಸತಲಜ ಹಾಗೂ ರಾವಿ ನದಿಗಳ ನಡುವಿನ ಪ್ರದೇಶನ್ನು ಕಂಪನಿ ರಾಜ್ಯಕ್ಕೆ ಜೋಡಿಸಲಾಯಿತು. ರಣಜಿತಸಿಂಗನು ೧೨ ಕೋಟಿ ರೂಪಾಯಿಗಳನ್ನು ಬಿಟ್ಟುಹೋಗಿದ್ದನು. ಮುಂದೆ ನಡೆದ ಒಳಜಗಳಗಳ ಮೂಲಕ ಕೆಲಕಾಲದ ನಂತರ ೫೦ ಲಕ್ಷ ರೂಪಾಯಿಗಳು ಮಾತ್ರ ಅವನ ಖಜಾನೆಯಲ್ಲಿ ಉಳಿದಿದ್ದವು! ಯುದ್ಧದ ಖರ್ಚೆಂದು ಇಂಗ್ಲೀಷರು ದಿಲೀಪಸಿಂಗನ ಖಜಾನೆಯಿಂದ ಈ ಐವತ್ತು ಲಕ್ಷ ರೂಪಾಯಿಗಳನ್ನೂ ಎತ್ತಿಹಾಕಿದರು. ಒಟ್ಟು ಒಂದೂವರೆ ಕೋಟಿ ರೂಪಾಯಿಗಳ ಯುದ್ಧದ ಖರ್ಚನ್ನು ದಿಲೀಪಸಿಂಗನ ಮೇಲೆ ಹೇರಲಾಗಿತ್ತು. ಉಳಿದ ಒಂದು ಕೋಟಿ ರೂಪಾಯಿಗಳ ಸಲುವಾಗಿ ಕಾಶ್ಮೀರವನ್ನು ಅಲ್ಲಿಯ ಗುಲಾಬಸಿಂಗ ಎಂಬ ಹಿಂದು ಸರದಾರನಿಗೆ ಮಾರಿಬಿಡಲಾಯಿತು. ಕಾಶ್ಮೀರವು ಅದುವರೆಗೆ ರಣಜಿತಸಿಂಗನ ರಾಜ್ಯದಲ್ಲಿದ್ದು

ಗುಲಾಬಸಿಂಗನು ಅವನ ಸರದಾರನಾಗಿದ್ದನು.

ಹೀಗೆ ದಿಲೀಪನ ಬಾಲ್ಯದಲ್ಲಿಯೇ ಸೀಖ ರಾಜ್ಯವು ಒಡೆದುಹೋಯಿತು. ಮುಂದೆ ದಿಲೀಪಸಿಂಗನ ತಾಯಿ ರಾಣಿ ಜಿಂದಾ ಮತ್ತು ಅವನ ಪಾಲಕರಾದ ರೆಸಿಡೆಂಟಸಾಹೇಬರಿಗೆ ಕೂಡಿ ನಡೆಯದಾಯಿತು. ಕಾಶ್ಮೀರವನ್ನು ಕಂಪನಿ ಸರಕಾರದ ಲಾಭಕ್ಕಾಗಿ ಮಾರಿದ್ದು ರಾಣಿಗೆ ತುಂಬಾ ವ್ಯಸನವಾಗಿತ್ತು. ತಮ್ಮ ಬಗ್ಗೆ ಹೀಗೆ ರಾಣೀಸಾಹೇಬಳು ಅಸಂತುಷ್ಟಳಾದದ್ದು ರೆಸಿಡೆಂಟ ಸರ್ ಫ್ರೆಡರಿಕ್ ಕೇರಿ ಇವನಿಗೆ ತಿಳಿಯದಿರಲಿಲ್ಲ. ಸಾವಕಾಶವಾಗಿ ಜಿಂದಾರಾಣಿಯ ವಿರುದ್ಧ ಅವನು ಪುರಾವೆಗಳ ಸಂಗ್ರಹ ಮಾಡಹತ್ತಿದನು. ರಾಣಿ ಜಿಂದಾ ಇವಳು ಸೀಖ ಸಿಂಹಾಸನದ ವಿರುದ್ಧ ಒಳಸಂಚು ನಡೆಸಿರುವಳೆಂಬ ಆರೋಪ ವನ್ನು ಅವಳ ಮೇಲೆ ಸಿದ್ಧಪಡಿಸಿ ರೀತಿಯಂತೆ ಒಂದು ಗುಪ್ತ ವಿಚಾರಣೆಯ ನಾಟಕವನ್ನು ಮಾಡಲಾಯಿತು. ರಾಣಿ ಜಿಂದಾ ಕಂಪನಿಸರಕಾರದ ಕೈದಿ ಯಾದಳು! ಮಗನ ಕಡೆಯಿಂದಲೆ ಅವಳನ್ನು ಕೈದು ಮಾಡುವ ಹುಕುಮನ್ನು ಸಿದ್ಧಪಡಿಸಿ ರೆಸಿಡೆಂಟನು ರಾಣಿ ಜಿಂದಾಳ ಗಾಯಕ್ಕೆ ಕೆಂಡವನ್ನಿಟ್ಟನು.

ರಣಜಿತಸಿಂಗನ ವೀರಪತ್ನಿಯು ಕೈದಿಸಿಂದ ಪಂಜಾಬವೆಲ್ಲ ಸಂತಪ್ತ ವಾಯಿತು. ಸೈನ್ಯದಲ್ಲಿ ಸಹ ಅಸಂತೋಷವು ಹರಡಿತು. ಆದರೆ ಕಂಪನಿ ಸರಕಾರವು ಪಂಜಾಬ ಸಿಂಹಾಸನದ ಪರವಾಗಿ ಕಾರಭಾರವನ್ನು ನಡೆಸುತ್ತಿದ್ದ ಮೂಲಕ ಸೀಖರಿಗೆ ಬಂಡು ಹೂಡುವದು ಶಕ್ಯವಾಗಲಿಲ್ಲ. ಜಿಂದಾ ರಾಣಿಯ ಬಗ್ಗೆ ಪಂಜಾಬದಲ್ಲಿ ಅತ್ಯಂತ ಪೂಜ್ಯಭಾವನೆಯಿದ್ದ ಮೂಲಕ ಅವಳನ್ನು ಪಂಜಾಬದಿಂದ ಬನಾರಸಕ್ಕೆ ಸ್ಥಳಾಂತರಿಸಲಾಯಿತು. ಇತ್ತ ದೀಲೀಪನನ್ನೂ ಇಂಗ್ಲೀಷರು ಚೆನ್ನಾಗಿ ನಡೆಸಿಕೊಳ್ಳಲಿಲ್ಲ. ಸುಭೇದಾರ ಛತ್ರಸಿಂಹ ಎಂಬ ಸ್ವಾಮಿನಿಷ್ಠ ಸರದಾರನ ಮಗಳನ್ನು ದಿಲೀಪಸಿಂಗನಿಗೆ ಕೊಟ್ಟು ಮದುವೆ ಮಾಡಬೇಕೆಂಬ ಸೂಚನೆಗೆ ಇಂಗ್ಲೀಷರು ಕಲ್ಲುಹಾಕಿದರು. ಅರಸು ಮತ್ತು ಸರದಾರರಲ್ಲಿ ಐಕ್ಯವಾದರೆ ತಮಗೆ ಗಂಡಾಂತರ, ಎಂಬುದೇ ಅವರ ದುರುದ್ದೇಶ ವಾಗಿದ್ದಿತು.

ಇದರಿಂದ ಸರದಾರ ಛತ್ರಸಿಂಹನೂ ಇಂಗ್ಲೀಷರ ಮೇಲೆ ಸಿಟ್ಟಾದನು. ಛತ್ರಸಿಂಹನ ಮೇಲೆ ಇಂಗ್ಲೀಷರ ವಕ್ರದೃಷ್ಟಿಯೂ ಬಿದ್ದಿತು. ಕ್ಯಾಪ್ಟನ್ ಆ್ಯಬಟ್ ಎಂಬ ಸೇನಾಪತಿಯು ಆಗ ರೆಸಿಡೆಂಟನ ನೆರವಿಗೆಂದು ಪಂಜಾ[illegible]

ಅವನು ಛತ್ರಸಿಂಹನ ಅವಮಾನಮಾಡಲು ಉದ್ಯುಕ್ತನಾದ[illegible]

ಒಮ್ಮೆ ಛತ್ರಸಿಂಹನು ತನ್ನ ಸೈನ್ಯದೊಡನೆ ಮುಲ್ತಾನಕ್ಕೆ ಹೋಗುವಾಗ ಹಜಾರಾ ಎಂಬಲ್ಲಿ ಆ್ಯಬಟ್‌ನು ಆ ಸೈನ್ಯಕ್ಕೆ ಅಡ್ಡನಿಲ್ಲಲು ಕೆಲವು ಮುಸಲ್ಮಾನ ನಾಗರಿಕರಿಗೆ ಪ್ರೋತ್ಸಾಹನ ಕೊಟ್ಟನು. ಛತ್ರಸಿಂಹನ ಸೈನ್ಯಕ್ಕೆ ಕಾನೋರಾ ಎಂಬ ಅಮೇರಿಕನ್ನನು ಅಧಿಪತಿಯಾಗಿದ್ದನು. ಮುಸಲ್ಮಾನರು ಅಡ್ಡಬರಲು ಅವರನ್ನು ಚದುರಿಸಲು ಛತ್ರಸಿಂಹನು ಮಾಡಿದ ಆಜ್ಞೆಯನ್ನು ಕಾನೋರನು ಪಾಲಿಸಲಿಲ್ಲ. ಆದರೆ ಸೀಖ ಅಧಿಕಾರಿಗಳು ಛತ್ರಸಿಂಹನ ಆಜ್ಞಾ ಪಾಲನೆ ಮಾಡಲು ಮುಂದೆ ಬಂದರು. ಕೂಡಲೆ ಕಾನೋರನು ಓರ್ವ ಸೀಖನನ್ನು ಖಡ್ಗದಿಂದಲೂ ಮತ್ತು ಈರ್ವರನ್ನು ಪಿಸ್ತೂಲಿನಿಂದಲೂ ಕೊಂದುಬಿಟ್ಟನು ! ಕೆರಳಿದ ಸೀಖರು ಕೂಡಲೆ ತಮ್ಮ ಅಮೇರಿಕನ್ ಸೇನಾಪತಿಯನ್ನು ತುಂಡುಮಾಡಿಬಿಟ್ಟರು !! ಈ ಎಲ್ಲ ದುರ್ಘಟನೆಯ ಆರೋಪವನ್ನು ಛತ್ರಸಿಂಹನ ಮೇಲೆಯೆ ಹೊರಿಸಲಾಯಿತು. ಅವನ ಸುಭೇದಾರಿಯು ಜಪ್ತಾಯಿತು. ಛತ್ರಸಿಂಹನ ಮಗನಾದ ಶೇರಸಿಂಹನೂ ತಂದೆಗಾದ ಅವಮಾನದಿಂದ ಬಹಳ ಕುಪಿತನಾಗಿ ಇಂಗ್ಲೀಷರ ವಿರುದ್ಧ ಯುದ್ಧಸಾರಿದನು. ಆದರೆ ಇಂಗ್ಲೀಷರು ದಿಲೀಪಸಿಂಗನ ಕಾರಭಾರಿಗಳಾಗಿದ್ದ ಮೂಲಕ ಕೆಲವು ರಾಜನಿಷ್ಠ ಸರದಾರರು ಇಂಗ್ಲೀಷರನ್ನು ಕೂಡಿಕೊಂಡರು. ಹೀಗೆ ಸೀಖ ಸರದಾರರಲ್ಲಿ ಇಬ್ಬಣಗಳಾದವು. ೧೮೪೯ ಜನೆವರಿಯಲ್ಲಿ ಚಿಲಿಯನವಾಲಾದಲ್ಲಿ ಸೀಖರು ಅತಿಶಯ ಶೌರ್ಯದಿಂದ ಕಾದಿದ ಮೂಲಕ ಯುದ್ಧವು ನಿರ್ಣಾಯಕವಾಗಲಿಲ್ಲ. ಮುಂದೆ ಫೆಬ್ರುವರಿ ತಿಂಗಳಲ್ಲಿ ಇಂಗ್ಲೀಷರಿಂದ ಸೀಖರ ಸಂಪೂರ್ಣ ಪರಾಭವವಾಯಿತು.

ಅನ್ಯಾಯವು ಇಲ್ಲಿಗೆ ಮುಗಿಯಲಿಲ್ಲ. ಸೀಖ ರಾಜ್ಯವನ್ನು ನುಂಗಲು ಇದೇ ಸಂಧಿಯೆಂದು ಡಾಲಹೌಸಿಯು ಹೊಂಚುಹಾಕಿದನು. ೧೮೪೯ ಮಾರ್ಚ ೨೯ಕ್ಕೆ ಸ್ವತಂತ್ರ ಸೀಖರ ಕೊನೆಯ ದರ್ಬಾರವು ಲಾಹೋರಿನಲ್ಲಿ ಸೇರಿತು. ರಣಜಿತಸಿಂಗನ ರಾಜ್ಯವನ್ನು ಖಾಲಸಾ ಮಾಡಲಾಗಿದೆ ಎಂಬ ಘೋಷಣೆಯನ್ನು ದರಬಾರದಲ್ಲಿಯೇ ಡಾಲಹೌಸಿ ಪ್ರಕಟಮಾಡಿಬಿಟ್ಟ ! ಹದಿನಾಲ್ಕು ವರ್ಷದ ಬಾಲಕನಾದ ದಿಲೀಪಸಿಂಗನನ್ನು ಸಿಂಹಾಸನದಿಂದ ಅವನ ಪಾಲಕರೇ ಕೆಳಗಿಳಿಸಿದರು ! ರಣಜಿತಸಿಂಗನ ಸರ್ವ ಸಂಪತ್ತು, ಅವನ ಪ್ರಸಿದ್ಧ ಸಿಂಹಾಸನ, ಆತನ ಕಿರೀಟದಲ್ಲಿಯ ಜಗತ್ಪ್ರಸಿದ್ಧ ಕೊಹಿನೂರ ವಜ್ರ ಎಲ್ಲವೂ ಇಂಗ್ಲೀಷರ ವಶವಾದವು.

"ನನ್ನ ಮರಣದನಂತರ ನೀವು ಜಾಗರೂಕರಾಗಿರದಿದ್ದ ಪಕ್ಷದಲ್ಲಿ ಇಂಗ್ಲೀಷರು ಪಂಜಾಬವನ್ನು ಆಕ್ರಮಿಸುತ್ತಾರೆ" ಎಂದು ರಣಜಿತಸಿಂಗನು ಒಮ್ಮೆ ತನ್ನ ಸರದಾರರನ್ನು ಎಚ್ಚರಿಸಿದ್ದನಂತೆ. ಅವನ ಭವಿಷ್ಯವಾಣಿ ಕೊನೆಗೆ ಘಟಿಸಿಯೇ ಬಿಟ್ಟಿತು.

ಕುಮಾರ ದಿಲೀಪಸಿಂಗನನ್ನು ಪಂಜಾಬದ ಹೊರಗೆ ಫತ್ತೆಗಢದಲ್ಲಿ ಇಡಲಾಯಿತು. ಅವನ ಖಾಸಗಿ ಆಸ್ತಿ ಆಭರಣಗಳೆಲ್ಲ ಜಪ್ತಮಾಡಿ ಜಾಹೀರ ಲಿಲಾವು ಮಾಡಲಾಯಿತು ! ಲಾಹೋರಿನಲ್ಲಿಯ ನಡೆದ ಈ ಲಿಲಾವಿನಲ್ಲಿ ೨॥ ಲಕ್ಷ ರೂಪಾಯಿಗಳು ದೊರೆತವು. ದಿಲೀಪನಿಗೆ ಕೇವಲ ೬೦ ಸಾವಿರ ರೂಪಾಯಿ ಕೊಡಲಾಯಿತು. ದಿಲೀಪನು ಅವನ್ನು ಸ್ವೀಕಾರ ಮಾಡಲಿಲ್ಲ. ಅವನಿಗೆ ಗೊತ್ತು ಪಡಿಸಿದ ೪ ಲಕ್ಷ ರೂಪಾಯಿಗಳ ವರ್ಷಾಶನವನ್ನು ಸಹ ಅವನಿಗೆ ಕಂಪನಿಯು ಪೂರಾ ಕೊಡುತ್ತಿರಲಿಲ್ಲ.

೧೮೫೩ರಲ್ಲಿ ದಿಲೀಪನು ಇನ್ನೂ ಅಜ್ಞಾನದಲ್ಲಿರುವಾಗ ಅವನಿಗೆ ಕ್ರಿಸ್ತ ಧರ್ಮದೀಕ್ಷೆಯನ್ನು ಕೊಟ್ಟರು. ೧೮೫೪ರಲ್ಲಿ ಅವನ ಮನಸ್ಸಿಲ್ಲದಿದ್ದರೂ ಅವನನ್ನು ಇಂಗ್ಲಂಡಿಗೆ ಕಳಿಸಲಾಯಿತು. ೧೮೫೭ರಲ್ಲಿ ದಿಲೀಪನಿಗೆ ಹಿಂದು ಸ್ಥಾನಕ್ಕೆ ಮರಳಿಬರಲು ಅಪ್ಪಣೆ ದೊರೆಯಲಿಲ್ಲ. ಅದ್ದರಿಂದ ಜಿಂದಾ ರಾಣಿಯು ತಾನೇ ಇಂಗ್ಲಂಡಿಗೆ ಹೋಗಿ ಮಗನ ಮುಖ ನೋಡಿ ಅಲ್ಲಿಯೇ ಪ್ರಾಣ ಬಿಟ್ಟಳು. ಮುಂದೆ ದಿಲೀಪನ ವಿವಾಹವನ್ನು ಓರ್ವ ಆಂಗ್ಲ ಯುವತಿ ಯೊಡನೆ ಮಾಡಲಾಯಿತು. ಮುಂದೊಮ್ಮೆ ದಿಲೀಪಸಿಂಗನು ಮಾತೃಭೂಮಿ ಯನ್ನು ನೋಡುವ ಉತ್ಸುಕತೆಯಿಂದ ಸ್ವದೇಶಕ್ಕೆ ಹೊರಟನು. ಆದರೆ ಭರತ ಭೂಮಿಯ ಮೇಲೆ ಕಾಲಿಡುವದು ಅವನ ಹಣೆಯಲ್ಲಿ ಬರೆದಿರಲಿಲ್ಲ. ಏಡನ್‌ದಿಂದ ಒತ್ತಾಯದಿಂದ ಅವನನ್ನು ಮರಳಿ ಇಂಗ್ಲಂಡಿಗೆ ಕರೆದೊಯ್ಯಲಾಯಿತು !![2] ಮುಂದೆ ವೃದ್ಧಾಪ್ಯದಲ್ಲಿ ರಣಜಿತಸಿಂಗನ ಈ ದುರ್ದೈವಿ ಪುತ್ರನು ಸೀಖ ಧರ್ಮ ವನ್ನು ಪುನಃ ಸ್ವೀಕಾರಮಾಡಿಯೇ ಪೇರಿ ಎಂಬಲ್ಲಿ ಮರಣಹೊಂದಿದನು.

2. ಭಾರತಕ್ಕೆ ಮರಳಿಹೋಗುವ ಆಶೆಯಿಲ್ಲವೆಂದು ಪೂರಾ ಮನಗಂಡನಂತರ ದಿಲೀಪನು ತನ್ನ ದೇಶಬಾಂಧವರಿಗೆ ಬರೆದ ಒಂದು ಪತ್ರವು ಅತ್ಯಂತ ಹೃದಯ ದ್ರಾವಕವಾಗಿದೆ. "ನಾನು ನಿಮಗೆ ಮುಖ ಹೇಗೆ ತೋರಿಸಲಿ? ............... 'ವಾಹಗುರುವೇ' ಎಲ್ಲರ ರಕ್ಷಕ..........ಇನ್ನೊಮ್ಮೆ ನನ್ನ ಜನ್ಮಭೂಮಿ ನೋಡಿ ಎಮೆಯಾದರೂ ಆತಿದರಿದ.ನಂತೆ ಅಲಿ ಆಯುಷ. ಕಳೆಯಬೇಕೆಂದು ನನ ಜೀನ

## ಔಧದ ವಜೀದ ಅಲಿ

ಇನ್ನು ಔಧದಲ್ಲಿ ಎಂಥ ಅನ್ಯಾಯವಾಗಿ ರಾಜರ ಮತ್ತು ಪ್ರಜರ ಮನಸ್ಸು ನೊಂದಿತೆಂಬುದನ್ನಷ್ಟು ನೋಡುವ. ಡಾಲಹೌಸಿಯು ಅನ್ಯಾಯದಿಂದ ನುಂಗಿದ ರಾಜ್ಯಗಳಲ್ಲಿ ಔಧವೇ ಕೊನೆಯದು ಮತ್ತು ದೊಡ್ಡದು; ಔಧವು ಅತ್ಯಂತ ಫಲವತ್ತಾದ ರಾಜ್ಯ. ೧೮೫೬ರ ಪ್ರಾರಂಭದಲ್ಲಿ ನವಾಬ ವಜೀದ ಅಲಿಯನ್ನು ಪದಚ್ಯುತಗೊಳಿಸಿ ಔಧವನ್ನು ಬ್ರಿಟಿಶ್ ಪ್ರಾಂತವನ್ನಾಗಿ ಮಾಡಲಾಯಿತು. ಈ ಅನ್ಯಾಯಕ್ಕೆ ಔಧದಲ್ಲಿ ಭಯಂಕರ ಪ್ರತಿಕ್ರಿಯೆಯಾಯಿತು. ಸಿಪಾಯಿ ಬಂಡಾಯವು ಸ್ವಲ್ಪಮಟ್ಟಿಗೆ ರಾಷ್ಟ್ರೀಯ ಮತ್ತು ಜನತೆಯ ಸ್ವಾತಂತ್ರ್ಯಯುದ್ಧವಾಗಿ ಮಾರ್ಪಟ್ಟಿದ್ದರೆ ಅದು ಔಧದಲ್ಲಿಯೇ ಎಂದು ಇತ್ತೀಚೆಗಿನ ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.

ಅಯೋಧ್ಯೆಯು ತದ್ಭವ ಹೊಂದಿ ಔಧ ಆಗಿದೆ. ಔರಂಗಜೇಬನ ಮರಣದವರೆಗೆ ಔಧ ಮೊಗಲರ ಒಂದು ಸುಭೆಯಾಗಿತ್ತು. ಗಂಗಾ ಯಮುನಾ ನದಿಗಳ ನಡುವಿನ ಎಲ್ಲ ಪ್ರದೇಶವೂ ಸಾಧಾರಣವಾಗಿ ಈ ಸುಭೆಗೆ ಸೇರಿತ್ತು.

ಔಧದ ನವಾಬರು ಪರ್ಶಿಯದ ವಂಶದವರಿದ್ದು ಮೊಗಲ ದರ್ಬಾರದ ಸರದ್ದಾರರಾಗಿದ್ದರು. ಮೊಗಲರ ಆಳಿಕೆಯು ಇಳಿಮುಖವಾಗಲು ಇವರಿಗೆ ವಜೀರ ಪದವಿಯೂ ಔಧದ ನವಾಬಶಾಹಿಯೂ ಪ್ರಾಪ್ತವಾದವು. ಇವರ ಪೂರ್ವಜನಾದ ಶೂಜಾ ಉದ್ದೌಲಾ ಎಂಬವನು ಮೊಗಲ ಬಾದಶಹನಾದ ಶಹಾ ಆಲಮನೊಡನೆ ಬಿಹಾರ ಸುಭೆಯ ಮೇಲೆ ೧೭೬೪ರಲ್ಲಿ ದಂಡೆತ್ತಿ ಹೋಗಿ

( ಮುಂದೆ ಸಾಗಿದ್ದು )

ಹಂಬಲಿಸುತ್ತದೆ...........ನಿಮ್ಮ ದೃಷ್ಟಿಯಲ್ಲಿ ನಾನು ಅಯೋಗ್ಯನಿದ್ದೇನೆ. ನಮ್ಮ ಪೂರ್ವಜರ ಸನಾತನ ಧರ್ಮವನ್ನು ಬಿಟ್ಟು ಕ್ರಿಶ್ಚಿಯನನಾಗಿದ್ದೇನೆ. ನನ್ನನ್ನು ಕ್ಷಮಿಸಿರಿ. ಪಶ್ಚಾತ್ತಾಪದಿಂದ ಬೆಂದು ಈಗ ಪುನಃ ಶೀಖನಾಗಿದ್ದೇನೆ...............ನನ್ನ ಬಂಧುಗಳ ದರ್ಶನಕ್ಕಾಗಿ ಜೀವವು ಚಡಪಡಿಸುತ್ತದೆ. ಪಾಪಿಯಾದ ನನಗೆ ಯದಾಕದಾಚಿತ್ ಮಾತೃಭೂಮಿಯ ದರ್ಶನವಾಗುವಂತಿಲ್ಲವೆಂದು ತೋರುತ್ತದೆ. ಇಂಗ್ಲೀಷರ ರಾಜನೀತಿಯಲ್ಲಿಟ್ಟ ವಿಶ್ವಾಸದ ಸಲುವಾಗಿ ನನಗೆ ಪೂರ್ಣ ಫಲ ದೊರೆತಿತು.

ನಿಮ್ಮ ರಕ್ತಮಾಂಸಗಳಿಂದಲೆ ಜನ್ಮತಾಳಿದ
ದಿಲೀಪಸಿಂಹ"

ಪತ್ರ ಓದಿ ಯಾರ ಕಣ್ಣಲ್ಲಿ ನೀರೊಡೆಯಲಿಕ್ಕಿಲ್ಲ? ಇಂಗ್ಲೀಷರಿಗೆ ಮಾತ್ರ ಕೊನೆಯವರೆಗೆ ದಯೆ ಬರಲಿಲ್ಲ.

ಕ್ಲೈವನಿಂದ ಬಕ್ಸಾರದಲ್ಲಿ ಸೋತನು. ಬಿಹಾರ-ಬಂಗಾಲ—ಓಡಿಸಾಗಳ ದಿವಾಣಿ ಹಕ್ಕನ್ನು ಮೊಗಲ ಬಾಹಶಹನು ಈಸ್ಟ ಇಂಡಿಯಾ ಕಂಪನಿಗೆ ಕೊಡಬೇಕೆಂದೂ ಶೂಜಾ ಉದ್ದೌಲನು ಇಂಗ್ಲೀಷರ ಹೊರತು ಯಾವದೇ ಪರರಾಷ್ಟ್ರದ ಕೂಡ ರಾಜಕೀಯ ವ್ಯವಹಾರವನ್ನು ಮಾಡತಕ್ಕದ್ದಲ್ಲವೆಂದೂ ಒಪ್ಪಂದವಾಯಿತು. ಅಂದಿನಿಂದ ಔಧ ನವಾಬರ ಸ್ವಾತಂತ್ರ್ಯವು ಅಳಿಯಿತು. ಮುಂದೆ ಔಧದ ಖರ್ಚಿನಿಂದ ಬ್ರಿಟಿಶ್ ಸೈನ್ಯವನ್ನಿಡುವ ಪದ್ಧತಿಯು ಸುರುವಾಯಿತು. ಶೂಜಾ ಉದ್ದೌಲನ ಇಬ್ಬರು ಮೊಮ್ಮಕ್ಕಳಲ್ಲಿ ಗಾದಿಯ ಸಲುವಾಗಿ ತಂಟೆಯಾಗಲು ಇಂಗ್ಲೀಷರು ಒಬ್ಬನ ಬೆನ್ನು ಕಟ್ಟಿ ಮತ್ತೆ ತಮ್ಮ ಸೈನ್ಯವನ್ನು ಹೆಚ್ಚಿಸಿದರು. ಮುಂದೆ ನಾಲ್ಕೇ ವರ್ಷದಲ್ಲಿ ಅವರ ಸಹಾಯದಿಂದ ನವಾಬನಾಗಿದ್ದ ಸಾದತ ಅಲಿಯ ಕಡೆಯಿಂದ ೧,೩೫,೨೫,೦೦೦ ರೂಪಾಯಿ ಉತ್ಪನ್ನವಿದ್ದ ಪ್ರದೇಶವನ್ನು ಕಂಪನಿಗೆ ಕೊಟ್ಟು ಕಂಪನಿಯ ಸಲಹೆಯ ಮೇರೆಗೆ ರಾಜ್ಯವಾಳಲು ಒಪ್ಪಿಕೊಂಡನು.

ಮುಂದೆ ೧೮೧೪ರಲ್ಲಿ ಸಾದತ ಅಲಿಯು ಸತ್ತ ಮೇಲೆ ೧೮೪೭ರ ವರೆಗೆ ಗಾದಿಗೆ ಬಂದ ಮೂರು ನಾಲ್ಕು ನವಾಬರು ಕಂಪನಿಸರಕಾರದ ಸ್ನೇಹವನ್ನು ತುಂಬಾ ಕಾಯ್ದುಕೊಂಡು ಬಂದರು. ೧೮೪೭ರಲ್ಲಿ ವಜೀದ ಅಲಿ ಶಹಾ ಔಧದ ನವಾಬನಾಗಿ ಗಾದಿಗೆ ಬಂದನು. ಅತ್ತ ಡಾಲಹೌಸಿಯೂ ಹಿಂದುಸ್ತಾನದ ಗವರ್ನರ ಜನರಲ್ಲನಾಗಿ ಬಂದಿದ್ದನು.

ಕಂಪನಿಯ ಕಾರಭಾರದಿಂದ ಬೇಸತ್ತ ವಜಿದ ಅಲಿಗೆ ಆಡಳಿತದಲ್ಲಿ ಆಸ್ಥೆಯೇ ಇರಲಿಲ್ಲ. ಆಡಳಿತದಲ್ಲಿ ಅಧಃಪತನವು ಸುರುವಾಗಿತ್ತು. ಕಂಪನಿ ಸರಕಾರಕ್ಕೂ ಅದೇ ಬೇಕಾಗಿದ್ದಿತು. ೧೮೫೪ರಲ್ಲಿ ಸರ್ ಜೇಮ್ಸ ಔಟ್ರಾಮನು ಔಧದ ರೆಸಿಡೆಂಟನಾಗಿ ಬಂದನು. ಆಗ ಪರಿಸ್ಥಿತಿಯು ತುಂಬ ವಿವಂಚನಾತ್ಮಕವಾಗಿತ್ತು. ವಜೀದ ಅಲಿಗೆ ಹೊರಗಿನ ಜಗತ್ತಿನ ಕಲ್ಪನೆಯೇ ಇರಲಿಲ್ಲ. ಅಂತಃಪುರದಿಂದ ಅವನು ಹೊರಗೆ ಬರುತ್ತಿರಲಿಲ್ಲ.

ಔಧದ ಅರಾಜಕ ಪರಿಸ್ಥಿತಿಯು ಡಾಲಹೌಸಿಗೆ ಒಂದು ಒಳ್ಳೆ ಸಂಧಿಯನ್ನು ಒದಗಿಸಿಕೊಟ್ಟಿತು. ಡೈರೆಕ್ಟರ್ ಮಂಡಳ ಮತ್ತು ಬ್ರಿಟಿಶ್ ಸರಕಾರದಿಂದ ಅಪ್ಪಣೆಯನ್ನು ತರಿಸಿಕೊಂಡು ಔಧದ ಸೇರ್ಪಡೆ ಮಾಡುವ ಕಾಗದವನ್ನು ಜನೆವರಿ ೧೮೫೬ರಲ್ಲಿ ತಯಾರಿಸಿದನು. ಫೆಬ್ರುವರಿಯಲ್ಲಿ ಒಂದು ದಿನ ಔಟ್ರಾಮನು ಕಂಪನಿಸರಕಾರದ ನಿರ್ಣಯವನ್ನು ವಜಿದ ಅಲಿಗೆ ತಿಳಿಸಿ ಹೊಸ

ಒಪ್ಪಂದಕ್ಕೆ ಸಹಿಮಾಡಬೇಕೆಂದು ಕೇಳಿಕೊಂಡನು. ವಜಿದ ಅಲಿ ಒಪ್ಪಲಿಲ್ಲ. ಭರತಿ ದರ್ಬಾರದಲ್ಲಿ ತನ್ನ ಮುಂಡಾಸವನ್ನು ರೆಸಿಡೆಂಟ ಸಾಹೇಬನ ಕೈಯ ಲ್ಲಿಟ್ಟು, "ನಮ್ಮ ಹಿರಿಯರು ಕಂಪನಿಗೆ ಎಷ್ಟು ಸಹಾಯ ಮಾಡಿದ್ದಾರೆಂಬುದು ನಿಮಗೆ ಗೊತ್ತು. ನನ್ನನ್ನು ಪದಚ್ಯುತ ಮಾಡಬೇಡಿರೆಂದು ನೀವೆ ಗವರ್ನರ ಜನರಲ್ಲರಿಗೆ ವಿನಂತಿ ಮಾಡಿಕೊಳ್ಳಿ." ಎಂದು ಹೇಳಿ ಅವನು ಒಪ್ಪಂದಕ್ಕೆ ಸಹಿ ಹಾಕಲೆ ಇಲ್ಲ. ಪ್ರಕರಣವು ಮತ್ತೊಮ್ಮೆ ಕಲಕತ್ತೆಗೆ ಹೋಗಿಬಂದರೂ ಉಪ ಯೋಗವಾಗಲಿಲ್ಲ. ಔಧವು ಬ್ರಿಟಿಶ್‌ಪ್ರಾಂತವಾಗಿಬಿಟ್ಟಿತು.

ಕಂಪನಿಯು ಕೊಡಬಂದ ಹನ್ನೆರಡು ಲಕ್ಷ ಪೆನ್‌ಶನವನ್ನೂ ಮತ್ತು ಒಪ್ಪಂದ ವನ್ನೂ ವಜೀದ ಅಲಿ ತಿರಸ್ಕರಿಸಿದ್ದರಿಂದ ಕಲಕತ್ತೆಯಲ್ಲಿ ಅವನನ್ನು ಸ್ಥಾನಬದ್ಧತೆ ಯಲ್ಲಿ ಇಡಲಾಯಿತು. ವಜೀದ ಅಲಿಯು ಬ್ರಿಟಿಶರಿಗೆ ಬೇಸತ್ತು ವಿಲಾಸದಲ್ಲಿ ತನ್ನ ಚಿಂತೆಗಳನ್ನು ಮರೆಯುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ ಔಧದಿಂದ ಅವನು ಹೊರಡುವಾಗ ಜನರು ತುಂಬಾ ಮರುಗಿದರು. ಇಂಗ್ಲೀಷ ಪರಮಮಿತ್ರ ನಾದ ವಜೀದ ಅಲಿಯ ಗತಿಯೇ ಹೀಗಾಯಿತೆಂದ ಮೇಲೆ ನಮ್ಮಂಥವರ ಪಾಡೇನು ಎಂದು ಸಿಪಾಯಿದಳಗಳಲ್ಲಿ ಹಾಹಾಕಾರವಾಯಿತು.

ಕಂಪನಿಸರಕಾರವನ್ನು ಜನರು ಸ್ವಾಗತಿಸಲಿಲ್ಲ. ಔಧದ ಸರದಾರ, ಜಮೀನದಾರ ಮೊದಲಾದವರು ತಮ್ಮ ಮೊದಲಿನ ಉಚ್ಚ ಹುದ್ದೆಗಳಿಗೆ ಏರು ವದೇ ಅಶಕ್ಯವಾಗಿ ಹೋಯಿತು. ೬೦,೦೦೦ ಔಧ ಸೈನಿಕರು ನಿರುದ್ಯೋಗಿ ಗಳಾದರು. ದರ್ಬಾರದ ಅಸಂಖ್ಯ ಕಸಬುದಾರರೂ, ಕಲಾಕಾರರೂ ತಮ್ಮ ಆಶ್ರಯವನ್ನು ಕಳೆದುಕೊಂಡರು. ಸರಕಾರದ ಉತ್ಪನ್ನವನ್ನು ಹೆಚ್ಚಿಸುವ ಅವಸರದಲ್ಲಿ ಜನರ ಮೇಲೆ ಅನೇಕ ಅಪರಿಚಿತ ಕರಗಳನ್ನು ಹೇರಲಾಯಿತು.

ಕಂಪನಿಯ ಕಪಿಮುಷ್ಟಿಯಲ್ಲಿ ಸಿಕ್ಕ ಎಲ್ಲ ರಾಜ್ಯಗಳ ಕಥೆಯೂ ಅಷ್ಟೇ ದಯಾರ್ಹವಾಗಿದೆ. ಸಾತಾರಾ, ತಂಜಾವರ, ನಾಗಪೂರ, ಝಾಂಸಿ, ಔಧ, ಪಂಜಾಬ, ಎಲ್ಲಿ ನೋಡಿದರೂ ಈಸ್ಟ ಇಂಡಿಯಾ ಕಂಪನಿಯ ಅಧಿಕಾರಿಗಳು ಅತೀವ ಅನ್ಯಾಯ ಮಾಡಿದ್ದಾರೆ. ನಾಡಿನ ಸಿರಿಯನ್ನು ಲೂಟಿಯ ಹೊರತು ಇವರಿಗೆ ಬೇರೆ ಯಾವ ಹಿತದೃಷ್ಟಿಯಿದ್ದಿಲ್ಲವೆಂಬುದು ಸಿದ್ಧವಾಗುವದು.

ತಮ್ಮ ಧ್ವಜವನ್ನೂರುವಾಗ ಭಾರತಭೂಮಿತಾಯಿಗೆ ಆದ ನೋವಿನ ಪ್ರತಿಫಲವನ್ನೆ ಆಂಗ್ಲರು ಮುಂದೆ ೧೮೫೭ ರಲ್ಲಿ ಉಂಡರು.

# ಆರನೆಯ ಅಧ್ಯಾಯ

## ಬೇಗೆ ಹಚ್ಚಿದ ಹೊಸ ಕಾಡತೂಸು

೧೮೫೭ನೇ ಇಸ್ವಿಯ ಪ್ರಾರಂಭದಲ್ಲಿ ಭಾರತದ ಜನತೆ ಕಂಪನಿ ಸರಕಾರದ ಆಕ್ರಮಣಶೀಲತೆ, ಅನ್ಯಾಯ, ಜುಲುಮೆ, ಶೋಷಣಧೋರಣೆ ಇವೆಲ್ಲವುಗಳಿಗೆ ಬೇಸತ್ತಿತ್ತು. ಅರ್ಧಶತಮಾನದ ವರೆಗೆ ಹಲವು ಅಸಂತುಷ್ಟರು ಶೋಧಿಸುತ್ತಿದ್ದ ಒಂದು ಕಾರಣ ಈಗ ಅವರಿಗೆ ಲಭಿಸಿತು. ಸಿಪಾಯಿದಳಗಳಲ್ಲಿ ಯಾವದೊಂದು ಬಗೆಯ ಗಂಭೀರ ಸ್ವರೂಪದ ಕ್ಷೋಭದ ಜೇಗೆಯನ್ನು ಹಬ್ಬಿಸಿದಲ್ಲಿ ತಮ್ಮ ಕಾರ್ಯವಾಗಬಹುದೆಂದು ನಂಬಿದ ಇವರಿಗೆ ಈಗ ಒಂದು ಅಮೌಲ್ಯವಾದ ಪ್ರಸಂಗವು ಒದಗಿತು. ಆಕಳು ಮತ್ತು ಹಂದಿಯ ನೆಣ ಹಚ್ಚಿದ ಕಾಡತೂಸು ಗಳನ್ನು ಉಪಯೋಗಿಸಬೇಕಾದ ಹೊಸ ಬಗೆಯ ಎನ್‌ಫೀಲ್ಡ ರೈಫಲ (Enfield Rifle) ಎಂಬ ಸುಧಾರಿಸಿದ ಬಂದೂಕನ್ನು ಸರಕಾರವು ಬೇಗನೆ ಅವರ ಕೈಗೆ ಕೊಡಲಿದೆಯೆಂಬ ಸತ್ಯವಾದ ವಾರ್ತೆಯೇ ಮುಂದಿನ ಸ್ಫೋಟಕ್ಕೆ ಒಂದು ಮಹತ್ಕಾರಣವಾಯಿತು.

ಇದರ ಕಥೆಯು ಮನೋರಂಜಕವಿದ್ದಷ್ಟು ಭಯಾನಕವೂ ಆಗಿದೆ. ಹೊಸ ಶಸ್ತ್ರವು ತಮ್ಮ ಅಸ್ತಿತ್ವಕ್ಕೆ ಕಂಟಕಪ್ರಾಯವಾಗುವದೆಂದು ತಿಳಿದಿದ್ದರೆ ಇಂಗ್ಲೀಷ ರಾದರೂ ಅದನ್ನು ಒತ್ತಾಯಪಡಿಸುವ ಗೊಡವೆಗೆ ಹೋಗುತ್ತಿರಲಿಲ್ಲವೇನೋ. ನೂರಾರು ವರ್ಷಗಳ ಕಾರ್ಯಸಂಪರ್ಕವಿದ್ದರೂ ಆಂಗ್ಲರು ಇಲ್ಲಿಯ ಜನ ಸ್ವಭಾವವನ್ನು ಚನ್ನಾಗಿ ತಿಳಿದಿರಲಿಲ್ಲವೆಂಬುದಕ್ಕೆ ಇದೊಂದೇ ಸಾಕ್ಷ್ಯ ಸಾಕು. ಅದುವರೆಗೆ ಸಿಪಾಯಿದಳಗಳಲ್ಲಿ ಬ್ರೌನ್ ಬೆಸ್ (Brown Bess) ಎಂಬ ಹಳೆಯ ಮಾದರಿಯ ಬಂದೂಕನ್ನು ಉಪಯೋಗಿಸಲಾಗುತ್ತಿತ್ತು. ಹೊಸ ಮಾದರಿಯ ರೈಫಲ್ಲು ಹೆಚ್ಚು ಪ್ರಭಾವಿಯಾಗಿದ್ದು ಮೊದಮೊದಲಿಗೆ ಹಿಂದಿ ದಳಗಳಿಗೆ ಅದರಿಂದ ಸಂತೋಷವೇ ಆಗಿತ್ತು. ಆದರೆ ಇವುಗಳ ಕಾಡತೂಸು ಗಳನ್ನು ಉಪಯೋಗಿಸುವ ಮುನ್ನ ನೆಣ ಹಚ್ಚಿದ ಅವುಗಳ ತುದಿಯನ್ನು ಹ ನಿಂದ ಕಡಿಯುವ ವಿಧಾನವು ಬೇಗನೇ ಅವರ ಧರ್ಮಾಭಿಮಾನಕ್ಕೆ ಅಸಹ್ಯವಾ

ತೊಡಗಿತು. ಅಂಥ ಅಸಹ್ಯತೆಯ ಭಾವನೆಯು ಆಗ ಅವರಲ್ಲಿ ಒಡವೂಡಿದುದು ನಮಗೆ ಇಂದಿಗೂ ಸಹಜವೇ ಎನಿಸುತ್ತಿದೆ. ಈ ಭಾವನೆಯ ಇಂಗಿತವನ್ನು ಮತ್ತು ಅದರ ಸ್ಫೋಟಕ ಶಕ್ತಿಯನ್ನು ತಿಳಿದು ಸಿಪಾಯಿಗಳಲ್ಲಿ ಉದ್ದೇಶಪೂರ್ವಕವಾಗಿ ಅಸಂತೋಷವನ್ನು ಹಬ್ಬಿಸಲು ಇದಕ್ಕಿಂತಲೂ ಹೆಚ್ಚಿನ ಸುವರ್ಣ ಸಂಧಿಯು ಸಂಚುಗಾರರಿಗೆ ಲಭಿಸಲಾರದಾಗಿತ್ತು. ಕಂಪನಿ ಸೈನ್ಯಾಧಿಕಾರಿಗಳ ದಬ್ಬಾಳಿಕೆಗೆ ಬೇಸತ್ತು ಸಿಪಾಯಿಗಳು ತಾವಾಗಿಯೇ ಬಂಡಹೂಡಿದರೋ, ಅಥವಾ ಹೊರಗಿನವರು ಈ ಸಂಧಿಯನ್ನು ಸಾಧಿಸಿದರೋ ಎಂಬುದು ನಿಶ್ಚಿತವಾಗಿ ತಿಳಿಯುವಂತಿಲ್ಲ. ಭಾರತೀಯ ರಾಜಕೀಯ ಮತ್ತು ಸೈನಿಕ ವರ್ಗಗಳಲ್ಲಿ ಯಾವ ಬಗೆಯ ವಿಚಾರವಿನಿಮಯಗಳು ನಡೆಯುತ್ತಿದ್ದವು ಎಂಬ ಬಗ್ಗೆ ಯಾವ ಆಂಗ್ಲ ಅಥವಾ ಇತರ ಇತಿಹಾಸಕಾರರು ಹೆಚ್ಚಿನ ಅಂಶವನ್ನು ಹೇಳಿಲ್ಲ.

೧೮೫೭ರ ಪ್ರಾರಂಭದ ವರೆಗೆ ಕಲಕತ್ತೆಯಿಂದ ಎಂಟು ಮೈಲು ದೂರದಲ್ಲಿದ್ದ ಡಂಡಂ ಇದು ಬಂಗಾಲ ತೋಫುದಳಗಳ ಮುಖ್ಯ ಠಾಣ್ಯವಾಗಿತ್ತು. ಆದರೆ ಆ ಸುಮಾರಿಗೆ ಕೆಲವು ಅನಿಶ್ಚಿತ ಕಾರಣಗಳಿಗಾಗಿ ಅಲ್ಲಿಯ ತೋಫುದಳಗಳನ್ನು ಮೀರತ ನಗರಕ್ಕೆ ಸ್ಥಳಾಂತರಿಸಲಾಯಿತು. ಅಲ್ಲಿ ಹಿಂದೀ ದಳಗಳಿಗೆ ಈ ಹೊಸ ಮಾದರಿಯ ರೈಫಲ್ಲುಗಳ ಬಳಿಕೆಯ ತರಬೇತುಕೊಡುವ ಉದ್ದೇಶದಿಂದ ಒಂದು ಸೈನ್ಯಶಾಲೆಯನ್ನು ಸ್ಥಾಪನೆ ಮಾಡಲಾಯಿತು. ಇದರಿಂದ ಕೇವಲ ಕಚ್ಚಾ ರಿಕ್ರೂಟುಗಳೇ ಇಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದು ಮಾತುಹರಟೆಗಳಿಗೂ ಪ್ರಚಾರಾತ್ಮಕ ಚಟುವಟಿಕೆಗಳಿಗೂ ಸಾಕಷ್ಟು ಅವಕಾಶವು ಇರುತ್ತಿತ್ತು.

ಈ ಅವಧಿಯಲ್ಲಿ, ಇಂಗ್ಲೀಷರಿಂದ ಒಮ್ಮೆ ತಮ್ಮ ಧರ್ಮಾಚಾರಗಳ ಮೇಲೆ ಗದಾಪ್ರಹಾರವು ಬಂದೇಬರುವದು ಎಂಬ ಸಂದೇಹ–ಭಯಗಳು ಹಿಂದೂ ಮತ್ತು ಮುಸಲ್ಮಾನರಲ್ಲಿ ಸಮಪ್ರಮಾಣದಲ್ಲಿ ಇದ್ದೇ ಇದ್ದವು. ಆಕಳು ಮತ್ತು ಹಂದಿಗಳ ನೆಣವನ್ನು ಹಲ್ಲಿನಿಂದ ಕಡಿಯ ಹಚ್ಚಿ ಆದರಿಂದಾಗುವ ಆಚಾರಭ್ರಷ್ಟತೆಯನ್ನೆ ಮುಂದೆಮಾಡಿ ತಮ್ಮನ್ನೆಲ್ಲ ಕ್ರೈಸ್ತ ಧರ್ಮಕ್ಕೆ ಮತಾಂತರಿಸುವ ಉಪಕ್ರಮದಲ್ಲಿ ಇದು ಮೊದಲು ಮಾತೆಂದು ಡಂಡಂದಲ್ಲಿಯೇ ಮೊಟ್ಟಮೊದಲು ಸುದ್ದಿಯಾಯಿತು. ಓರ್ವ ಶೂದ್ರ ಸಿಪಾಯಿಯು ಓರ್ವ ಬ್ರಾಹ್ಮಣನಿಗೆ ಇದನ್ನು ಹೇಳಿದನು. ಅವನು ತಮ್ಮ ಸಂಗಡಿಗರಿಗೆ ಹೇಳಿದನು. ಮುಸಲ್ಮಾನರೂ ಬೆರಗಾದರು. ಹಿಂದುಗಳೂ ಕಕ್ಕಾವಿಕ್ಕಿಯಾದರು. ಇಂಗ್ಲೀಷರಿಂದಲೇ ತಮ್ಮ ಉಪಜೀವನವು ನಡೆದಿದೆಯೆಂಬ ಸ್ವಾಮಿಭಕ್ತಿಯು ಸಿಪಾಯಿಗಳಲ್ಲಿದ್ದರೂ

ಧರ್ಮಭ್ರಷ್ಟತೆಗೆ ಯಾರೂ ಸಿದ್ಧರಿರಲಿಲ್ಲ. ಕಾಡತೂಸಿನ ವಾರ್ತೆಯು ಮಿಂಚಿನ ವೇಗದಿಂದ ಅನೇಕ ಸೈನ್ಯಠಾಣ್ಯಗಳನ್ನು ಸುತ್ತಿಕೊಂಡಿತು. ಡಂಡಂದಿಂದ ಬ್ಯಾರೆಕಪೂರ, ಅಲ್ಲಿಂದ ಬಹರಾಮಪೂರ ಹೀಗೆ ಬೇಸಿಗೆಯ ಬೇಗೆ ಹಬ್ಬಿದಂತೆ ಈ ದುರ್ವಾರ್ತೆಯು ಪಸರಿಸಿತು.

ಈ ಸಂಗತಿ ಇಂಗ್ಲೀಷ ಅಧಿಕಾರಿಗಳಿಗೆ ಗೊತ್ತಾಗಹತ್ತಿದರೂ ಅವರು ಮೊದಲು ಅದಕ್ಕೆ ಮಹತ್ವ ಕೊಡಲೇ ಇಲ್ಲ. ಜನೆವರಿ ೧೮೫೭ರ ಸುಮಾರಿಗೆ ಬ್ಯಾರೆಕಪೂರದ ಸಿಪಾಯಿಗಳು ವಿಶೇಷ ತಳಮಳವಲ್ಲಿದ್ದರು. ಅವರ ಒಬ್ಬ ಸೇನಾಪತಿ ಹಿಯರ್ಸೆ ಎಂಬುವವನು ಈ ಬಗ್ಗೆ ಸರಕಾರಕ್ಕೆ ಪತ್ರ ಬರೆದು, ಈ ಕಾಡತೂಸಿನ ಸಮಾಚಾರವು ವಿಶೇಷ ಸಂಕಟಕ್ಕೆ ಕಾರಣವಾಗಿದ್ದು ತಮ್ಮ ಪಡೆಯಲ್ಲಿ ಅದರ ವಿಷಯವನ್ನು ಅರಿಯದ ಸಿಪಾಯಿಯೇ ಇಲ್ಲವೆಂದು ತಿಳಿಸಿದ್ದನು. ಹೀಗಿದ್ದರೂ ಒಬ್ಬ ಸಿಪಾಯಿಯಾದರೂ ಸೇನಾಪತಿಯ ಬಳಿಗೆ ಬಂದು ಈ ಕಾಡತೂಸಿನ ಬಗ್ಗೆ ಸತ್ಯವೇನು ಎಂದು ಕೇಳಲಿಲ್ಲ. ಸೈನ್ಯ ಮತ್ತು ಅಧಿಪತಿಗಳಲ್ಲಿ ಇದೊಂದು ಸಣ್ಣ ಮಾತಿನ ಸ್ಪಷ್ಟೀಕರಣ ಕೇಳುವಷ್ಟು ಸಹ ಪ್ರೀತಿ ವಿಶ್ವಾಸಗಳಿರಲಿಲ್ಲ. ಒಂದು ರಾತ್ರಿ ಬ್ಯಾರೆಕಪುರದ ಟೆಲಿಗ್ರಾಫ್ ಕಚೇರಿಗೆ ಬೆಂಕಿಯಿಡಲಾಯಿತು. ಆಫೀಸರರ ಬಂಗಲೆಗಳ ಚಪ್ಪರಗಳ ಮೇಲೆ ಮಧ್ಯರಾತ್ರಿಯಲ್ಲಿ ಉರಿಯುವ ಬಾಣಗಳು ಬಂದು ಬೀಳತೊಡಗಿದವು. ಇವೇ ಮೊದಲಾದ ಚಿಹ್ನೆಗಳಿಂದ ಸಿಪಾಯರ ಅಂತರಂಗವು ಬಹಳೇ ಉದ್ವಿಗ್ನವಾಗಿದೆ ಎಂದು ಆಂಗ್ಲ ಅಧಿಕಾರಿಗಳು ತಿಳಿದುಕೊಂಡರು.

ಹಂದಿಯ ನೆಣವನ್ನು ಉಪಯೋಗ ಮಾಡಿರದಿದ್ದರೂ ಆಕಳಿನ ನೆಣವನ್ನು ಕೆಲವು ಕಾಲ ಉಪಯೋಗ ಮಾಡಿದ್ದು ನಿಜವೆಂದು ಬಂಡಾಯದ ಪ್ರಸಿದ್ಧ ಇತಿಹಾಸ ತಜ್ಞನಾದ ಸರ್ ಜಾನ್ ಕೆ ಸ್ವತಃ ಒಪ್ಪಿದ್ದಾನೆ.[1] ಬಹುತರವಾಗಿ ಯಾವ ಆಂಗ್ಲ ಇತಿಹಾಸಕಾರರೂ ಇದನ್ನು ನಿರಾಕರಿಸಿಲ್ಲ. ಆದರೆ ಇದರಲ್ಲಿ ಯಾವ ದುರುದ್ದೇಶವೂ ಇರಲಿಲ್ಲವೆಂದೂ ಈ ತಪ್ಪಿನ ಮಹತ್ವವು ಅವರ ಲಕ್ಷ್ಯಕ್ಕೆ ಬಾರದೆ ಇದ್ದುದೆ ಹೀಗಾದುದರ ಕಾರಣವೆಂದೂ ಕೆಲವು ಗ್ರಂಥಕಾರರು ಹೇಳಿರುವರು.

ಈ ಅಲಕ್ಷ್ಯದಿಂದ ಇಂಥ ಅನಾಹುತವು ಆದೀತೆಂಬ ಕಲ್ಪನೆಯೂ ಆ ಬಿಳಿಯ ಸೈನ್ಯಾಧಿಕಾರಿಗಳಿಗೆ ಬಂದಿರಲಿಕ್ಕಿಲ್ಲ. ಆದರೆ ಆ ಬಗ್ಗೆ ವಾದವಿವಾದವು

1. *History of the Indian Mutiny*. Kaye and Malleson Vol. 1.381.

ಮಾತ್ರ ಆಂಗ್ಲ ಸೈನ್ಯಾಧಿಕಾರಿಗಳಲ್ಲಿ ೧೮೫೩ರಿಂದ ನಡೆದಿತ್ತು. ಆ ಸುಮಾರಿಗೆ ಇಂಥ ಕಾಡತೂಸುಗಳನ್ನು ಮೊದಲು ಸಲ ಇಂಗ್ಲಂಡಿನಿಂದ ಕಳಿಸಲಾಯಿತು. ಇವುಗಳನ್ನು ಸಾರ್ವತ್ರಿಕ ಉಪಯೋಗಕ್ಕೆ ಕಳಿಸಿರಲಿಲ್ಲ. ಕಾಡತೂಸಗಳು ಹೊಸ ನಮೂನೆಯವಿದ್ದುದರಿಂದ ಅವುಗಳನ್ನು ಪ್ರಯೋಗಮಾಡಿ ನೋಡಿ ಆಂಗ್ಲ ಸೈನ್ಯಾಧಿಕಾರಿಗಳು ತಮ್ಮ ಅಭಿಪ್ರಾಯವನ್ನು ಈ ಬಗ್ಗೆ ಇಂಗ್ಲಂಡಿಗೆ ವಾಪಸು ಕಳಿಸಿಕೊಡಬೇಕೆಂಬುದೆ ಇದರ ಮನೀಷೆಯಾಗಿದ್ದಿತು. ಆಗ ಬಂಗಾಲ ಸೈನ್ಯಪಡೆಗಳ ಆ್ಯಡ್ಜೂಟಂಟ ಜನರಲ್ಲರಾದ ಕರ್ನಲ ಹೆನ್ರಿ ಟಕರ ಇವನು ಈ ಕಾಡತೂಸಗಳ ಉಪಯೋಗವು ಹಿಂದೀ ದಳಗಳಿಗೆ ಆಕ್ಷೇಪಾರ್ಹವಾಗಬಹುದೆಂದು ಎಚ್ಚರಿಕೆ ಕೊಟ್ಟಿದ್ದಾನೆ. ಇದರಿಂದ ೧೮೫೩ರಿಂದ ಇಂಥ ಕಾಡತೂಸುಗಳು ಒಂದಿಲ್ಲೊಂದು ಬಗೆಯಿಂದ ಜಾರಿಯಲ್ಲಿದ್ದವೆಂದು ತಾನೇ ಸಿದ್ಧವಾಗುತ್ತದೆ. ಆದರೆ ಕೂಡಲೇ ಇದನ್ನು ವಿರೋಧಿಸಬೇಕೆಂಬ ಕಲ್ಪನೆಯು ಯಾರಿಗೂ ಬರಲಿಲ್ಲ.

ಇದೇ ಪರಿಸ್ಥಿತಿಯು ೧೮೫೭ರ ವರೆಗೂ ಇತ್ತು. ಸುಧಾರಿಸಿದ ಎನ್‌ಫೀಲ್ಡ ರೈಫಲುಗಳು ದೊಡ್ಡ ಪ್ರಮಾಣದಲ್ಲಿ ಬಂದದ್ದು ೧೮೫೭ರ ಪ್ರಾರಂಭದಲ್ಲಿ. ಆಂಗ್ಲ ಗ್ರಂಥಕಾರರ ಪ್ರಕಾರ ಈ ಹೊಸ ರೈಫಲುಗಳನ್ನು ರಾಣಿಯ ೬೦ನೆಯ ರೈಫಲ ದಳಕ್ಕೆ ಮಾತ್ರ ಕೊಡಲಾಗಿತ್ತು. ಆ ದಳವು ಕೇವಲ ಬಿಳಿಯರ ದಳವೇ ಆಗಿದ್ದಿತು. ಆದ್ದರಿಂದ ಈ ಕಾಡತೂಸುಗಳ ಬಗ್ಗೆ ಆಕ್ಷೇಪವು ಬರಲು ಕಾರಣವೇ ಇರಲಿಲ್ಲ. ಇದೇ ಸಮಯಕ್ಕೆ ಹೊಸ ಕಾಡತೂಸುಗಳ ಪ್ರಯೋಗಗಳ ಬಗ್ಗೆ ಭಾರತದಿಂದ ಆಂಗ್ಲ ಸೈನ್ಯಾಧಿಕಾರಿಗಳು ಕಳಿಸಿದ ಸವಿಸ್ತರ ವರದಿಗಳನ್ನು ಇಂಗ್ಲಂಡದ ವರಿಷ್ಠರು ಪರಿಶೀಲಿಸಿ ಡಮ್‌ಡಮ್ ಮತ್ತು ಮೀರತಗಳಲ್ಲಿಯೇ ಅವುಗಳನ್ನು ತಯಾರಿಸಲು ಆಜ್ಞೆ ಕೊಟ್ಟರು. ಡಮ್‌ಡಮ್‌ದಲ್ಲಿ ಆಗ ಯಾವ ಸೈನ್ಯಠಾಣ್ಯವೂ ಇರಲಿಲ್ಲ. ಬಂದೂಕುಗಳ ರಚನಾಶಾಸ್ತ್ರವನ್ನು ಹಿಂದೀಯರಿಗೆ ಕಲಿಸುವ ಶಾಲೆಯೊಂದನ್ನು ಅದೇ ಸ್ಥಾಪನೆ ಮಾಡಲಾಗಿದ್ದಿತು. ಈ ಕಾಡತೂಸುಗಳನ್ನು ಹಿಂದೀ ದಳಗಳಿಗೆ ಪ್ರತ್ಯಕ್ಷವಾಗಿ ಕೊಟ್ಟಿರಲಿಲ್ಲ. ಆದರೆ ಅವು ಬೇಗನೆ ಬರಲಿವೆ ಎಂಬ ವಾರ್ತೆಯು ಠಾಣ್ಯದಿಂದ ಠಾಣ್ಯಕ್ಕೆ ಹಬ್ಬತೊಡಗಿತು. ಡಮ್‌ಡಮ್‌ದಲ್ಲಿ ಹುಟ್ಟಿದ ಈ ಸುದ್ದಿಯು ಮೂರು ತಿಂಗಳಲ್ಲಿ ಮೀರತಕ್ಕೆ ಮುಟ್ಟಿ ಮೀರತದಲ್ಲಿಯೇ ಮೊದಲು ಬಂಡಾಯದ ಕಿಡಿಯು ಹೊತ್ತಿತು. ಈ ಕಿಡಿಯು ಮುಂದೆ ಮಿಂಚಿನ ವೇಗದಿಂದ ಹಬ್ಬಿ ಸಾರ್ವತ್ರಿಕ ಬಂಡಾಯವಾಯಿತು.

ನೆಣದಿಂದ ಮೊಹರು ಮಾಡಿದ ಕಾಡತೂಸುಗಳನ್ನು ತಯಾರಿಸುವ ಕಾರ್ಯ ವನ್ನು ಭಾರತದಲ್ಲಿಯೇ ಡಮ್‌ಡಮ್ ಹಾಗೂ ಮೀರತಗಳಲ್ಲಿ ಪ್ರಾರಂಭ ಮಾಡ ಬೇಕೆಂಬ ಹುಕುಮು ಇಂಗ್ಲಂಡಿನಿಂದ ಬಂದೊಡನೆ ನೆಣವನ್ನು ಈ ಫ್ಯಾಕ್ಟ ಗಳಿಗೆ ಪೂರೈಸುವ ಗುತ್ತಿಗೆಯನ್ನು ೧೫-೮-೧೮೫೬ಕ್ಕೆ ಕಲಕತ್ತೆಯ ಗಂಗಾಧ ಬ್ಯಾನರ್ಜಿ ಮತ್ತು ಕಂ. ಎಂಬ ಕಂಪನಿಗೆ ಕೊಡಲಾಗಿತ್ತು. ಇದರ ಉಲ್ಲ ಖವು ದೊರೆತಿದೆ. ಗಂಗಾಧರ ಬ್ಯಾನರ್ಜಿ ಮತ್ತು ಕಂಪನಿಯು ಈ ನೆಣವನ್ನು ಎರಡಾಣೆಗಳಿಗೆ ಒಂದು ಪೌಂಡಿನಂತೆ ಪೂರೈಸಬೇಕೆಂದು ಗೊತ್ತುಪಡಿಸಲಾಗಿತ್ತು ಈ ಗುತ್ತಿಗೆಯ ಪ್ರಕಾರ ಪೂರೈಸಲಾಗುತ್ತಿದ್ದ ನೆಣದಲ್ಲಿ ಹಂದಿಯ ನೆಣ ಎಂದೂ ಇರಲಿಲ್ಲವಾದರೂ ಮೊದಮೊದಲಿಗೆ ಆಕಳ ನೆಣವು ಮಾತ್ರ ಇದ್ದದ್ದು ನಿಜ. (Kaye, Vol. I. 381)

ವಸ್ತುಸ್ಥಿತಿಯು ೧೮೫೭ರ ಜನೆವರಿ ತಿಂಗಳಲ್ಲಿ ಹೀಗಿತ್ತು. ಸಾಕಷ್ಟು ಅನಾಹುತವೂ ಅದರಿಂದ ಘಟಿಸಿಯೇ ಬಿಟ್ಟಿತು. ಹಿಂದು ಮತ್ತು ಮುಸಲ್ಮಾ ರಿಗೆ ಅಸಹ್ಯವಾಗುವಂಥ ನೆಣ ಹಚ್ಚಿದ ಕಾಡತೂಸುಗಳನ್ನು ಇಂಗ್ಲೀಷರು ಪೂರೈ ಸಿದ್ದು ನಿಜವೆ, ಎಂದು ಪ್ರಶ್ನೆ ಮಾಡುವಷ್ಟು ಸಮಾಧಾನ ಯಾರಿಗೂ ಇರಲಿಲ್ಲ ನೆಣ ಹಚ್ಚಿ ತಯಾರಿಸಿದ ಕಾಡತೂಸುಗಳನ್ನು ಪ್ರತ್ಯಕ್ಷ ಪೂರೈಸುವ ಸಮಯವೆ ಇನ್ನೂ ಒದಗಿರದಿದ್ದರೂ ಆ ಕಾಡತೂಸುಗಳು ಬರುವದು ನಿಶ್ಚಿತವೆಂಬ ವದಂ ಯಿಂದಲೇ ಸೈನಿಕರು ಸಂತಪ್ತರಾಗಿಬಿಟ್ಟರು ! ಕೂಡಲೆ ಬಿಳಿಯ ಸೈನ್ಯಾಧಿಕಾ ಗಳಲ್ಲಿ ಗಡಿಬಿಡಿಯುಂಟಾಯಿತು. ಅವಸರದ ಪತ್ರವ್ಯವಹಾರಗಳು ನಡೆದವು ಕಾಡತೂಸುಗಳಲ್ಲಿ ಅಂಥ ಆಕ್ಷೇಪಾರ್ಹವಾದ ನೆಣವಿಲ್ಲವೆಂದು ಎಲ್ಲ ಠಾಣ್ಯಾಗ ಲ್ಲಿಯೂ ಪರಿಪರಿಯಿಂದ ತಿಳಿಸಲಾಯಿತು. ಕಾಡತೂಸುಗಳ ತುದಿಯಲ್ಲಿ ಹಲ್ಲ ನಿಂದ ಕಡಿಯುವ ಬದಲು ಕೈಯಿಂದ ಚಿವುಟಿ ಒಗೆಯಲು ಅನುಕೂಲವಾಗ ವಂತೆ ಮಾಡಲಾಯಿತು. "ನಾವು ನೆಣವನ್ನು ಹಚ್ಚುವದೇ ಇಲ್ಲ; ನೀವೆ ನಿಮಗೆ ಒಪ್ಪಿಗೆಯಿದ್ದ ನೆಣವನ್ನು ಪೇಟೆಯಿಂದ ತಂದು ಉಪಯೋಗಮಾಡಿ ಕೊಳ್ಳಿರಿ," ಎಂದು ಬಿಳಿಯ ಅಧಿಕಾರಿಗಳು ತಿಳಿಸಿಹೇಳಿದರು. ಆದರೂ ಸಿಪಾಯಿಯ ಅಂತರಂಗವು ಭಯಸಂದೇಹಗಳಿಂದ ತುಂಬಿಹೋಗಿದ್ದಿತು. ಸಿಪಾ ಯಿಯ ಮನಸು ಆಗಿನ ಕಾಲದಲ್ಲಿ ವಿಚಿತ್ರವಾಗಿದ್ದಿತು. ಅವನ ಮನೋ ಭೂಮಿಕೆಯನ್ನು ಅಂದು ಸರಿಯಾಗಿ ತಿಳಿದುಕೊಂಡವರಿಗೆ ಭಾರತದಲ್ಲಿಯ ಅಂದಿನ ಸಿ ತಿ ಸಮವಾಗಿ ಹೊಳೆಯುತ್ತಿತು.. ಸಮಾಜದಲಿಯ ದರ. ಬಾವ

ಗಳಿಗೆ ಅಂದಿನ ಸಿಪಾಯಿಯು ವಿಶೇಷ ಅಂಜಿಕೊಂಡು ನಡೆದುಕೊಳ್ಳುತ್ತಿದ್ದನು. ಯಾಕಂದರೆ ಭ್ರಷ್ಟಾಚಾರದಿಂದ ಒಂದು ವೇಳೆ ಸಮಾಜದಿಂದ ಹೊರಗೆ ಹೋಗುವ ಪ್ರಸಂಗವು ಬಂದರೆ ಅವನಿಗೆ ಮತ್ತು ಅವನ ಕುಟುಂಬದವರಿಗೆ ಅಸ್ತಿತ್ವವೇ ಇಲ್ಲದಾಗಿ ಅವರ ನಿತ್ಯಜೀವನವೇ ನಡೆಯುವದು ಸಾಧ್ಯವಾಗುತ್ತಿರಲಿಲ್ಲ. ಎರಡನೆಯದಾಗಿ ಸಿಪಾಯಿಯು ತನಗೆ ಅನ್ನ ಹಾಕುವ ಸ್ವಾಮಿಯನ್ನು ತನ್ನ ಪ್ರಾಣದಂತೆ ಸಂರಕ್ಷಣೆ ಮಾಡುತ್ತಿದ್ದನು. ರಾಷ್ಟ್ರ, ಬಂಧುಗಳು ಮೊದಲಾದ ಯಾವದನ್ನೂ ನೋಡದೆ ಅವನು ಸ್ವಾಮಿಯ ಸಲುವಾಗಿ ತ್ಯಾಗಮಾಡುತ್ತಿದ್ದನು. ಅದರಿಂದಲೆ ಹಿಂದೀ ಸಿಪಾಯಿಗಳ ಸಹಾಯದಿಂದ ಹಿಂದುಸ್ಥಾನವನ್ನು ಗೆಲ್ಲುವದು ಬ್ರಿಟಿಶರಿಗೆ ಸಾಧ್ಯವಾಯಿತು. ಆದರೆ ಧರ್ಮಾಚಾರಕ್ಕೆ ಧಕ್ಕೆ ಹಚ್ಚುವ ಸ್ವಾಮಿಯ ವಿಷಯದಲ್ಲಿ ಮಾತ್ರ ಸಿಪಾಯಿಗೆ ಸಂಶಯವುಂಟಾಯಿತು.

### ಚಪಾತಿಯ ಚಮತ್ಕಾರ

ಈ ಪ್ರಕಾರವಾಗಿ ಡಮ್‌ಡಮ್‌ದಿಂದ ಮೀರತದವರೆಗೆ ಹೊಸ ಕಾಡತೂಸುಗಳ ಬಗ್ಗೆ ಸಿಪಾಯಿಗಳ ಅಂತರಂಗವು ತುಂಬಾ ಬೆಂದುಹೋಗಿರುವಾಗ ಕಾನ-ಪೂರದ ಸುತ್ತಲೂ ಚಪಾತಿಗಳನ್ನು ಊರಿಂದ ಊರಿಗೆ ಮತ್ತು ಜನತೆಯಿಂದ ಜನತೆಗೆ ಹಂಚುವ ಒಂದು ಚಮತ್ಕಾರಿಕ ಘಟನೆಯು ನಡೆಯಿತು. ಇಂಗ್ಲೀಷ ಅಧಿಕಾರಿಗಳಿಗೆ ಆಗಷ್ಟೇ ಅಲ್ಲದೆ ಮುಂದೆಯೂ ಸಹ ಈ ವಿಷಯದ ಅರ್ಥವೇ ಆಗಲಿಲ್ಲ. ಆದರೆ ನಡೆದದ್ದು ಏನು ಎಂಬುದನ್ನು ಮಾತ್ರ ಪ್ರಸಿದ್ಧ ಆಂಗ್ಲ ಇತಿಹಾಸಕಾರರೆಲ್ಲರೂ ತಮ್ಮ ಪುಸ್ತಕಗಳಲ್ಲಿ ಉಲ್ಲೇಖಿಸಿದ್ದಾರೆ. ಕಾನಪೂರದ ಸುತ್ತಲಿನ ನರಸಿಂಗಪೂರ, ಜಬ್ಬಲಪೂರ, ಸಗೌರ ಮುಂತಾದ ಅನೇಕ ಜಿಲ್ಹೆಗಳಲ್ಲಿ ಈ ಚಪಾತಿಗಳನ್ನು ಹಂಚುವ ದೃಶ್ಯವು ಎಲ್ಲರ ಕಣ್ಣಿಗೂ ಬಿದ್ದಿದೆ.

೧೮೫೭ರ ಮಾರ್ಚ ತಿಂಗಳ ಸುಮಾರಿಗೆ ಆಂಗ್ಲರಿಗೆ ಸಿಪಾಯಿಗಳ ಹಾಗೂ ಜನರ ಪ್ರತಿಯೊಂದು ವರ್ತನೆಯೂ ಸಂಶಯಕ್ಕೆ ಕಾರಣವಾಗಿತ್ತು. ಹಳ್ಳಿಗಾಡುಗಳಲ್ಲಿ, ಮೂಲೆಮೂಲೆಯಲ್ಲಿ ಇರುವ ಪ್ರತಿಯೊಬ್ಬನ ಕೈಗೂ ಈ ಚಪಾತಿಗಳು ಮುಟ್ಟುತ್ತಿದ್ದ ಸಮಾಚಾರವು ಇಂಗ್ಲೀಷ ಅಧಿಕಾರಿಗಳಿಗೆ ತಿಳಿದೊಡನೆ ಅವರು ಒಮ್ಮೆಲೆ, ಇದು ಮುಂದೆ ಬರುವ ಬಂಡಾಯಕ್ಕೆ ಸಂಬಂಧ ಪಟ್ಟಿರಬೇಕೆಂದೂ ಬಂಡಾಯದ ಸಂದೇಶವನ್ನು ಮೂಲೆ ಮೂಲೆಗೆ ಮುಟ್ಟಿಸುವ ಇದೊಂದು ಸಾಂಕೇತಿಕ ವಿಧಾನವಿರಬೇಕೆಂದೂ ತಿಳಿದರು. ಸಂಶಯಪಿಶಾಚಿಯು ಆಂಗ್ಲ

ರನ್ನು ಆಕ್ರಮಿಸಿಕೊಂಡಿತು.

ಯಾವದಾದರೊಂದು ಹಳ್ಳಿಯಲ್ಲಿ ಪರ ಊರಿನಿಂದ ಓರ್ವನು ಬಂದು ಆ ಊರಿನ ಚೌಕಿದಾರನಿಗೆ ಒಂದು ಚಪಾತಿಯನ್ನು ಕೊಟ್ಟು ಅದೇ ರೀತಿಯಾಗಿ ಎರಡು, ನಾಲ್ಕು, ಎಂಟು ಮಾಡಿ ಅವನು ಹಂಚತಕ್ಕದ್ದೆಂದು ಹೇಳಿ ಹೋಗುತ್ತಿದ್ದನು. ಅದರ ಸುತ್ತಲೂ ಯಾವದೊ ಒಂದು ಭಾವಿಕತನವಿದ್ದುದರಿಂದ ಚೌಕಿದಾರನಾದರೂ ಇದು ಯಾಕೆ, ಇವರು ಯಾರು, ಎಲ್ಲಿಯವರು ಏನೂ ಪ್ರಶ್ನೆ ಮಾಡದೆ ಸುಮ್ಮನೆ ಹಂಚತೊಡಗುತ್ತಿದ್ದನು. ಚಪಾತಿಯು ಮುಟ್ಟಿದವರೆಲ್ಲ ಮತ್ತೆ ತಾವು ಎರಡು, ನಾಲ್ಕು, ಎಂಟು ಹೀಗೆ ಮಾಡಿ ಹಂಚಿ ಕೈ ಜಾಡಿಸಿ ಕೊಂಡು ಬಿಡುತ್ತಿದ್ದರು. ಹಂಚುವ ಕೆಲಸವು ಯಾವ ಮುಚ್ಚುಮರೆಯಿಲ್ಲದೆ ಸಾಗುತ್ತಿತ್ತು. ಕೆಲವು ಚೌಕಿದಾರರು ಈ ಚಪಾತಿಗಳನ್ನು ಅಧಿಕಾರಿಗಳಿಗೆ ಒಯ್ದು ಕೊಟ್ಟರು. ಅವರು ಅವುಗಳನ್ನು ಮುರಿದು ತಿಂದು ಅನೇಕ ರೀತಿಯಿಂದ ಪರೀಕ್ಷಿಸಿದರೂ ಅವರಿಗೆ ಅದರ ಅರ್ಥವೇ ಆಗಲಿಲ್ಲ. ಚಪಾತಿಯ ರುಚಿಯಲ್ಲಿ ಏನೂ ವ್ಯತ್ಯಾಸವಿರಲಿಲ್ಲ. ಅದರ ಹೊಟ್ಟೆಯಲ್ಲಿ ಯಾವ ಸಂದೇಶವೂ ಇರಲಿಲ್ಲ. ಹೀಗಾಗಿ ಕೆಲವು ಅಧಿಕಾರಿಗಳು ಇದಕ್ಕೆ ಮಹತ್ವವನ್ನೇ ಕೊಡಲಿಲ್ಲ. ಊರಲ್ಲಿಯ ಬೇನೆ-ಬೇಸರಿಕೆಗಳನ್ನು ಓಡಿಸಲು ಭಾವಿಕರು ಈ ವಿಧಾನವನ್ನನುಸರಿಸುತ್ತಿರಬಹುದೆಂದೂ ಕೆಲವರು ತರ್ಕಮಾಡಿದರು. ಸಗೌರ ಜಿಲ್ಹೆಯ ಕಮೀಶನರನು ಚಪಾತಿಯ ಬಗ್ಗೆ ಒಂದು ವ್ಯಾಪಕ ವರದಿಯನ್ನು ಸಿದ್ಧಗೊಳಿಸಿ ವರದಿಯ ಕೂಡ ಆ ಒಂದು ಚಪಾತಿಯನ್ನೂ ಸರಕಾರಕ್ಕೆ ಕಳಿಸಿದ್ದನಂತೆ ! ( Charles Ball ).

ಇಂಗ್ಲೀಷರಿಗೆ ಇದರ ಅರ್ಥವಾಗಲೇ ಇಲ್ಲವೆಂದು ಮೊದಲೆ ಹೇಳಿದೆಯಷ್ಟೆ. ಆದರೆ ಹಿಂದಿನ ಅಥವಾ ಇಂದಿನ ಭಾರತೀಯ ಇತಿಹಾಸಕಾರರಾದರೂ ಈ ಚಪಾತಿಯ ಚಮತ್ಕಾರದ ಅರ್ಥವನ್ನು ಒಡೆಯಬೇಕಾಗಿತ್ತು. ಅವರಿಗೂ ಇದು ಸಾಧ್ಯವಾಗಿಲ್ಲ. ಕೆಲವರು ಸಂಶಯಪಟ್ಟಂತೆ ಊರುಗಳಿಂದ ಅನಿಷ್ಟಗಳನ್ನು ಓಡಿಸುವ ಒಂದು ಭಾವಿಕ ವಿಧಾನವು ಇದು ಇದ್ದಿರಬಹುದು. ಹಾಗಿದ್ದಲ್ಲಿ ಬಂಡಾಯದ ಮುನ್ಸೂಚನೆಯ ಸಮಯದಲ್ಲಷ್ಟೆ ಇದು ಯಾಕೆ ಕಾಣಿಸಿಕೊಳ್ಳಬೇಕಾಗಿತ್ತು ? ಇಂಥ ಪರಿಪಾಠವು ಇದೆಯೆಂಬ ಉಲ್ಲೇಖವು ಬೇರೆ ಸಂದರ್ಭಗಳಲ್ಲಿ ನಮಗೆ ದೊರೆಯಬೇಕಾಗಿತ್ತಲ್ಲ ? ಹಾಗಾದರೆ ಈ ಚಪಾತಿಗಳು ಹಳ್ಳಿಹಳ್ಳಿಗಳಿಗೆ ಬಂಡಾಯದ ಸಂದೇಶವನ್ನು ಮುಟ್ಟಿಸಿರಬಹುದೆ ? ಹೀಗಿದ್ದಲ್ಲಿ ಎಲ್ಲಿಯಾದರೂ ಯಾರೊಬ್ಬರಿಂದಾದರೂ ಇದರ ಇತ್ಯರ್ಥವು ತಿಳಿಯಬೇಕಾಗಿತ್ತಲ್ಲ ?

ಈ ಚಪಾತಿಗಳ ಸಂಚಾರವು ಆಂಗ್ಲರಿಗೆ ಅರ್ಥವಾಗದೆ ಹೋದರೂ ಅದು ಬಂಡಾಯುದ ಸಂಜೇಶವೇ ಆಗಿದ್ದಿತೆಂದೂ ಗೊತ್ತಿದ್ದವರಿಗೆ ಅದರ ಅರ್ಥ ಗೊತ್ತಿತ್ತೆಂದೂ ಪ್ರತಿಯೊಬ್ಬನೂ ತನ್ನ ಕೈಗೆ ತಲುಪಿದ ಚಪಾತಿಯ ಕೆಲವಂಶವನ್ನು ಪ್ರಸಾದವೆಂದು ತಿಂದು ಮುಂದೆ ಕಳಿಸುತ್ತಿದ್ದನೆಂದೂ ಕೆಲವು ಇತಿಹಾಸಕಾರರ್ನ ಅಭಿಪ್ರಾಯವಿದೆ. ೧೮೦೬ರಲ್ಲಿ ವೆಲ್ಲೂರಿನಲ್ಲಿ ಸಿಪಾಯಿ ಬಂಡಾಯವಾದಾಗಲೂ ಚಪಾತಿಗಳನ್ನು ಹಂಚಲಾಗಿತ್ತು. ಸಾವರಕರ ಪುಟ ೯೭)

# ಏಳನೆಯ ಅಧ್ಯಾಯ

## ಜ್ವಾಲಾಮುಖಿಯ ಸ್ಫೋಟ

### ಮಂಗಲ ಪಾಂಡೆ ಮತ್ತು ವೀರತ

**೧೮೫೭**ರ ಮೇ ೧೦ಕ್ಕೆ ಸಿಪಾಯಿ ಬಂಡಾಯವು ವೀರತದಲ್ಲಿ ಪ್ರಾರಂಭವಾಗುವ ಮುಂಚೆಯೇ ಮೂರುನಾಲ್ಕು ತಿಂಗಳ ಸೈನ್ಯ ಠಾಣ್ಯಾಗಳಲ್ಲಿ ಸಿಪಾಯರು ತಮ್ಮತಮ್ಮೊಳಗೆ ಚರ್ಚೆಮಾಡಿ ತಮ್ಮ ಧರ್ಮಜಾತಿಗಳನ್ನು ಭ್ರಷ್ಟಗೊಳಿಸುವದೊಂದೇ ಉದ್ದೇಶವು ಬ್ರಿಟಿಶರ ಈ ನೂತನ ಕ್ರಮದಿಂದ ವ್ಯಕ್ತವಾಗುತ್ತಿದೆಯೆಂದು ಮನವರಿಕೆ ಮಾಡಿಕೊಂಡರು. ಆಗಲೆ ತನ್ನ ಬಿಳಿಯ ಸ್ವಾಮಿಯ ಬಗ್ಗೆ ಸಿಪಾಯಿ ಬೇಸತ್ತಿದ್ದನು. ಈಚೆಗೆ ಇಂಗ್ಲೀಷ ಆಳಿಕೆ ಎಂದರೇನು ಎಂಬುದರ ಅರ್ಥವು ಅವನ ಸರಳ ಹೃದಯಕ್ಕೆ ಆಗಹತ್ತಿತ್ತು. ಪ್ರತ್ಯಕ್ಷ ಬಂಡಾಯವಾಗುವ ಮೊದಲೆ ಸಿಪಾಯಿಯು ಅಧಿಕಾರಿಗಳ ಬಂಗ್ಲೆಗಳಿಗೆ ಕೊಳ್ಳಿಯಿಡುವ ಮುಂತಾದ ಕೃತಿಗಳಿಂದ ತನ್ನ ಸಂತಾಪದ ಶಮನ ಮಾಡಿಕೊಳ್ಳಹತ್ತಿದನು. ಅಧಿಕಾರಿಗಳ ಮನೆಗಳ ಮೇಲೆ ಮಧ್ಯರಾತ್ರಿ ಅಗ್ನಿಬಾಣಗಳು ಬಂದು ಬೀಳುತ್ತಿದ್ದವು. ಸಿಪಾಯಿಗಳ ಅಸಂತೋಷವೇ ಇದಕ್ಕೆ ಕಾರಣವೆಂದು ಅಧಿಕಾರಿಗಳಿಗೆ ತುಂಬಾ ಮನವರಿಕೆಯಾದರೂ ಕಿಡಿಗೇಡಿಗಳ ಪತ್ತೆ ಹಚ್ಚಲು ಅವರು ಅಸಮರ್ಥರಾದರು.

ಕಾಡತೂಸು ಬಂಡಾಯ ಹೊತ್ತಿಸಲು ಕೊನೆಯ ಕಿಡಿಯೆಂದು ಹೇಳಬಹುದೆ ವಿನಾ ಅದೊಂದರಿಂದಲೆ ಬಂಡಾಯವು ಸಂಭವಿಸಿತೆಂದು ಹೇಳುವದು ಸರಿಯಲ್ಲ. ತಮ್ಮ ಅನ್ಯಾಯಗಳನ್ನೆಲ್ಲ ಮರೆಮಾಡಬೇಕೆಂಬ ಆಂಗ್ಲ ಅಧಿಕಾರಿಗಳು ಮತ್ತು ಬರಹಗಾರರು, ಕಾಡತೂಸಿನ ಪ್ರಕರಣದಿಂದಲೆ ಬಂಡಾಯವಾಯಿತೆಂದೂ ಇಂಗ್ಲೀಷರ ಶೂರತನದಿಂದ ಅದು ಹತ್ತಿಕ್ಕಲ್ಪಟ್ಟಿತೆಂದೂ ಹೇಳುತ್ತಾರೆ. ಇಂಥ ಘನವಾದ ಅಸತ್ಯ ಬೇರೊಂದಿಲ್ಲ. ಅಸಂಖ್ಯ, ಘೋರ ಅನ್ಯಾಯಗಳಿಂದ ಕಂಪನಿಯ ಬಗ್ಗೆ ಸಿಪಾಯಿಗೆ ಹೇಸಿಕೆಯಾಗಿತ್ತು. ಕಳೆದ ಐವತ್ತು ವರ್ಷ ಹಿಂದು ಮುಸಲ್ಮಾನ ಧರ್ಮಗಳ ಮೇಲೆ ಕ್ರಿಸ್ತಮತದ ಆಕ್ರಮಣವೂ ನಡೆದಿತ್ತು. ಹಲವು ಸೈನ್ಯ ಮತ್ತು ಮುಲ್ಕಿ ಅಧಿಕಾರಿಗಳೆ ಪ್ರತ್ಯಕ್ಷ ಪಾದ್ರಿಗಳಂತೆ ವರ್ತಿಸುತ್ತಿದ್ದರು.

ಸಿಪಾಯಿಗಳ ಅಸಂತೋಷವನ್ನು ನೋಡಿ ಬ್ಯಾರೆಕಪೂರ ಸೈನ್ಯಠಾಣ್ಯದ ಅಧಿಪತಿಯಾದ ಜನರಲ ಹಿಯರಸೆ ಇವನು ಸಿಪಾಯಿಗಳಿಗೆ ತಮಗೆ ಇಷ್ಟವಿದ್ದ ನೆಣವನ್ನು ಕಾಡತೂಸುಗಳಿಗೆ ಹಚ್ಚಲು ಅಪ್ಪಣೆ ಕೊಡಬೇಕೆಂದು ೧೮೫೭ರ ಜನೆವರಿ ತಿಂಗಳಲ್ಲಿಯೇ ಮೇಲಿನವರಿಗೆ ಸೂಚನೆ ಮಾಡಿದನು. ಸರಕಾರವು ಹಿಯರಸೆನ ಸೂಚನೆಯನ್ನು ಮಾನ್ಯಮಾಡಿತು. ಆದರೆ ಸಿಪಾಯಿಗಳಿಗೆ ಸಮಾಧಾನವಾಗಲೊಲ್ಲದು. ಯಾವದು ಯೋಗ್ಯ ಕ್ರಮವೆಂಬ ಬಗ್ಗೆ ಪ್ರಧಾನಸೇನಾಪತಿ ಮತ್ತು ಸಂಪರ್ಕಾಧಿಕಾರಿಗಳಲ್ಲಿ ಚರ್ಚೆಮತಭೇದಗಳು ತಲೆಯತ್ತಿದವು. ಇನ್ನು ಮುಂದೆ ಯಾವಾಗಲೂ ಈ ಆಕ್ಷೇಪಾರ್ಹ ಕಾಡತೂಸುಗಳನ್ನು ಕೊಡಲಾಗುವದಿಲ್ಲವೆಂದು ಒಂದು ಶ್ವೇತಪತ್ರವನ್ನೆ ಹೊರಡಿಸಿಬಿಡಬೇಕೆಂದು ಪ್ರಧಾನ ಸೇನಾಪತಿಯು ವಿಚಾರಮಾಡಿದನು. ಆದರೆ ಹೀಗೆ ಮಾಡಿದರೆ ಹಿಂದೆ ಕೆಲವು ಆಕ್ಷೇಪಾರ್ಹ ಕಾಡತೂಸುಗಳು ಉಪಯೋಗದಲ್ಲಿದ್ದವೆಂದು ಒಪ್ಪಿದಂತಾಗುತ್ತದೆ ಎಂದು ಸಂಪರ್ಕಾಧಿಕಾರಿಗಳು ವಾದಹೂಡಿ ಅದನ್ನು ನಿಲ್ಲಿಸಿಬಿಟ್ಟರು. ಮುಂದೇನು ಎಂಬುದರ ವಿಚಾರ ಎಲ್ಲರನ್ನೂ ಆವರಿಸಿಕೊಂಡಿತು. ಆದ ತಪ್ಪು ಮುಚ್ಚುವಂತೆಯೂ ಇರಲಿಲ್ಲ; ಒಪ್ಪಿದರಂತೂ ಪರಿಣಾಮವು ಭೀಕರವಾಗುತ್ತಿತ್ತು.

ಅಧಿಕಾರಿಗಳು ಮತ್ತೆ ಆಲೋಚನೆ ಮಾಡಹತ್ತಿದರು. ಕಾಡತೂಸಿನ ಕವಾಯಿತನ್ನೆ ಕೆಲವು ಕಾಲ ನಿಲ್ಲಿಸಿಬಿಡೋಣವೇ ಎಂದರು. ಆದರೆ ಇಡಿಯ ಹಿಂದುಸ್ತಾನದ ಸೈನ್ಯದ ಕವಾಯಿತನ್ನು ನಿಲ್ಲಿಸುವ ಬಗೆ ಹೇಗೆ? ಸೂಚನೆಯೇ ಅವ್ಯವಹಾರ್ಯವಿತ್ತು. ಅನಂತರ ರೈಫಲುಗಳಿಗೆ ಕಾಡತೂಸುಗಳನ್ನು ಹಾಕುವವರೆಗೆ ಮಾತ್ರ ಕವಾಯಿತು ಮಾಡಬೇಕೆಂದು ವಿಧಿಸಲಾಯಿತು. ಯಾವ ಪ್ರಯೋಗದಿಂದಲೂ ಸಿಪಾಯಿ ಸಮಾಧಾನವನ್ನು ಹೊಂದಲಿಲ್ಲ.

ಪರಿಸ್ಥಿತಿಯು ಒಳ್ಳೆ ಪೇಚಿನದಾಯಿತು. ಕೆಲವು ಕಾಡತೂಸುಗಳ ತುದಿಗೆ ಹಚ್ಚು ಹೊಳಪಿನ ಕಾಗದಗಳಿದ್ದುದು ಮತ್ತಷ್ಟು ಸಂಶಯಕ್ಕೆ ಕಾರಣವಾಯಿತು. ಈ ಕಾಗದಕ್ಕೆ ಏನೂ ಹಚ್ಚಿರುವದಿಲ್ಲವೆಂದೂ ಬೇಕಾದರೆ ಶಿಷ್ಟಮಂಡಳದ ಮೂಲಕ ಶ್ರೀರಾಮಪುರಕ್ಕೆ ಬಂದು ನೋಡಬಹುದೆಂದೂ ಜನರಲ್ ಹಿಯರಸೆ ವಾದಿಸಿದ. ಯಾರೂ ಹೋಗಲಿಲ್ಲ; ಈ ಕಾಗದ ವಿಲಾಯತಿಯಿಂದಲೆ ಬರುತ್ತಿದೆಯೆಂದು ಸಿಪಾಯಿಗೆ ಗೊತ್ತಿತ್ತು!

ಬ್ಯಾರೆಕಪೂರದಲ್ಲಿಯ ೩೪ನೆಯ ಹಿಂದೀ ಕಾಲ್ದಳ ವಿಶೇಷ ಪ್ರಕ್ಷುಬ್ಧ:

ಗಿತ್ತು. ಕರ್ನಲ್ ವ್ಹೀಲರ ಎಂಬುವವನು ಇವರ ಮೇಲಧಿಕಾರಿಯಿದ್ದನು. ಇವನು ತುಂಬಾ ಕ್ರಿಸ್ತಧರ್ಮಾಭಿಮಾನಿ. ಅವನು ಪ್ರತ್ಯಕ್ಷ ಪ್ರಚಾರ ಮತ್ತು ಮತಾಂತರಗಳಲ್ಲಿ ಭಾಗವಹಿಸುತ್ತಿದ್ದನು. ಬ್ಯಾರೆಕಪೂರ, ರಾಣೀಗಂಜ, ಬಹ ರಾಮಪೂರ ಮತ್ತು ಮುರ್ಶಿದಾಬಾದಗಳಲ್ಲಿ ಆಫೀಸರರ ಬಂಗ್ಲೆಗಳು ಸುಡ ಹತ್ತಿದವು. ಬಹರಾಮಪೂರದಲ್ಲಿ ಪರಿಸ್ಥಿತಿಯು ವಿಕೋಪಕ್ಕೇ ಹೋಯಿತು. ಬ್ಯಾರೆಕಪೂರದಿಂದ ೩೪ನೆಯ ದಳದ ಎರಡು ಪಡೆಗಳು ಅಲ್ಲಿಗೆ ಬಂದವು. ಬಹ ರಾಮಪೂರದಲ್ಲಿ ೧೯ನೆಯ ಹಿಂದೀ ಕಾಲ್ದಳವಿದ್ದು ಅಲ್ಲಿ ಕರ್ನಲ್ ಮಿಚೆಲ್ ಎಂಬ ಸೇನಾಧಿಕಾರಿ ಇದ್ದನು.

ಬಹರಾಮಪೂರದ ೧೯ನೇ ದಳವು ಹೊಸ ಕಾಡತೂಸುಗಳನ್ನು ನಿರಾ-ಕರಿಸಿಯೇ ಬಿಟ್ಟಿತು. ಕರ್ನಲ್ ಮಿಚೆಲ್ಲನು ಸಿಟ್ಟಿಗೆದ್ದನು. ಮರುದಿನ ಮುಂಜಾನೆ ಕವಾಯತು ಇತ್ತು. ಆಗ ಯಾರಾದರೂ ಕಾಡತೂಸುಗಳನ್ನು ನಿರಾಕರಿಸಿದರೆ ಉಗ್ರಶಿಕ್ಷೆಕೊಡಲಾಗುವದೆಂದು ಕರ್ನಲ್ ಮಿಚಲ್ ಎಚ್ಚರಕೊಟ್ಟನು. ಒಂದು ವೇಳೆ ನಿರಾಕರಿಸಿದ್ದೇ ಆದರೆ ಅಂಥವರನ್ನು ಚೀನಾ ಮತ್ತು ಬ್ರಹ್ಮದೇಶಗಳಿಗೆ ಕಳಿಸಲಾಗುವದೆಂದು ಬೆದರಿಸಿದನು. ಸಿಪಾಯಿಗಳೂ ಹಟಹಿಡಿದರು. ರಾತ್ರಿ ಯಲ್ಲಿ ಸಿಪಾಯರು ಶಸ್ತ್ರಾಗಾರವನ್ನು ಬೀಗ ಮುರಿದು ಒಳಹೊಕ್ಕು ತಮ್ಮ ಬಂದೂಕುಗಳನ್ನು ತುಂಬಿ ಸಿದ್ಧರಾದರು. ಮಿಚೆಲ್ಲನೂ ಹಟವಾದಿಯೇ ಇದ್ದನು. ಬಹರಾಮಪೂರದಲ್ಲಿ ಆಗ ಬಿಳಿಯ ಸೈನ್ಯವೇ ಇರಲಿಲ್ಲ. ಕೆಲವು ನಿಷ್ಠಾವಂತ ಹಿಂದೀ ಅಧಿಕಾರಿಗಳೊಡನೆ ಅವನು ೧೯ನೆಯ ಕಾಲ್ದಳದ ಶಿಬಿರಕ್ಕೆ ಧಾವಿಸಿದನು. ರಾಜನಿಷ್ಠ ಹಿಂದೀ ಅಶ್ವಾರೋಹಿ ಹಾಗೂ ತೋಫುದಳಗಳನ್ನು ಸಿದ್ಧಮಾಡಿದನು. ಹಿಂದೀ ಅಧಿಕಾರಿಗಳು ಅವನನ್ನು ತಾಳ್ಮೆಗೆಡಬೇಡವೆಂದು ಎಚ್ಚರಿಸಿ ಸಿಪಾಯಿ ಗಳಿಗೆ ಸಿಟ್ಟಿನಕಿಂತ ಭಯವೇ ಹೆಚ್ಚಾಗಿದೆಯೆಂದು ವಿವರಿಸಿದರು. ಮಿಚೆಲ್ಲನು ಸುದೈವದಿಂದ ಅಷ್ಟಕ್ಕೆ ಸುಮ್ಮನಾದನು. ಮರುದಿನ ಕವಾಯತು ಶಾಂತವಾಗಿ ನಡೆಯಿತು. ಮುಂದೆ ೧೯ನೆಯ ಕಾಲ್ದಳವನ್ನು ಯಾವ ದಯೆಮಾಯೆ ತೋರದೆ ಹಿಂದುಸ್ತಾನ ಸರಕಾರದ ಆಜ್ಞೆಯಿಂದ ವಿಸರ್ಜನೆಮಾಡಲಾಯಿತು. ಆದರೆ ಅದರಿಂದ ಉಳಿದ ದಳಗಳು ೧೯ನೆಯ ದಳವನ್ನು ಅಭಿಮಾನ ಗೌರವ ದಿಂದ ಕಾಣತೊಡಗಿದವಲ್ಲದೆ ೧೯ನೆಯ ಕಾಲ್ದಳದ ಸಿಪಾಯರು ಹುತಾತ್ಮರಂತೆ ಪೂಜ್ಯರಾದರು! ವಿಸರ್ಜನೆಹೊಂದಿದ ಸಿಪಾಯಿಗಳು ಉತ್ತರಹಿಂದುಸ್ತಾನದ ಛಾ-ವಣಿಗಳಿಗೆ ಹೋಗಿ ಕಂಪನಿಸರಕಾರದ ವಿರುದ್ಧ ವಿಷಬೀಜಗಳನ್ನು ಬಿತ್ತಿದರು.

೧೯ನೆಯ ಹಿಂದೀ ಕಾಲ್ದಳಗಳು ಬಂಡಾಯದ ಪ್ರಯತ್ನವನ್ನು ನಡೆಸಿದ್ದು ಫೆಬ್ರುವರಿ ೨೬ನೇ ದಿನ. ಮುಂದೆ ಮಾರ್ಚ ೨೯ನೆಯ ದಿನ ೩೪ನೆಯ ಹಿಂದೀ ಕಾಲ್ದಳದ ಸಿಪಾಯಿ ಮಂಗಲ ಪಾಂಡೆ ಇವನು ವೈಯಕ್ತಿಕವಾಗಿ ಬಂಡಾಯ ಮಾಡಿ ಹುತಾತ್ಮನಾದನು. ಮಂಗಲ ಪಾಂಡೆ ಇವನು ಓರ್ವ ಬ್ರಾಹ್ಮಣ ಸಿಪಾಯಿ. ಬಹಳ ದಿನಗಳಿಂದ ಈ ಕಾಡತೂಸಿನ ಸಮಾಚಾರವು ಅವನಿಗೆ ಚಿಂತೆ ಯನ್ನುಂಟುಮಾಡಿತ್ತು. ಅದನ್ನು ಒತ್ತಾಯಪಡಿಸುತ್ತಿದ್ದವರ ಮೇಲೆ ಮಂಗಲನು ಹಲ್ಲುಕಡಿಯುತ್ತಿದ್ದ. ಯಾಕೆಂದರೆ ಜಾತಿಭ್ರಷ್ಟನಾಗಿ ಅವನು ಊರಿಗೆ ಹೋದರೆ ಅವನ ತಂದೆ, ತಾಯಿ, ಪತ್ನಿ ಯಾರೂ ಅವನನ್ನು ಬರಮಾಡಿಕೊಳ್ಳುತ್ತಿದ್ದಿಲ್ಲ. ಕಾಡತೂಸು ನಿರಾಕರಿಸಿದರೆ ಬಂಡಾಯದ ಆರೋಪ ಬಂದು ತೋಫಿನ ಬಾಯಿಗೆ ಸಹ ಹೋಗುವ ಪ್ರಸಂಗವಿತ್ತು. ಆದಿನ ಅಧಿಕಾರಿಗಳ ಮೇಲಿನ ಸಿಟ್ಟು ಉಕ್ಕಳಿಸಿ ಬಂದಿತ್ತು. ಕಾಡತೂಸುಗಳನ್ನು ನಿರಾಕರಿಸಿದವರಿಗೆ ಉಗ್ರಶಿಕ್ಷೆಯನ್ನು ಕೊಡುವ ಕೆಲಸವು ದಿನಾಲು ನಡೆದೇಬಿಟ್ಟಿತ್ತು. ೧೯ನೆಯ ಕಾಲ್ದಳದ ದುರ್ಗತಿಯನ್ನಂತೂ ಅವನು ಕಣ್ಣಾರೆ ಕಂಡಿದ್ದ. ಹೀಗಾಗಿ ಅಂದು ರವಿವಾರ ಸಾಯಂಕಾಲ ಮಂಗಲ ಪಾಂಡೆ ಒಂದು ಕೈಯಲ್ಲಿ ಖಡ್ಗವನ್ನೂ ಒಂದು ಕೈಯಲ್ಲಿ ಪಿಸ್ತೂಲನ್ನೂ ಹಿಡಿದು ಹೊರಬಿದ್ದನು ! ಮಂಗಲ ಪಾಂಡೆ ಎಂಬ ಸಿಪಾಯಿಯು ಸಾರ್ಜಂಟನ ಮೇಲೆ ಹಲ್ಲೆ ಮಾಡಿರುವನೆಂದು ೩೪ನೆಯ ಕಾಲ್ದಳದ ಸಂಪರ್ಕಾಧಿಕಾರಿ ಲೆಫ್ಟ ನಂಟ ಬಾಘ ಇವನಿಗೆ ತಿಳಿಯಿತು. ಬಾಘನು ಕೂಡಲೆ ಅತ್ಯಾಚಾರ ನಡೆದ ಸ್ಥಳಕ್ಕೆ ಧಾವಿಸಿದನು. ಮಂಗಲ ಪಾಂಡೆನ ಗುಂಡಿಗೆ ಬಾಘನ ಕುದುರೆ ಆಹುತಿ ಯಾಯಿತು. ಬಾಘನೂ ಸಾರ್ಜಂಟನೂ ಕೂಡಿಯೇ ಮಂಗಲ ಪಾಂಡೆನ ಮೇಲೆ ಬಿದ್ದರು. ಆದರೆ ಅವರಿಬ್ಬರಿಗೂ ಮಂಗಲ ಪಾಂಡೆ ಮಣಿಯಲಿಲ್ಲ. ಶೇಖ ಪಲಟು ಎಂಬ ಸಿಪಾಯಿ ಅಡ್ಡ ಬರದಿದ್ದರೆ ಬಾಘ ಮತ್ತು ಸಾರ್ಜಂಟ ಇಬ್ಬರೂ ಜೀವಕ್ಕೆ ರವಾಗುತ್ತಿದ್ದರು. ಗಲಭೆಯಿಂದ ಕೂಡಿದ ಸಿಪಾಯರಲ್ಲಿ ಯಾರೂ ಬಾಘ ಮತ್ತು ಸಾರ್ಜಂಟರ ಸಂರಕ್ಷಣೆ ಮಾಡಲು ಅಥವಾ ಮಂಗಲಪಾಂಡೆನನ್ನು ಕೊಲ್ಲಲು ಮುಂದೆ ಬರಲಿಲ್ಲ. ಕೆಲವರು ಇನ್ನೂ ಮಂಗಲನಿಗೇ ನೆರವಾದರು !

ಜನರಲ್ ಹಿಯರಸೆನಿಗೆ ಇಡಿಯ ೩೪ನೆಯ ಕಾಲ್ದಳವೇ ಬಂಡುಹೂಡಿದೆ ಯೆಂದು ಕಲ್ಪನೆಯಾಗಿತ್ತು ! ಸಹಾಯ ಕಳಿಸಲು ಡಮ್‌ಡಮ್ ಕಲಕತ್ತೆಗಳಿಗೆ ಅವನು ಸಂದೇಶ ಕಳಿಸುವಷ್ಟರಲ್ಲಿ ಗಾಯಗೊಂಡ ಬಾಘ ಮತ್ತು ಸಾರ್ಜಂಟರು ಅಲ್ಲಿಗೆ ಓಡಿಬಂದರು. ಅವರಿಂದ ಅವನಿಗೆ ನಿಜಸಂಗತಿಯು ತಿಳಿಯಲು

ಹಿಯರಸೆ ತನ್ನ ಇಬ್ಬರು ಮಕ್ಕಳೊಡನೆ ಪಾಂಡೆ ಇದ್ದಲ್ಲಿಗೆ ಧಾವಿಸಿದನು.

ಮಂಗಲ ಪಾಂಡೆ ತನ್ನ ರಕ್ತಾಂಕಿತ ಖಡ್ಗವನ್ನು ಝಳಪಿಸುತ್ತ ಇನ್ನೂ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದನು. ಹೆದರಿ ದೂರ ನಿಂತ ಸಿಪಾಯರಿಗೆ, ನಮ್ಮ ಧರ್ಮದ ಮೇಲೆ ದಬ್ಬಾಳಿಕೆ ನಡೆಸಿದ ಯುರೋಪಿಯನ್ನರ ನಾಶ ಮಾಡೋಣ ಬನ್ನಿ, ಎಂದು ಆಹ್ವಾನಿಸುತ್ತಿದ್ದನು. ಜನರಲ್ ಹಿಯರಸೆ ಮತ್ತು ಕೆಲವು ಹಿಂದೀ ಸೈನ್ಯಾಧಿಕಾರಿಗಳು ಬರುವವರೆಗೂ ತನ್ನ ಸಹಾಯಕ್ಕೆ ಯಾರೂ ಬರದೆ ಇರಲು ಮಂಗಲ ಪಾಂಡೆ ತಾನೆ ಗುಂಡು ಹೊಡೆದುಕೊಂಡು ಗಾಯ-ಗೊಂಡನು. ಕೂಡಲೆ ಅವನನ್ನು ಆಸ್ಪತ್ರೆಗೆ ಸಾಗಿಸಲಾಯಿತು. ವಿಚಾರಣೆಯಾಗಿ ಅವನಿಗೆ ಗಲ್ಲಿನ ಶಿಕ್ಷೆಯಾಯಿತು. ಆದರೆ ಇಡೀ ಬಹರಾಮಪೂರದಲ್ಲಿ ಅವನನ್ನು ಗಲ್ಲಿಗೇರಿಸಲು ಯಾರೂ ಮುಂದೆ ಬರಲಿಲ್ಲ!

ಅದುವರೆಗೆ ೩೪ನೆಯ ಕಾಲ್ದಳದ ಬಗ್ಗೆ ಸರಕಾರಕ್ಕೆ ಏನೂ ಸಂಶಯವಿರಲಿಲ್ಲ ಆದರೆ ಮಂಗಲಪಾಂಡೆ ಇವನು ಹಲ್ಲೆಯನ್ನು ನಡೆಸಿದಾಗ ಎಲ್ಲ ಸಿಪಾಯಿಗಳು ತಟಸ್ಥರಾಗಿ ಉಳಿದದ್ದರಿಂದ ಈ ಕಾಲ್ದಳವೂ ಬಂಡಾಯಕ್ಕೆ ಅನುಕೂಲವಾಗಿದೆ ಎಂದು ಸರಕಾರಕ್ಕೆ ತುಂಬ ಮನವರಿಕೆಯಾಗಿಬಿಟ್ಟಿತು. ಮಂಗಲ ಪಾಂಡೇನ ಕಾಲ್ದಳವು ಮೇ ೬ನೆಯ ತಾರೀಖಿಗೆ ವಿಸರ್ಜಿಸಲ್ಪಟ್ಟಿತು.

ಉತ್ತರ ಹಿಂದುಸ್ತಾನದ ಎಲ್ಲ ಠಾಣ್ಯಗಳಲ್ಲಿಯೂ ಸಿಪಾಯಿಪಠಗಳಲ್ಲಿ ಕಾಡತೂಸಿನ ಬಗ್ಗೆ ಇದೇ ಬಗೆಯ ಪ್ರತಿಕ್ರಿಯೆ ಕಂಡು ಬಂದಿತು. ಜಾತಿಭ್ರಷ್ಟರಾಗಲು ಒಪ್ಪದೆ ಕಾಡತೂಸಿಗೆ ವಿರೋಧಮಾಡಿ ಅಸಂಖ್ಯ ಸಿಪಾಯಿಗಳು ಶಿಕ್ಷೆಗೆ ಗುರಿಯಾದರು. ಮರಣದಂಡನೆಯಿಂದ ವಿಸರ್ಜನೆಯವರೆಗೆ ಎಲ್ಲ ಬಗೆಯ ಶಿಕ್ಷೆಯನ್ನು ಅನುಭವಿಸಿದರು. ಆದರೆ ಆಕ್ಷೇಪಾರ್ಹ ಕಾಡತೂಸನ್ನು ಯಾರೂ ಮುಟ್ಟಲಿಲ್ಲ. ಎಷ್ಟೋ ಕಡೆಗೆ ಸಿಪಾಯಿಗಳು ದೈನ್ಯದಿಂದ ಅಧಿಕಾರಿಗಳಿಗೆ ಹೇಳಿದರು, "ನಮಗೆ ಕಾಡತೂಸಿನಲ್ಲಿ ಆಕ್ಷೇಪಾರ್ಹವಾದದ್ದು ಏನೂ ಇಲ್ಲವೆಂಬುದು ಗೊತ್ತಿದೆ. ಆದರೆ ಜನರು ಈ ಕಥೆಯನ್ನು ಪೂರಾ ನಂಬಿಬಿಟ್ಟಿದ್ದಾರೆ. ಯಾವ ಆಕ್ಷೇಪವಿಲ್ಲದೆ ನಾವು ಉಪಯೋಗಿಸಿದರೆ ನಮ್ಮ ಸಹೋದ್ಯೋಗಿಗಳೆ ನಮ್ಮನ್ನು ಬಹಿಷ್ಕರಿಸುವರು. ಊರಿಗೆ ಹೋದರೆ ನಮ್ಮ ಮನೆಯವರು ನಮ್ಮೊಡನೆ ಮಾತನಾಡಲು ಸಹ ಹೆದರುತ್ತಾರೆ." ಎಲ್ಲ ಕಾಡತೂಸುಗಳು ಆಕ್ಷೇಪಾರ್ಹವಿಲ್ಲವೆಂಬುದು ಸಿಪಾಯಿಗೆ ಗೊತ್ತಿತ್ತು. ಆದರೆ ಸಾಮಾಜಿಕ ಬಹಿಷ್ಕಾರಕ್ಕೆ ಅವನು ಹೆದರುತ್ತಿದ್ದನು. ಹೀಗೆ ಸೌಮ್ಯಸ್ವರೂಪದಿಂದ ಹಲವು ಕಡೆ

ದುದನ್ನು ಅಧಿಕಾರಿಗಳು ಎಳ್ಳಷ್ಟೂ ಮನ್ನಿಸಲಿಲ್ಲ.

ಮೇ ತಿಂಗಳ ಮೊದಲನೆ ವಾರದಲ್ಲಿ ಮೀರತದಲ್ಲಿಯೂ ಸಿಪಾಯಿಗಳಲ್ಲಿ ಉದ್ವೇಗವುಂಟಾಯಿತು. ಹೊಸತಾಗಿ ಬಂದ ಎನ್‌ಫೀಲ್ಡ್ ರೈಫಲಗಳ ಉಪ-ಯೋಗವನ್ನು ಹೊಸ ರಿಕ್ರೂಟ ಜನರಿಗೆ ಕಲಿಸುವ ಒಂದು ಶಾಲೆಯನ್ನು ಇತ್ತೀಚೆಗೆ ಇಲ್ಲಿ ಸ್ಥಾಪನೆಮಾಡಲಾಗಿತ್ತು; ಮತ್ತು ಮೀರತದಲ್ಲಿ ಇಂಥ ಬಂಡಾಯವನ್ನು ಎದುರಿಸುವಷ್ಟು ಬಿಳಿಯ ಸೈನ್ಯವೂ ಇತ್ತು. ಆದರೂ ಮೀರತದ ಎಲ್ಲ ಸಿಪಾಯರೂ ಬೇಗನೆ ಬಂಡಾಯವನ್ನು ಹೂಡುವರೆಂದು ಎಲ್ಲ ಕಡೆಗೂ ದಟ್ಟ ವಾರ್ತೆಯಿತ್ತು. ಆಗ ಮೀರತದಲ್ಲಿ ಕರ್ನಲ್ ಸ್ಮಿಥ್ ಎಂಬುವವನ ಅಧಿಪತ್ಯದ ಕೆಳಗೆ ೩ನೆಯ ಹಿಂದೀ ಅಶ್ವದಳವು ಇತ್ತು. ಕರ್ನಲ್ ಸ್ಮಿಥ್‌ನು ಸ್ವಭಾವದಿಂದ ಬಹಳ ಮೊಂಡನಿದ್ದನು. ೨೩ನೆಯ ಎಪ್ರಿಲಕ್ಕೆ ಕರ್ನಲ್ ಸಾಹೇಬರು, ತಮ್ಮ ಕೈಕೆಳಗಿನ ಬೇರೆಬೇರೆ ಪಡೆಗಳ ಅಧಿಕಾರಿಗಳು ಮರುದಿನ ಕವಾಯಿತು ಮೈದಾನಿಗೆ ಬಂದು ಹೊಸ ಕಾಡತೂಸಿನ ಉಪಯೋಗವನ್ನು ಕಲಿತುಕೊಂಡು ಹೋಗತಕ್ಕದ್ದೆಂದು ಆಜ್ಞಾಪಿಸಿದರು. ಹೊಸ ರೈಫಲ್ಲುಗಳನ್ನಾಗಲಿ ಕಾಡತೂಸುಗಳನ್ನಾಗಲಿ ಸ್ಮಿಥ್‌ನ ಸವಾರರಿಗೆ ಇನ್ನೂ ಕೊಟ್ಟಿರಲಿಲ್ಲ. ಅವರು ಹೆಚ್ಚಾಗಿ ಮುಸಲ್ಮಾನರೇ ಇದ್ದರು. ಮರುದಿನದ ಕವಾಯಿತನ್ನು ಮುಂದೆ ಹಾಕಬೇಕೆಂದು ಕರ್ನಲ್ ಸ್ಮಿಥ್‌ನಿಗೆ ಅವನ ಸಹೋದ್ಯೋಗಿಗಳ ಸೂಚನೆ ಮಾಡಿದರು. ಕೆಲವು ಪಡೆಗಳು ತಮ್ಮ ಕಪ್ತಾನರಿಗೆ, ಪರಿಸ್ಥಿತಿಯು ಗಂಭೀರವಾಗಿದೆ, ಎಂದು ಒಟ್ಟಾಗಿ ಬಂದು ಹೇಳಿದ್ದರು. ಆದರೂ ಸ್ಮಿಥ್ ಹಟ ಹಿಡಿದೇ ಬಿಟ್ಟ. ಆಜ್ಞಾಪಿಸಿದ ಪ್ರಕಾರ ತೊಂಭತ್ತು ಅಧಿಕಾರಿ ಸವಾರರು ಕವಾಯಿತು ಮೈದಾನಿಗೆ ಬಂದರು. ಕರ್ನಲ್ ಸ್ಮಿಥ್ ಹೊಸಕಾಡತೂಸಿನ ಮೇಲೆ ಒಂದು ಭಾಷಣ ಬಿಗಿದ; ಎಂಭತ್ತೈದು ಮಂದಿ ಕಾಡತೂಸುಗಳನ್ನು ಕೈಯಿಂದ ಸಹ ಮುಟ್ಟಲಿಲ್ಲ!

ಎಪ್ರಿಲ್ ಕೊನೆಯವಾರ ಈ ಸವಾರರ ವಿಚಾರಣೆ ನಡೆಯಿತು. ಆರೋಪಿಗಳು ತಮ್ಮ ಮೇಲಿನ ಆರೋಪ ಒಪ್ಪಲಿಲ್ಲ. ಎಲ್ಲರಿಗೂ ಹತ್ತುವರ್ಷ ಸಶ್ರಮ ಶಿಕ್ಷೆಯಾಯಿತು. ಮುಂದೆ ಹನ್ನೊಂದು ಜನರ ಶಿಕ್ಷೆಯನ್ನು ಅವರ ವಯಸ್ಸಿನ ಮೂಲಕ ಸ್ವಲ್ಪ ಇಳಿಸಲಾಯಿತು.

ಮೇ ೯ನೆಯ ತಾರೀಖಿನ ದಿನ ಸಮಸ್ತ ಅಶ್ವದಳದ ಮುಂದೆ ಆರೋಪಿಗಳನ್ನು ಮೈದಾನಕ್ಕೆ ತರಲಾಯಿತು. ಅವರ ಸಮವಸ್ತ್ರಗಳನ್ನು ಕಸಿದುಕೊಳ್ಳ

ಲಾಯಿತು. ಇಡಿಯ ಅಶ್ವದಳವು ಈ ಅವಮಾನವನ್ನು ನೋಡುತ್ತ ಬಿಸಿಲಲ್ಲಿ ನಿಂತಿತ್ತು. ಅವರ ಅಂತರಂಗದಲ್ಲಿ ಎಷ್ಟು ಕಳವಳವಾಯಿತೋ ದೇವರೇ ಬಲ್ಲ! ಕೈದಿಗಳ ಕೈಕಾಲುಗಳಿಗೆ ಸಾವಧಾನದಿಂದ ಬೇಡಿಗಳನ್ನು ಹಾಕಲು ಆರಂಭವಾಯಿತು. ಸುಮಾರು ಒಂದು ಗಂಟೆ ಈ ಕಾರ್ಯವು ನಡೆದಿರಬೇಕು. ಇವರೆಲ್ಲರೂ ಶ್ರೇಷ್ಠ ಸೈನಿಕರಿದ್ದ ಮೂಲಕ ಅವರ ಮಿತ್ರರು ಈ ಅವಮಾನವನ್ನು ಕಂಡು ಬಹಳ ಹಳಹಳಿಸಿದರು. ಆದರೂ ಕವಾಯಿತು ಶಾಂತರೀತಿಯಿಂದ ಕೊನೆಗೊಂಡಿತು. ಎಷ್ಟೋ ಶೌರ್ಯಸಾಹಸಗಳಿಂದ ಗಳಿಸಿದ ಕೀರ್ತಿಗೆ ಈ ಕಲಂಕ ಅವಮಾನಗಳಾದದ್ದರಿಂದ ಕೈದಿಗಳ ಕಣ್ಣಲ್ಲಿ ನೀರು ಹರಿಯುವ ದೃಶ್ಯವು ಕರುಣಾಜನಕವಾಗಿತ್ತೆಂದು ಓರ್ವ ತರುಣ ಆಂಗ್ಲ ಸೈನಿಕನೆ ತನ್ನದೊಂದು ಬರಹದಲ್ಲಿ ಉಲ್ಲೇಖಿಸಿದ್ದಾನೆ. ( ಸೇನ ೫೮ ).

ಕೈದಿಗಳನ್ನು ಊರಲ್ಲಿ ಮೆರೆಸುತ್ತ ಊರೊಳಗಿನ ನಾಗರಿಕ ಸೆರೆಮನೆಗೆ ಒಯ್ಯಲಾಯಿತು. ಅಂದು ರಾತ್ರಿ ಮತ್ತು ಮರುದಿನ ಮುಂಜಾನೆ ಪರಿಸ್ಥಿತಿಯು ಶಾಂತವೇ ಇತ್ತು. ಬಂಡಾಯವು ಸಾಯಂಕಾಲ ಐದು ಘಂಟೆಗೆ ಸುರುವಾಗುವವರೆಗೆ ಊರಲ್ಲಿ ನಿತ್ಯದಂತೆ ಪೇಟೆ ನಡೆದಿತ್ತು. ಯಾರಿಗೂ ಮುಂಬರುವ ಅನಾಹುತದ ಕಲ್ಪನೆ ಇರಲಿಲ್ಲ.

ಸಾಯಂಕಾಲ ಐದುಗಂಟೆಗೆ ಬಂಡಾಯವು ಪ್ರಾರಂಭವಾಯಿತು! ಅದು ಹೇಗೆ ಪ್ರಾರಂಭವಾಯಿತು ಎಂಬುದು ಸ್ಪಷ್ಟವಿಲ್ಲ. ತೋಫು ಮತ್ತು ರೈಫಲ ದಳಗಳು ಶಸ್ತ್ರಾಗಾರದ ಕಡೆಗೆ ಹೊರಟಿವೆ ಎಂದು ಯಾರೋ ಕೂಗಿಕೊಂಡರು. ಹಾಯಾಗಿ ಕುಳಿತುಕೊಂಡ ಸಿಪಾಯಿಗಳು ಬೆಚ್ಚಿಬಿದ್ದರು. ತಮ್ಮ ಸಮಃವಸ್ತ್ರಗಳನ್ನು ಸಹ ಧರಿಸುವಷ್ಟು ಅವರಿಗೆ ಸಾವಧಾನವಿರಲಿಲ್ಲ. ೩ನೆಯ ಅಶ್ವದಳವು ನೇರವಾಗಿ ಸೆರೆಮನೆಗೆ ಹೋಗಿ ಮುಂಚಿನ ದಿನ ಸೆರೆಮನೆಯಲ್ಲಿಡಲಾದ ಎಂಭತ್ತೈದು ಕೈದಿಗಳನ್ನು ಬಿಡಿಸಿತು. ೨೦ನೆಯ ಕಾಲ್ದಳ, ೧೧ನೆಯ ಕಾಲ್ದಳಗಳೂ ಏನು ಮಾಡಬೇಕೆಂಬುದು ತಿಳಿಯದೆ ತಮ್ಮ ತಮ್ಮ ಶಸ್ತ್ರಗಳೊಡನೆ ಸನ್ನದ್ಧರಾದರು.

ಸೆರೆಮನೆಯಲ್ಲಿಯ ಎಂಭತ್ತೈದು ಕೈದಿಗಳೊಡನೆ ೧೦೦೦ ಸಾಮಾನ್ಯ ಕೈದಿಗಳೂ ಪಾರಾದರು. ಊರೊಳಗಿನ ಹಾಗೂ ನೆರೆಹೊರೆಯ ಗುಂಡಾ ಜನರೂ ಅವರನ್ನು ಕೂಡಿದರು. ಅಷ್ಟರಲ್ಲಿ ಕತ್ತಲಾಗಲು ಲೂಟಿಕೊಳ್ಳೆಗಳ ಅಧ್ಯಾಯವು ಪ್ರಾರಂಭವಾಯಿತು. ಸಿಪಾಯಿದಳಗಳು ಈ ಸಾರ್ವತ್ರಿಕ ಧ್ವಂಸದಲ್ಲಿ ಅಸ್ಥಿಪಹಿಸ

ಲಿಲ್ಲ. ಅವರು ತಮ್ಮ ಕೃತಿಗಳ ಪರಿಣಾಮವೇನಾಗುವದೋ ಎಂಬ ಬಗ್ಗೆ ತಾವೇ ಹೆದರಿಬಿಟ್ಟಿದ್ದರು. ಹಾಗೆ ಹೆದರಲು ಸಾಕಷ್ಟು ಕಾರಣವೂ ಇತ್ತು. ನದಿಯಾಚೆಗೆ ಯುರೋಪಿಯನ್ ಸೈನ್ಯ ತುಂಬಾ ಇತ್ತು. ಆದ್ದರಿಂದ ಬಂಡಾಯಮಾಡಿದ ಸಿಪಾಯಿಗಳು ಲಗುಬಗೆಯಿಂದ ಊರು ಬಿಡಹತ್ತಿದರು. ೧೧ನೆಯ ಕಾಲ್ದಳದ ಕರ್ನಲ್ ಫಿನಿಸ್ ಎಂಬುವವನು ಓರ್ವ ಸಿಪಾಯಿಯ ಗುಂಡಿಗೆ ಆಹುತಿಯಾದನು. ಇದರ ಹೊರತಾಗಿ ಬಿಳಿಯ ಸೈನ್ಯಾಧಿಕಾರಿಗಳು ವಿಶೇಷತಃ ಯಾರೂ ತಮ್ಮ ಸಿಪಾಯಿಗಳ ಕೈಯಿಂದ ಸಾಯಲಿಲ್ಲ. ಊರೊಳಗಿನ ಲೂಟಿಯಲ್ಲೂ ಅವರು ಭಾಗವಹಿಸಲಿಲ್ಲ. ಆಫೀಸರರ ಬಂಗ್ಲೆಗಳಿಗೆ ಮಾತ್ರ ಬೆಂಕಿ ಇಟ್ಟರು.

ಕೆಲವು ಬಿಳಿಯ ನಾಗರಿಕರು ಈ ಗಲಭೆಯಲ್ಲಿ ಕೊಲ್ಲಲ್ಪಟ್ಟರು. ಆದರೆ ಮತ್ತೆ ಕೆಲವರನ್ನು ಸ್ವಾಮಿನಿಷ್ಠ ಸೇವಕರು ಮತ್ತು ಸಿಪಾಯಿಗಳು ಕಾಪಾಡಿದರು. ಮೆಕೆಂಝಿ ಎಂಬ ಅಧಿಕಾರಿಯು ಮನೆಯಲ್ಲಿಯ ಸ್ತ್ರೀಯರ ಗತಿಯೇನಾಗಿದೆ ಯೆಂದು ನೋಡಲು ಓಡಿ ಬರುವಷ್ಟರಲ್ಲಿ ಜನಜಂಗುಳಿ ಮನೆಗೆ ಸುತ್ತುಗಟ್ಟಿ ಕೊಳ್ಳೆಯಿಡುವ ಸಿದ್ಧತೆ ನಡೆಸಿತ್ತು. ಅವನು ಧೈರ್ಯದಿಂದ ಒಳಗೆ ಹೋಗಿ ಹೆಂಗಸರನ್ನು ಅಲ್ಲಿದ್ದ ಸಿಪಾಯರಿಗೆ ಒಪ್ಪಿಸಿ ಇವರ ಸಂರಕ್ಷಣೆಯು ನಿಮ್ಮ ಜವಾಬ್ದಾರಿ ಎಂದು ಹೇಳಿದನು. ಸಿಪಾಯರು ಹೆಂಗಸರಿಗೆ ವಂದಿಸಿ ಹೊರಟು ಹೋದರು ! ( ಸೇನ ೬೩ ).

ಮೀರತ ಠಾಣ್ಯದ ಅಧಿಪತಿಯಾದ ಜನರಲ್ ಹ್ಯೊವಿಟ್‌ನು ಒಮ್ಮೆಲೆ ಗಾಬರಿಯಾಗಿಬಿಟ್ಟನು. ಇಂಗ್ಲೀಷ ಇತಿಹಾಸಕಾರರು ಅವನ ವರ್ತನವನ್ನು ಇನ್ನೂ ಟೀಕಿಸುತ್ತಿದ್ದಾರೆ. ಎಪ್ರಿಲ ೨೩ಕ್ಕೆ ತೊಂಭತ್ತು ಸವಾರರನ್ನು ಕವಾಯಿತಿಗೆ ಕರೆದ ಕರ್ನಲ್ ಸ್ಮಿಥ್‌ನೂ ನಾಪತ್ತೆಯಾಗಿದ್ದ ! ಅಂದು ರಾತ್ರಿ ಬಿಳಿಯ ಸೈನ್ಯವು ಯಾರ ಮೇಲೆಯೂ ಶಸ್ತ್ರವನ್ನೆತ್ತದೆ ಇದ್ದುದು ಬಂಡಾಯದ ಇತಿಹಾಸದಲ್ಲಿಯೇ ಒಂದು ಅತ್ಯಾಶ್ಚರ್ಯದ ವಿಷಯವಾಗಿದೆ. ಈ ಪ್ರಮಾಣದ ಬಂಡಾಯದ ಅನುಭವವು ಭಾರತದಲ್ಲಿ ಕಂಪನಿ ಅಧಿಕಾರಿಗಳಿಗೆ ಬಂದುದೇ ಇದು ಮೊದಲುಸಾರೆಯಾದ್ದರಿಂದ ಹೀಗಾಯಿತೇನೊ. ಎಪ್ಪತ್ತು ವರ್ಷದ ವಯೋವೃದ್ಧ ಹ್ಯೊವಿಟ್‌ನು ಎದೆಗುಂದಿ ಭ್ರಾಂತನಾಗಿ ತನ್ನ ಅನುಯಾಯಿಗಳನ್ನೆಲ್ಲ ಮೈದಾನದಲ್ಲಿ ಕೂಡಿಸಿ ಇಡಿಯ ರಾತ್ರಿಯನ್ನು ಬಯಲಲ್ಲಿಯೇ ಕಳೆದ ! ದಿಲ್ಲಿಯ ಮಾರ್ಗವಾಗಿ ಹೊರಟ ಸಿಪಾಯಿಗಳನ್ನು ಅವನು ಬೆನ್ನಟ್ಟಿ ಹೋಗಿದ್ದರೆ ಅವರನ್ನು ದಿಲ್ಲಿಯನ್ನು ಮುಟ್ಟುವದರೊಳಗೆ ಚದುರಿಸುವದು ಸಾಧ್ಯವಿತ್ತು.

ಹೀಗೆ ಮಾಡಿದ್ದರೆ ಬಂಡಾಯದ ಇತಿಹಾಸವೇ ಬದಲಾಗುತ್ತಿತ್ತು. ಇತ್ತ ರಾತ್ರಿಯೆಲ್ಲ ಊರನ್ನು ಸಂರಕ್ಷಣೆ ಮಾಡುವ ಗೊಡವೆಗೂ ಅವನು ಹೋಗಲಿಲ್ಲ. ಬಂಡಾಯದಲ್ಲಿ ಸೇರಿದ ಎಲ್ಲ ಸಿಪಾಯಿಗಳೂ ದಿಲ್ಲಿಗೆ ಹೋಗಲಿಲ್ಲ. ಕೆಲವರು ಅತ್ತಿತ್ತ, ತಮಗೆ ತಿಳಿದಲ್ಲಿ ಹೊರಟುಹೋದರು. ದಿಲ್ಲಿಯೇ ಅವರಿಗೆ ಅತಿ ಸಮೀಪವಾದ ಆಶ್ರಯವಾಗಿತ್ತು. ಆದರೆ ದಿಲ್ಲಿಯ ಸಿಪಾಯಿಗಳು ತಮ್ಮನ್ನು ಕೂಡಿದರೆ ಮಾತ್ರ ತಮ್ಮ ದಿಲ್ಲಿಯಾತ್ರೆ ಸಾರ್ಥಕವಾಗುವದು ಎಂಬುವದು ಅವರಿಗೆ ಗೊತ್ತಿತ್ತು.

ಮೀರತ ಘಟನೆಗಳನ್ನು ಸೂಕ್ಷ್ಮವಾಗಿ ಪರಿಶೀಲನೆ ಮಾಡಿದರೆ ಅದರಲ್ಲಿ ಆಕಸ್ಮಿಕ ಅಂಶಗಳೇ ಹೆಚ್ಚಾಗಿವೆ. ಮೊದಲು ಮೀರತ ಸಿಪಾಯಿಗಳು ವಿಧ್ವಂಸಕ ಮತ್ತು ಘಾತಕ ಚಟುವಟಿಕೆಗಳಿಗೆ ಪ್ರಸಿದ್ಧಿಪಡೆದಿರಲಿಲ್ಲ. ಕರ್ನಲ್ ಸ್ಮಿಥ್‌ನ ಉದ್ದಾಮತನವನ್ನು ಸಹ ಅವರು ಬಹಳ ಸಮಾಧಾನದಿಂದ ಸಹಿಸಿಕೊಂಡಿದ್ದಾರೆ. ಮೇ ೯ರ ಅವಮಾನವಾದ ನಂತರ ಸಹ ಏನಾದರೂ ಮಾಡಿ ಕೈದಿನಲ್ಲಿ ಬಿದ್ದ ತಮ್ಮ ಎಂಭತ್ತೈದು ಸವಾರರನ್ನು ಮುಕ್ತಮಾಡಬೇಕು ಎಂಬ ಒಂದೇ-ಒಂದು ಉದ್ದೇಶ ಅವರಿಗೆ ಇದ್ದಿರಬೇಕು. ತಮ್ಮ ಕೃತಿಯಿಂದ ದೇಶಕ್ಕೆಲ್ಲ ಉರಿ ತಗಲುವದೆಂದು ಅವರು ತಿಳಿದಿದ್ದರೊ ಇಲ್ಲವೊ.

ಮೇ ೧೦ರ ನಂತರ ಬಂಡಾಯವೆದ್ದ ಅನೇಕ ಠಾಣ್ಯಗಳಲ್ಲಿ ಇದೇ ಇತಿಹಾಸದ ಪುನರಾವೃತ್ತಿಯಾಯಿತು.

ಧರ್ಮಭ್ರಷ್ಟತೆಗೆ ಒಪ್ಪಬೇಕೋ ಅಥವಾ ಬಂಡಾಯ ಹೂಡಬೇಕೋ ಎಂಬ ಉಭಯಸಂಕಟದ ಮೂಲಕ ಸಿಪಾಯಿಗೆ ಬಂಡಾಯದ ಹೊರತು ಗತಿಯೇ ಇಲ್ಲದಾಯಿತು. ಆಂಗ್ಲ ಅಧಿಕಾರಿ ಮತ್ತು ಹಿಂದೀ ಸಿಪಾಯಿ ಇವರಲ್ಲಿ ಪ್ರೇಮಾದರಗಳ ಬದಲು ಭಯಸಂದೇಹಗಳು ಉತ್ಪನ್ನವಾಗಿಬಿಟ್ಟಿದ್ದವು. ಠಾಣ್ಯದಲ್ಲಿ ಏನೇ ನಡೆದರೂ ಸಿಪಾಯಿಗಳು ತಮ್ಮತಮ್ಮೊಳಗೆ ಚರ್ಚೆಯನ್ನು ಮಾಡುತ್ತಿದ್ದರೆ ಹೊರತು ಮೇಲಧಿಕಾರಿಗಳ ಸಮೀಪಕ್ಕೆ ಸಹ ಹೋಗುತ್ತಿರಲಿಲ್ಲ. ಕೆಲವು ವಿಷಯಗಳು ಎಲ್ಲರಿಗೂ ಗೊತ್ತಿರುತ್ತಿದ್ದವು; ಆದರೆ ಒಬ್ಬನೂ ಬಾಯಿಬಿಚ್ಚಿ ಹೇಳುತ್ತಿರಲಿಲ್ಲ, ಕೇಳುತ್ತಿರಲಿಲ್ಲ. ಅತ್ತ ಆಂಗ್ಲ ಅಧಿಕಾರಿಗಳೂ ಏನೂ ಅರಿಯದವರಂತೆ ತಮ್ಮ ಕೆಲಸಗಳಲ್ಲಿ ತೊಡಗಿರುತ್ತಿದ್ದರು.

ಬೇಕಾದವರೂ ಬೇಡಾದವರೂ ಬಂಡಾಯದಲ್ಲಿ ಬೀಳಲೆ ಬೇಕಾದ ಪ್ರಸಂಗ ಒದಗಿದ ಒಂದು ದುರ್ದೈವಿ ಕಾಲವದು. ಎಷ್ಟೋ ಸಲ ಪ್ರಾಮಾಣಿಕ

ಅಭಿಪ್ರಾಯಗಳಿಗಾಗಿ ವಿಸರ್ಜನೆ, ನಿಃಶಸ್ತ್ರೀಕರಣ ಈ ಶಿಕ್ಷೆಗೊಳಗಾಗುವ ಪ್ರಸಂಗವು ಬಂದಿತೆಂದರೆ ಆ ಅವಮಾನಕ್ಕಿಂತ ಬಂಡಾಯವೇ ಲೇಸು ಎಂದು ಸಿಪಾಯಿಯು ಬಂಡಾಯ ಸೇರಿದ್ದುಂಟು. ತಮ್ಮಲ್ಲಿ ಕೆಲವರು ಕೊಲೆಕೊಳ್ಳಿಗಳ ಕೆಲಸ ಮಾಡಿದರೆಂದರೆ ಇನ್ನು ಯಾರಿಗೂ ಉಗ್ರ ಶಿಕ್ಷೆ ತಪ್ಪಿದ್ದಲ್ಲವೆಂದು ಭಯ ಗೊಂಡು ಸಿಪಾಯಿಗಳು ಬಂಡಾಯ ಸೇರಿದ್ದೂ ಉಂಟು. ಮೀರತದಲ್ಲಿ ೧೧ನೆಯ ಕಾಲ್ದಳವು ತನ್ನ ಕರ್ನಲ್ಲನ ಕೊಲೆಯಾಗುವವರೆಗೆ ಬಂಡಾಯದ ಕಡೆಗೆ ಹೊರಳಿ ಸಹ ನೋಡಿರಲಿಲ್ಲ; ಬಳಿಕ ನಿರುಪಾಯರಾಗಿ ಅವರು ಬಂಡಾಯ ಸೇರಿದರು.

ಒಮ್ಮೊಮ್ಮೆ ಸಿಪಾಯಿಗಳನ್ನು ನಿಃಶಸ್ತ್ರಗೊಳಿಸಲು ಅವರ ಮುಂದೆ ಬಿಳಿಯ ಸೈನ್ಯವನ್ನು ಮತ್ತು ತೋಫುಗಳನ್ನು ತಂದು ನಿಲ್ಲಿಸಲಾಗುತ್ತಿತ್ತು. ನಿಃಶಸ್ತ್ರ ಗೊಳಿಸುವಾಗ ಯಾವ ಸಿಪಾಯಿಯಾದರೂ ಸ್ವಲ್ಪ ಅಲುಗಾಡಿದರೆ ಗುಂಡಿನ ಸುರಿಮಳೆಯೆ ನಡೆಯುತ್ತಿತ್ತು. ಇಂಥ ಪ್ರಸಂಗ ಬರುವ ಮುನ್ನವೆ ಎಷ್ಟೋ ಸಲ ಹಲವಾರು ಸಿಪಾಯರು ಬಂಡಾಯ ಸೇರಿಬಿಟ್ಟರು

ಮೀರತದಲ್ಲಿ ಬಂಡಾಯಮಾಡಿದ ೩ನೆಯ ಅಶ್ವದಳದ ನಾಯಕತ್ವದಲ್ಲಿ ೧೧ನೆಯ ಕಾಲ್ದಳ ಮೊದಲಾದವುಗಳ ಸಿಪಾಯರು ದಿಲ್ಲಿಗೆ ಹೊರಟರು. ದಿಲ್ಲಿಯ ವರು ಅವರನ್ನು ಕೂಡಿಕೊಂಡ ರೀತಿಯನ್ನು ನೋಡಿದರೆ ಒಂದು ಪೂರ್ವ ಯೋಜಿತ ಒಳಸಂಚು ಸಿದ್ಧವಾಗದಿದ್ದರೂ ಬೇರೆ ಬೇರೆ ಠಾಣ್ಯಗಳ ಸಿಪಾಯಿಗ ಳಲ್ಲಿ ಬಂಡಾಯದ ಬಗ್ಗೆ ಚರ್ಚೆ ಪತ್ರವ್ಯವಹಾರಗಳು ನಡೆಯುತ್ತಿರಲೇಬೇಕು ಎನ್ನುವಂತಿದೆ. ಆಕ್ಷೇಪಾರ್ಹ ಪತ್ರವ್ಯವಹಾರಗಳು ಬಂಡಾಯದ ನಂತರ ನಡೆದ ಶೋಧಕಾರ್ಯದಲ್ಲಿ ದೊರೆತಿವೆ. ಅದರಿಂದ ಎಲ್ಲ ಕಡೆಯ ಸಿಪಾಯಿಗಳ ಮನಸ್ಸು ಬಂಡಾಯಕ್ಕೆ ತಯಾರಾಗಿಬಿಟ್ಟಿತ್ತು ಎಂಬುದು ಸಿದ್ಧವಾಗುವದು. ಬಂಡಾಯದ ಬೇಗೆಯು ಒಣಹುಲ್ಲಿಗೆ ಹತ್ತಿದ ಬೆಂಕಿಯಂತೆ ಮೀರತದಿಂದ ಬಿಹಾರದ ವರೆಗೆ ಹಬ್ಬಿಕೊಂಡಿತು. ಸಿಪಾಯಿಗಳ ಸಿದ್ಧತೆಯಿಲ್ಲದೆ ಹೀಗೆ ಹಬ್ಬುವದು ಶಕ್ಯವೇ ಇರ ಲಿಲ್ಲ.

# ಎಂಟನೆಯ ಅಧ್ಯಾಯ

## ದಿಲ್ಲಿಯಲ್ಲಿ ಬಾದಶಾಹಿ

**ಮ**ರುದಿನ ಮುಂಜಾನೆ ಮೀರತ ಬಂಡುಗಾರರು ದಿಲ್ಲಿಯ ಹತ್ತಿರದ ಯಮುನಾ ನದಿಗೆ ಬಂದು ತಲುಪಿದರು. ಆದುವರೆಗೆ ದಿಲ್ಲಿಯ ಜನರಿಗೆ ಮುಂದಿರುವ ಅನಾಹುತದ ಯಾವ ಕಲ್ಪನೆ ಕೂಡ ಇರಲಿಲ್ಲ. ದಿಲ್ಲಿಯ ಕೆಂಪುಕೋಟೆಯಲ್ಲಿ ಆಗ ಮೊಗಲರ ಕೊನೆಯ ಬಾದಶಹನಾದ ಎರಡನೆಯ ಬಹದ್ದೂರಶಹನು ಇರುತ್ತಿದ್ದನು. ಬಹದ್ದೂರಶಹನು ೧೮೩೭ರಲ್ಲಿ ಸಿಂಹಾಸನಕ್ಕೆ ಬರುವಷ್ಟರಲ್ಲಿಯೆ ಮುದುಕನಾಗಿದ್ದನು. ೧೮೫೭ರಲ್ಲಿ ಅವನು ತೀರಾ ಮುಪ್ಪಾಗಿದ್ದನಲ್ಲದೆ ಕಂಪನಿ ಸರಕಾರದ ಪೆನ್ಶನ್ ಪಡೆಯುತ್ತ ಸ್ವಸ್ಥವಾಗಿದ್ದನು.

ಬಹದ್ದೂರಶಹನು ಸ್ವಭಾವದಿಂದ ಉತಾವಳಿಯಾಗಿರಲಿಲ್ಲ. ಅವನಿಗೆ ಸಾಹಿತ್ಯದಲ್ಲಿ ತುಂಬಾ ಆಸ್ಥೆಯಿದ್ದು ಸ್ವತಃ ಕವಿಯಾಗಿದ್ದನು. ಬಂಡಾಯದ ಕೊನೆಯಾದ ಮೇಲೆ ತನ್ನ ಕೆಲವು ಕವಿತೆಗಳಲ್ಲಿ ಅವನು ತನ್ನ ಅಂತರಂಗವನ್ನೇ ಸೂರೆ ಮಾಡಿದ್ದಾನೆ. ಬಹದ್ದೂರಶಹನಿಗೆ ತಾನಿರುವ ಕೋಟೆಯಾಚೆ ಯಾವ ರಾಜ್ಯಾಂಶವೂ ಉಳಿದಿರಲಿಲ್ಲ. ಕೋಟೆಯಲ್ಲಿ ಕಾಲಿಟ್ಟರೆ ಮಾತ್ರ ಹಿಂದಿನ ರಾಜ್ಯ ವೈಭವವು ನೆನಪಾಗುತ್ತಿತ್ತು. ದಿವಾಣ–ಇ–ಖಾಸದಲ್ಲಿ ಬಾದಶಹನ ದರ್ಬಾರವು ಮೊದಲಿನಂತೆ ನಡೆಯುತ್ತಿತ್ತು. ಕಂಪನಿ ಸರಕಾರವೇ ಬಾದಶಹನ ದಿವಾಣಿ ಹಕ್ಕುಗಳನ್ನೆಲ್ಲ ಸಂಪಾದನೆ ಮಾಡಿದ್ದರಿಂದ ಅರಮನೆಯ ವ್ಯವಸ್ಥೆಯೂ ಕಂಪನಿಯ ಅಧಿಕಾರಿಗಳಿಗೇ ಸೇರಿರುತ್ತಿತ್ತು. ಬಾದಶಹನೇ ಭಾರತದ ಸಾರ್ವಭೌಮನೆಂದು ಜನರು ೧೮೫೭ರ ವರೆಗೆ ತಿಳಿದಿದ್ದರಿಂದ ಕಂಪನಿಯು ಬಾದಶಹನಿಗೆ ಅವಮರ್ಯಾದೆ ಮಾಡಲು ಹೆದರುತ್ತಿತ್ತು. ಗವರ್ನರ ಜನರಲ್ಲರು ಕಾಣಿಕೆ ಇಲ್ಲದೆ ದಿವಾಣ–ಇ–ಖಾಸದಲ್ಲಿ ಕಾಲಿಡುತ್ತಿರಲಿಲ್ಲ; ಹೊರಗೆ ಬೂಟು ತೆಗೆದಿಟ್ಟು ಒಳಗೆ ಹೋಗುತ್ತಿದ್ದರು; ಮಾಂಡಲಿಕರಂತೆ ಮುಜುರೆ ಮಾಡಿ ಅಪ್ಪಣೆ ದೊರೆಯುವವರೆಗೆ ಕೂಡ್ರುತ್ತಿರಲಿಲ್ಲ !

ಬಾದಶಹನ ವೈಭವವನ್ನು ಕಾಯುವ ಔಧ ನವಾಬರು, ಪೇಶ್ವೆಯರು,

ಇಂಗ್ಲೀಷರಿಗೆ ಬಲಿಯಾಗಿದ್ದ ಮೂಲಕ ಮೊಗಲ ದರ್ಬಾರದ ಕಳೆಯು ಎಷ್ಟೋ ಕುಂದಿತ್ತು. ಇಂಗ್ಲೀಷರು ಲೋಕಾಭಿಪ್ರಾಯಕ್ಕೆ ಹೆದರಿದ್ದರೂ ಬಾದಶಹನನ್ನು ಕೆಂಪುಕೋಟೆಯಿಂದ ಹೇಗೆ ತಳ್ಳಬೇಕು ಎಂಬ ಚಿಂತೆ ಮಾಡಹತ್ತಿದ್ದರು. ದಿವಾಣರಿಗಿಂತ ಹೆಚ್ಚಿನ ಮರ್ಯಾದೆ ಮಾಡಲು ಬಹದ್ದೂರಶಹನು ನಿರಾಕರಿಸಲು ಕಂಪನಿ ಸರಕಾರವು ಪ್ರತೀಕಾರವೆಂದು ಸ್ವತಂತ್ರ ನಾಣ್ಯಚಲಾವಣೆಯನ್ನು ಮಾಡಿತು. ಹಿಂದುಸ್ಥಾನದಲ್ಲಿ ಇದುವರೆಗೆ ಈ ಹೆಜ್ಜೆಯನ್ನು ಯಾರೂ ಇಟ್ಟಿರಲಿಲ್ಲ. ಜನರು ತಾವಾಗಿಯೇ ಮೊಗಲಸಿಂಹಾಸನಕ್ಕೆ ಒಂದು ಘಟನಾತ್ಮಕ ಪ್ರಭುತ್ವವನ್ನು ಕಲ್ಪಿಸಿಕೊಟ್ಟಿದ್ದರು.

ಮೊಗಲ ಬಾದಶಹನ ಬಗ್ಗೆ ಜನರಲ್ಲಿ ಇರುವ ಅಭಿಮಾನ ಮತ್ತು ನಿಷ್ಠೆಗಳಿಂದ ಇಂಗ್ಲೀಷರಿಗೆ ಬಹಳ ಸಂಕಟವಾಗಿತ್ತು. ಮುಂದಾದರೂ ಒಮ್ಮೆ ಇದರಿಂದ ತಮಗೆ ಗಂಡಾಂತರವಿದೆಯೆಂದು ಅವರು ಲೆಕ್ಕಹಾಕಿದ್ದರು. ಬಹದ್ದೂರ ಶಹನ ಕೊನೆಯ ಹೆಂಡತಿ ಬೇಗಮ ಜಿನ್ನತಮಹಾಲಳು ಇನ್ನೂ ತರುಣಿಯೂ ಸುಂದರಳೂ ಆಗಿದ್ದು ಬಾದಶಹನ ಮೇಲೆ ಅವಳ ವರ್ಚಸ್ಸು ಬಹಳವಿತ್ತು. ಜಿನ್ನತಮಹಾಲಳಿಗೆ ಜವಾನ ಬಖ್ತ ಎಂಬ ಒಬ್ಬ ರಾಜಕುಮಾರನಿದ್ದನು. ಇವನು ಎಲ್ಲಕ್ಕೂ ಚಿಕ್ಕವನಿದ್ದರೂ ಇವನಿಗೆ ಪಟ್ಟಕಟ್ಟಬೇಕೆಂದು ಜಿನ್ನತಮಹಾಲಳು ಇಂಗ್ಲೀಷರ ಕೂಡ ಗುಪ್ತಕಾರಸ್ಥಾನ ನಡೆಸಿದ್ದಳು. ಇದಕ್ಕೆ ಬಾದಶಹನ ಬೆಂಬಲವೂ ಇತ್ತು. ಆದರೆ ಕಂಪನಿಸರಕಾರಕ್ಕೆ ಯಾರಿಗೂ ಪಟ್ಟಕಟ್ಟುವದು ಬೇಕಾಗಿರಲಿಲ್ಲ. ಡಾಲಹೌಸಿಯು ಏನಾದರೊಂದು ನೆವದ ದಾರಿಕಾಯುತ್ತ ಕುಳಿತಿದ್ದನು. ಬಹದ್ದೂರಶಹನನ್ನೆ ಅರಮನೆ ಬಿಡಿಸಬೇಕೆಂದು ಕಂಪನಿ ಅಧಿಕಾರಿಗಳಲ್ಲಿ ಪತ್ರವ್ಯವಹಾರವು ನಡೆದಿತ್ತು. ಆದರೆ ಡೈರೆಕ್ಟರ್ ಮಂಡಲ ಮತ್ತು ಕಂಟ್ರೋಲ್ ಬೋರ್ಡಗಳಲ್ಲಿ ಈ ಬಗ್ಗೆ ಒಮ್ಮತವಾಗದ್ದರಿಂದ ಬಹದ್ದೂರಶಹನು ಮರಣಹೊಂದುವವರೆಗೆ ಏನೂ ಮಾಡತಕ್ಕದ್ದಲ್ಲವೆಂದು ನಿರ್ಧರಿಸಲಾಗಿತ್ತು. ಇಂಗ್ಲೀಷರ ಕುಟಿಲನೀತಿಯು ಇಲ್ಲಿಗೇ ಮುಗಿದಿರಲಿಲ್ಲ. ಬಹದ್ದೂರಶಹನ ಹಿರಿಯ ರಾಜಕುಮಾರರಲ್ಲಿ ಫಕರುದ್ದೀನ ಎಂಬುವವನೊಡನೆ ದಿಲ್ಲಿಯಲ್ಲಿಯ ಬ್ರಿಟಿಶ್ ರೆಸಿಡೆಂಟನು ಗುಪ್ತ ಸಂಧಾನವನ್ನು ನಡೆಸಿದ್ದನು. ಬಹದ್ದೂರಶಹನ ಮರಣದ ನಂತರ ಕೆಂಪುಕೋಟೆಯನ್ನು ಖಾಲಿಮಾಡುವದಾದರೆ ಅವನಿಗೇ ಮೊಗಲ ವೈಭವದ ವಾರಸದಾರನೆಂದು ಮನ್ನಣೆ ಕೊಡುವದಾಗಿ ರೆಸಿಡೆಂಟಸಾಹೇಬರು ಅವನಿಗೆ ತಿಳಿಸಿದ್ದರು. ಅವರವರ ನಡುವೆ ಒಡಂಬಡಿಕೆಯಾಗಿದ್ದನ್ನು ತಿಳಿದು ಜಿನ್ನತಮಹಾಲಳಿಗೆ ಬಹಳ ಸಿಟ್ಟುಬಂದಿತು.

ಆದರೆ ದುರ್ದೈವದಿಂದಲೋ ಸುದೈವದಿಂದಲೋ ಫಕರುದ್ದೀನನೂ ೧೮೫೬ರಲ್ಲಿ ಸತ್ತುಹೋದನು.

ವೃದ್ಧಾಪ್ಯದಿಂದ ಬಹದ್ದೂರಶಹನು ಅಧೀರನಾಗಿದ್ದನು. ಅವನಲ್ಲಿ ಧೈರ್ಯ ದಿಟ್ಟತನಗಳಾಗಲಿ, ಅಭಿಮಾನ ಗರ್ವಗಳಾಗಲಿ ಉಳಿದಿರಲೇ ಇಲ್ಲ. ಕಂಪನಿ ಸರಕಾರದಂಥ ಬಲಾಢ್ಯ ಸರಕಾರದ ವಿರುದ್ಧ ಒಳಸಂಚು ನಡೆಸುವದು ಅವನಿಗೆ ಕಲ್ಪನೆ ಮೀರಿದ ಮಾತಾಗಿತ್ತು. ಆದರೂ ಇಂಗ್ಲೀಷರ ಬಗ್ಗೆ ಅವನ ಅಂತರಂಗವು ಧಗಧಗಿಸುತ್ತಿತ್ತು. ಹೊಟ್ಟೆಯಲ್ಲಿಯ ಸಿಟ್ಟು ರಟ್ಟೆಯಲ್ಲಿಲ್ಲದೆ ಸುಮ್ಮನಾಗಿದ್ದನು.

ಮೀರತದಲ್ಲಿ ಬಂಡಾಯ ಹೂಡಿದವರು ದಿಲ್ಲಿಗೆ ಬಂದಾಗ ದಿಲ್ಲಿಯಲ್ಲಿ ಯುರೋಪಿಯನ್ ಸೈನ್ಯವೇ ಇರಲಿಲ್ಲ! ಯುರೋಪಿಯನ್ ಮತ್ತು ಹಿಂದೀ ದಳಗಳನ್ನು ಎಲ್ಲ ಬ್ರಿಟಿಶ್ ಠಾಣ್ಯಗಳಲ್ಲಿ ಪ್ರಮಾಣಯುಕ್ತವಾಗಿ ಹಂಚಿಡುವ ದೂರದೃಷ್ಟಿಯನ್ನು ಕಂಪನಿ ಸರಕಾರವು ತೋರದೆ ಇದ್ದದಕ್ಕೆ ಬಂಡಾಯದ ದಂಡವನ್ನು ತೆತ್ತುವ ಪ್ರಸಂಗವು ಬಂದಿತು. ಹೊಸಹೊಸ ರಾಜ್ಯಗಳನ್ನಾಕ್ರಮಿಸುವ ಲಾಲಸೆಯಿಂದ ಕಂಪನಿಸರಕಾರವು ತನಗೆ ಬರಬಹುದಾದ ಭಾವೀ ಗಂಡಾಂತರಗಳನ್ನು ಲೆಕ್ಕಿಸದೆ ಹಿಂದೀ ಸೈನ್ಯದ ಸಂಖ್ಯೆಯನ್ನು ಮಿತಿಮೀರಿ ಬೆಳೆಸಿಬಿಟ್ಟಿತ್ತು.

ಬಂಡುಗಾರರು ದಿಲ್ಲಿಯ ಮಾರ್ಗವಾಗಿ ಬರುವಾಗ ಮೀರತದಲ್ಲಿ ತಂತಿಸಂಪರ್ಕವನ್ನು ನಾಶಗೊಳಿಸಿದ್ದರು. ೧೧ನೆಯ ದಿನಾಂಕ ಮುಂಜಾನೆ ಮೀರತದ ಸಂಪರ್ಕವು ಯಾಕೆ ಕೆಟ್ಟಿದೆ ಎಂದು ನೋಡಲು ಊರಹೊರಗೆ ಬಂದ ದಿಲ್ಲಿಯ ಯುರೋಪಿಯನ್ ಟೆಲಿಗ್ರಾಫ ಅಧಿಕಾರಿಯೇ ಮೊದಲು ಬಂಡುಗಾರರಿಗೆ ಆಹುತಿ ಬಿದ್ದನು. ಊರಲ್ಲಿ ಎಲ್ಲವೂ ಇನ್ನೂ ನಿಧಾನವಾಗಿತ್ತು. ಬಂಡುಗಾರರು ನೌಕಾಸೇತುವೆ ಸಹಾಯದಿಂದ ಯಮುನಾನದಿಯನ್ನು ದಾಟಿ ಕೆಂಪುಕೋಟೆಯ ಬಾಗಿಲಿಗೆ ಬಂದೊಡನೆ ಅರಮನೆಯಲ್ಲಿ ಗಡಿಬಿಡಿಯೆದ್ದಿತು. ಇದನ್ನೆಲ್ಲ ನೋಡಿ ಅರಮನೆಯ ಸಂರಕ್ಷಕ ದಳಗಳ ಸಿಪಾಯರಿಗೆ ತುಂಬಾ ಕುತೂಹಲವಾಯಿತು. ಬಹದ್ದೂರಶಹನು ಭಯಪಟ್ಟು ಅಂತಃಪುರ ಸೇರಿದನು. ಅರಮನೆಯ ವ್ಯವಸ್ಥಾಪಕನಾಗಿದ್ದ ಕ್ಯಾಪ್ಟನ್ ಡಗ್ಲಸನು ಬಂಡುಗಾರರಿಗೆ ಚದುರಲು ಹೇಳಿ ಎಲ್ಲ ಹೆಬ್ಬಾಗಿಲುಗಳನ್ನು ಮುಚ್ಚಿಸಿದನು.

ದಿಲ್ಲಿಯಲ್ಲಿಯ ಸಿಪಾಯಿದಳಗಳಲ್ಲಿಯೂ ಬಂಡಾಯದ ಬೀಜವನ್ನು ಈಗಾಗಲೆ ಬಿತ್ತಲಾಗಿತ್ತು. ಮೀರತದ ವಾತಾವರಣ ಅವರಿಗೆ ಪೂರಾ ತಿಳಿದಿತ್ತು. ಹೊಸ ಕಾಡತೂಸುಗಳನ್ನು ಅಲ್ಲಿಯೂ ಅನೇಕರು ನಿರಾಕರಿಸಿ ಸಂತಪ್ತರಾಗಿದ್ದರು.

ಯುರೋಪಿಯನ್ ಅಧಿಕಾರಿಗಳ ಕಣ್ಣೆದುರಿಗೆಯೇ ನಗರದೊಳಗಿನ ಸಿಪಾಯರು ಕಿಲ್ಲೆಯ ಹೆಬ್ಬಾಗಿಲುಗಳನ್ನು ತೆರೆದು ಮೀರತ ಸಿಪಾಯಿಗಳನ್ನು ಒಳಗೆ ಬಿಟ್ಟರು! ಬಂಡಾಯದ ವಿಚಾರಗಳಿಂದ ದಿಲ್ಲಿಯ ಸಿಪಾಯಿಗಳೂ ಸಂತಪ್ತರಾಗಿದ್ದರೆಂಬುದಕ್ಕೆ ಇದೊಂದೇ ಪುರಾವೆ ಸಾಕು. ಮೀರತ ಸಿಪಾಯರು "ದೀನ್ ದೀನ್" ಎಂದು ಘೋಷಣೆ ಮಾಡುತ್ತ ಅರಮನೆಯೊಳಗೆ ಸುಗಮವಾದ ಪ್ರವೇಶವನ್ನು ಪಡೆದರು. ದಾರಿಯಲ್ಲಿಯ ಬಿಳಿಯರ ಹಾಗು ಕ್ರಿಶ್ಚಿಯನ್ನರ ರಕ್ತ ಅವರ ಖಡ್ಗಗಳಿಗೆ ಹತ್ತಿತ್ತು. ೩ನೆಯ ಅಶ್ವದಳದ ಸವಾರರು ಬಾದಶಹನ ದರ್ಬಾರದಲ್ಲಿ ಬಂದು ನಿಂತು ಮೊಗಲ ಸಿಂಹಾಸನದ ಜಯಜಯಕಾರವನ್ನು ಮಾಡಹತ್ತಿದರು.

ಕಂಪನಿಯ ಕಪಿಮುಷ್ಟಿಯಿಂದ ಮೊಗಲ ಬಾದಶಹನ ವಿಮೋಚನೆಯಾಯಿತು. "ಒಂದು ದಿನ ಮುಂಜಾನೆ ಎದ್ದು ನೋಡಲು ನಾನು ಪ್ರಸಿದ್ಧ ವ್ಯಕ್ತಿಯಾಗಿದ್ದೆ," ಎಂದು ಓರ್ವ ಆಂಗ್ಲ ಕವಿಯು ಹೇಳಿದಂತೆ ಬಹದ್ದೂರಶಹನು ಏನೂ ಕಲ್ಪನೆಯಿಲ್ಲದೆ ಒಮ್ಮೆಲೆ ಹಿಂದುಸ್ತಾನದ ಸಾರ್ವಭೌಮನಾಗಿಬಿಟ್ಟನು! ತನ್ನ ನೆರಳಿಗೆ ತಾನು ಹೆದರುತ್ತಿದ್ದ ಮುದುಕ ಬಹದ್ದೂರಶಹನ ಬದಲು ಮೊಗಲರ ರಕ್ತವಿದ್ದ ಒಬ್ಬ ತರುಣ ಶೂರನು ಆಗ ಅಲ್ಲಿದ್ದರೆ ಮೊಗಲ ಸಾರ್ವಭೌಮತ್ವವು ಪುನಃ ಸ್ಥಾಪನೆಯಾಗಿ ಕಂಪನಿಸರಕಾರ ಗಂಟು ಕಟ್ಟುವ ಪ್ರಸಂಗವೇ ಇತ್ತು.

ಬಂಡುಗಾರರು ಬಹದ್ದೂರಶಹನನ್ನು ಬಲವಂತದಿಂದ ಹೊರಗೆ ತರಬೇಕಾಯಿತು. ಇಷ್ಟರಲ್ಲಿ ಅವನು ಬಂಡಾಯದ ವಾರ್ತೆಯನ್ನು ಇಂಗ್ಲೀಷ ಅಧಿಕಾರಿಗಳಿಗೆ ತಿಳಿಸಲು ಆಗ್ರಾಕ್ಕೆ ಒಬ್ಬನನ್ನು ಓಡಿಸಿದ್ದನು! ಬಂಡಾಯಗಾರರಿಗೆ ಬಹದ್ದೂರಶಹಾ ಪರಿಪರಿಯಿಂದ ಹೇಳಿ ನೋಡಿದನು; ಸಿಪಾಯಿಗಳ ಸಂಬಳ ಕೊಡುವ ಶಕ್ತಿಯು ಸಹ ತನ್ನಲ್ಲಿಲ್ಲವೆಂದು ಮೊರೆಯಿಟ್ಟನು. ತಾನು ಆಂಗ್ಲರ ಕೈದಿಯೆಂದು ಗೋಳಾಡಿದನು. ಆದರೆ ಸಿಪಾಯಿಗಳು ಕೇಳಲಿಲ್ಲ. ಅವರಿಗೆ ಒಂದು ರಾಜಸಂಕೇತವು ಬೇಕಾಗಿತ್ತು. ಮೀರತದಲ್ಲಿಯೇ ಅವರಿಗೆ ಮುಂದಿನ ಕಾರ್ಯಕ್ರಮದ ಬಗ್ಗೆ ಚಿಂತೆಯಾಗಿತ್ತು. ಬಹದ್ದೂರಶಹನ ಮೇಲೆ ಬಂಡಾಯದ ನಾಯಕತ್ವವು ಕಡಿದುಕೊಂಡೆ ಬಿದ್ದಿತು!

ಮೂರು ದಿನಗಳಲ್ಲಿ ದಿಲ್ಲಿಯಲ್ಲಿ ಯುರೋಪಿಯನ್ನರ ಭಯಂಕರ ಧ್ವಂಸವು ನಡೆಯಿತು. ಸಾಧ್ಯವಾದವರು ಓಡಿಹೋದರೆ ಹಳ್ಳಿಗರು ಅವರನ್ನು ಹಿಡಿದು ಕೊಂದರು. ದಿಲ್ಲಿಯಲ್ಲಿ ಆಗ ೩೮, ೫೪ ಮತ್ತು ೭೪ ಹೀಗೆ ಮೂರು ಹಿಂದೀ ಕಾಲ್ದಳಗಳಿದ್ದು ಅವರೆಲ್ಲರ ಸಂಖ್ಯೆಯು ಸಾಧಾರಣ ೩೫೦೦ರಷ್ಟಿತ್ತು. ಎಲ್ಲರೂ

ಬಂಡಾಯ ಸೇರಿಬಿಟ್ಟರು. ರಾಜಮಹಾಲದಲ್ಲಿಯ ಡಗ್ಲಸ್, ಫ್ರೇಜರ, ಜೆನಿಂಗ್ಸ ಹಚಿನ್ಸನ್ ಮೊದಲಾದ ಎಲ್ಲ ಬಿಳಿಯ ಅಧಿಕಾರಿಗಳನ್ನು ಸಹಕುಟುಂಬ ಕೊಲೆ ಮಾಡಲಾಯಿತು. ಶಹರದಲ್ಲಿಯ ಸೆರೆಮನೆಯನ್ನು ತೆಗೆದು ಕೈದಿಗಳನ್ನು ಬಿಡಲಾಯಿತು. ದಿಲ್ಲಿಯ ಬ್ಯಾಂಕು ಸಂಪೂರ್ಣ ಲೂಟಿಯಾಯಿತು: ಊರೊಳಗಿನ ಮುಖ್ಯ ಚರ್ಚು ಅಗ್ನಿನಾರಾಯಣನಿಗೆ ಆಹುತಿಯಾಯಿತು. ದಿಲ್ಲಿ ಗ್ಯಾಜೆಟ್ ಎಂಬ ವೃತ್ತಪತ್ರಿಕೆಯ ಎಲ್ಲ ಕೆಲಸಗಾರರನ್ನೂ ಕೊಂದು ಕಚೇರಿಗೆ ಕೊಳ್ಳಿಯಿಟ್ಟರು.

ಹೀಗೆ ವಿಧ್ವಂಸಹಿಂಸೆಗಳು ನಗರದಲ್ಲಿ ತಾಂಡವವಾಡುತ್ತಿರುವಾಗ ಕಂಪನಿ ಸೈನ್ಯದ ಶಸ್ತ್ರಾಗಾರದ ಮೇಲೆ ಬಂಡುಗಾರರ ವಕ್ರದೃಷ್ಟಿಯು ಬಿದ್ದಿತು. ಅರಮನೆಯ ಹತ್ತಿರದಲ್ಲಿಯೇ ಒಂದು ಭದ್ರವಾದ ಮನೆಯಲ್ಲಿ ಈ ಶಸ್ತ್ರಾಸ್ತ್ರಗಳ ಸಂಗ್ರಹವಿತ್ತು. ಲೆಫ್ಟನೆಂಟ ಜಾರ್ಜ ವಿಲೋಬಿ ಎಂಬುವವನು ಶಸ್ತ್ರಾಗಾರಕ್ಕೆ ಮುಖ್ಯಸ್ಥನಿದ್ದನು. ಅವನೊಡನೆ ಇನ್ನಿತರ ಎಂಟು ಸಹಾಯಕ ಅಧಿಕಾರಿಗಳು ಇದ್ದರು. ಬಂಡುಗಾರರು ಶಸ್ತ್ರಾಗಾರಕ್ಕೆ ಮುತ್ತಿಗೆ ಹಾಕಲು ಒಳಗಿನವರಿಗೆ ಜೀವದ ಆಶೆಯೇ ಉಳಿಯಲಿಲ್ಲ. ಈ ಒಂಬತ್ತು ಧೀರ ಸಾಹಸಿಗಳು ಇಡಿಯ ಶಸ್ತ್ರಾಗಾರವನ್ನೆ ಹಾರಿಸಿ ಬಿಟ್ಟರು!! ಸ್ಫೋಟದಿಂದ ಇಡಿಯ ದಿಲ್ಲಿಯು ಗಡಗಡನೆ ನಡುಗಿತು. ಶಸ್ತ್ರಾಗಾರವನ್ನು ಸುತ್ತುಗಟ್ಟಿದ ಒಂದು ಸಾವಿರ ಬಂಡುಗಾರರು ಅಲ್ಲಿಯೇ ಸತ್ತರು. ಉಳಿದವರು ಇಂಗ್ಲೀಷರ ಶೂರತನವನ್ನು ನೋಡಿ ಅವಾಕ್ಕಾದರು. ಒಂಬತ್ತು ಇಂಗ್ಲೀಷರ ಪೈಕಿ ವಿಲೋಬಿಯನ್ನೊಳಗೊಂಡು ಐದು ಜನರು ಉಳಿದರು. ಆದರೆ ವಿಲೋಬಿಯು ಮೀರತಕ್ಕೆ ಓಡಿಹೋಗುವಾಗ ದಾರಿಯಲ್ಲಿ ಕೊಲ್ಲಲ್ಪಟ್ಟನು. ಶಸ್ತ್ರಾಗಾರವನ್ನು ಇಷ್ಟು ಅವಸರದಿಂದ ಮುತ್ತಿ ಹಾನಿಗೊಳಗಾದ ಉದಾಹರಣೆಯಿಂದ ಬಂಡುಗಾರರಿಗೆ ಸರಿಯಾದ ನಾಯಕತ್ವ ಹಾಗೂ ವಿಚಾರಪೂರ್ಣ ಯೋಜನೆ ಇರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಎರಡುಮೂರು ದಿನಗಳಲ್ಲಿ ದಿಲ್ಲಿಯಲ್ಲಿ ಒಬ್ಬನೂ ಯುರೋಪಿಯನ್ನನು ಉಳಿಯಲಿಲ್ಲ. ಹೊರಗಿನಿಂದ ಬೇಗನೆ ಆಂಗ್ಲ ಸೈನ್ಯವೂ ಬರಲಿಲ್ಲ. ಪ್ರಧಾನ ಸೇನಾಪತಿ ಜನರಲ್ ಎನ್ಸನ್ನನು ಮುದುಕನಾಗಿದ್ದನಲ್ಲದೆ ಅವನಿಗೆ ದಿಲ್ಲಿಯ ಮೇಲೆ ಪ್ರತಿಹಲ್ಲೆ ಮಾಡುವ ಧೈರ್ಯವೂ ಆಗಲಿಲ್ಲ. ದಿಲ್ಲಿಯಲ್ಲಿ ಮೊಗಲ ಬಾದಶಹನ ಆಳಿಕೆಯು ಪ್ರಾರಂಭವಾಯಿತು. ಸ್ವಲ್ಪಾವಧಿಯಲ್ಲಿ ಒಂದು ಮಧ್ಯಂತರ ಆಡಳಿತದ ಘಟನೆ ಸಿದ್ಧಪಡಿಸಲಾಯಿತು. ಬಾದಶಹನು ಲೂಟಿ, ಅವ್ಯವಸ್ಥೆಯನ್ನು ಪ್ರತಿಬಂಧಿಸಿದನು. ಆನೆಯ ಮೇಲೆ ಊರೊಳಗೆ ತಿರುಗಾಡಿ ಜನರಿಗೆ ಆಶ್ವಾಸನ ಕೊಟ್ಟು

ತಮ್ಮ ನಿತ್ಯದ ಉದ್ಯೋಗದಲ್ಲಿ ತೊಡಗಿರಲು ವಿನಂತಿ ಮಾಡಿಕೊಂಡನು.[1]

ಬಂಡುಗಾರರು ಇಷ್ಟು ಸುಲಭವಾಗಿ ದಿಲ್ಲಿಯನ್ನು ಆಕ್ರಮಣ ಮಾಡಿದ್ದು ಕಂಪನಿಸರಕಾರದ ಅಜಾಗರೂಕತೆಯನ್ನು ತೋರಿಸುತ್ತದೆ. ಆದರೆ ತಮಗೆ ಇಷ್ಟು ಸುದೈವದಿಂದ ಲಭಿಸಿದ ದೊಡ್ಡ ವಿಜಯವನ್ನು ತಮ್ಮ ಭಾವೀ ಶಕ್ತಿಸಂಘಟನೆಗಳಿಗೆ ಸಿಪಾಯಿಗಳು ಉಪಯೋಗ ಮಾಡಿಕೊಂಡು ಯುದ್ಧಶಾಸ್ತ್ರದಲ್ಲಿ ಪಾಂಡಿತ್ಯವನ್ನು ತೋರಿಸಿದ್ದರೆ ಆಂಗ್ಲರು ದಿಲ್ಲಿಯಿಂದ ಶಾಶ್ವತವಾಗಿ ತಳ ಕಿತ್ತಬೇಕಾಗುತ್ತಿತ್ತು.

ದಿಲ್ಲಿಯು ಬಂಡುಗಾರರ ಕೈಸೇರಿದೊಡನೆ ಬಂಡಾಯದ ಸ್ವರೂಪವೆ ಬದಲಾಯಿತು. ಅದಕ್ಕೊಂದು ನಿಜವಾದ ಶಕ್ತಿಯು ಪ್ರಾಪ್ತವಾಗಿ ಅದೊಂದು ಸ್ವಾತಂತ್ರ್ಯ ಯುದ್ಧವೇ ಆಯಿತೆನ್ನಲು ಯಾವ ಅಭ್ಯಂತರವೂ ಇಲ್ಲ. ಜನತೆಯ ಮಾನಮರ್ಯಾದೆಗಳಿಗೆ ಪಾತ್ರನಾದ ಮೊಗಲ ಸಾರ್ವಭೌಮನ ಹೆಸರಿನಲ್ಲಿ ಬಂಡಾಯ ಮುಂದರಿದೊಡನೆ ಅದಕ್ಕೆ ಯಥಾರ್ಥ ಸ್ವರೂಪವು ಬಂದಿತು. ಇಂಗ್ಲೀಷರ ವಿರುದ್ಧ ಹೂಡಲಾದ ಯುದ್ಧದ ಕಾರಣಗಳನ್ನು ಮೊಗಲ ದರಬಾರದ ವಕ್ತಾರರು ಸಾರಿಸಾರಿ ಜನರಿಗೆ ಹೇಳುತ್ತ ನಡೆದರು. ನಾಗರಿಕರು ಬರಿಯ ರೊಚ್ಚಿನ ಹತ್ಯಾಕಾಂಡವನ್ನು ಬಿಟ್ಟು ಇಂಗ್ಲೀಷರನ್ನು ರಣರಂಗದ ಮೇಲೆ ಹೇಗೆ

1. ಮೊದಲಿನ ಮೂರುನಾಲ್ಕು ದಿನ ಇಂಗ್ಲೀಷರ ಮೇಲೆ ಮತ್ತು ನಾಗರಿಕರ ಮೇಲೆ ಕೆಲವು ಅತ್ಯಾಚಾರಗಳು ನಡೆದವು. ಆಂಗ್ಲ ಸ್ತ್ರೀಯರು ಮಕ್ಕಳ ಕೊಲೆ ನಡೆಯಿತು. ಸ್ತ್ರೀಯರ ಮಾನಭಂಗ ಎಲ್ಲಿಯೂ ಆಗಿಲ್ಲವೆಂದು ಬಂಡಾಯದ ಮುಕ್ತಾಯದ ನಂತರ ನಡೆದ ವಿಚಾರಣೆಯಿಂದ ಸಿದ್ಧವಾಗಿದೆ. ಇಂಥ ಅತ್ಯಾಚಾರಗಳ ಸುಳ್ಳು ಮತ್ತು ಅತಿರಂಜಿತ ವರದಿಗಳನ್ನು ಭಾರತದಲ್ಲಿಯ ಕೆಲವು ಮಿಶನರಿಗಳು ಲಂಡನ್ ಪತ್ರಿಕೆಗಳಲ್ಲಿ ಪ್ರಕಟಮಾಡಿ ಆಂಗ್ಲ ಜನರನ್ನೂ ಸೈನಿಕರನ್ನೂ ಭಯಂಕರ ರೊಚ್ಚಿಗೆಬ್ಬಿಸಿದರು. ಇದರಿಂದ ದಿಲ್ಲಿಯ ಪುನರಾಕ್ರಮಣದ ಕಾಲಕ್ಕೆ ದಿಲ್ಲಿಯ ನಾಗರಿಕರ ಮೇಲೆ ಆಂಗ್ಲರು ಅಸಹನೀಯ ಅನಾಚಾರಗಳನ್ನು ನಡೆಸಿದರು. ನಮ್ಮ ಲೂಟಿ ಕೊಲೆ ಸುಲಿಗೆಗಳು ನಾದಿರಶಹನನ್ನೂ ಮೀರಿಸಿವೆ ಎಂದು ಓರ್ವ ಆಂಗ್ಲ ಅಧಿಕಾರಿಯೇ ಹೇಳಿದ್ದಾನೆ.

ದಿಲ್ಲಿಯ ಮೇಲೆ ಇಂಗ್ಲೀಷರು ಪ್ರತಿಹಲ್ಲೆ ನಡೆಸಿದಾಗ ಸಿಪಾಯಿಗಳು ಜೀವದ ಹಂಗುದೊರೆದು ಯುದ್ಧ ಮಾಡಿದರು. ಇದರಿಂದ ಬಂಡಾಯಕ್ಕೆ ಒಂದು ಕ್ರಾಂತಿ ಅಥವಾ ಸ್ವಾತಂತ್ರ್ಯಸಮರದ ಸ್ವರೂಪವು ಪ್ರಾಪ್ತವಾಯಿತು. ಇಲ್ಲಿಯ ವರೆಗೆ ವಸಾಹತು ಶಾಹಿಯ ಮೇಲೆ ಏಶಿಯದ ಯಾವ ರಾಷ್ಟ್ರವೂ ಹೀಗೆ ಯುದ್ಧ ಸಾರಿರಲಿಲ್ಲ.

ಎದುರಿಸಬೇಕೆಂಬ ಬಗ್ಗೆ ಗಂಭೀರ ಆಲೋಚನೆ ನಡೆಸಿದರು.

ಮೀರತದ ಬಂಡುಗಾರರು ಬಂದು ದಿಲ್ಲಿಯನ್ನಾಕ್ರಮಿಸಿದ್ದು, ದಿಲ್ಲಿಯ ಸಿಪಾಯಿಯರೂ ಅವರನ್ನು ಕೂಡಿಕೊಂಡು ನಗರದಲ್ಲಿಯ ಬಿಳಿಯರನ್ನು ನಾಮಶೇಷಮಾಡಿದ್ದು, ಮೇ ೧೫ನೆಯ ತಾರೀಖಿಗೆ ಲಾರ್ಡ ಕ್ಯಾನಿಂಗನಿಗೆ ತಿಳಿಯಿತು. ಕಲಕತ್ತೆಗೆ ಹೋಗಿ ಮುಟ್ಟಿದ ಎಲ್ಲ ಸುದ್ದಿ ಸಹಜವಾಗಿಯೇ ಲಖನೌ, ಅಲಹಾಬಾದ, ಕಾನಪೂರ, ಬರೇಲಿ ಪಾಟಣಾಗಳ ಸಿಪಾಯಿದಳಗಳಿಗೂ ಜನರಿಗೂ ಗೊತ್ತಾಯಿತು. ಲಾರ್ಡ ಕ್ಯಾನಿಂಗನು ಹೆದರಲಿಲ್ಲವಾದರೂ ಅವನಿಗೆ ಈ ವಾರ್ತೆಯಿಂದ ಸಾಕಷ್ಟು ಸಖೇದಾಶ್ಚರ್ಯವಾಯಿತು. ಸ್ವತಃ ಅವನು ಧೀರನಾಗಿದ್ದರೂ ಅವನ ಸುತ್ತಲಿನ ಅಧಿಕಾರಿ ವರ್ಗದವರು ಅವನನ್ನು ಹೇಡಿತನದ ತಪ್ಪುದಾರಿಗೆ ಎಳೆಯುತ್ತಿದ್ದರು. ಪಂಜಾಬ ಮತ್ತು ಔಧದಲ್ಲಿಯ ಲಾರೆನ್ಸ್ ಬಂಧುಗಳ ಹೊರತು ಅವನಿಗೆ ಯಾರೂ ಸರಿಯಾಗಿ ಸಲಹೆ ಕೊಡುತ್ತಿರಲಿಲ್ಲ. ಕೆಲವರು ಕೂಡಲೆ ಒಂದು ಉಗ್ರವಾದ ಸೇಡಿನ ಕಾರ್ಯಕ್ರಮವನ್ನು ಪ್ರಾರಂಭ ಮಾಡಬೇಕೆಂದರು. ದಿಲ್ಲಿಯಲ್ಲಿ ಸರಿಯಾಗಿ ಎಷ್ಟು ಬಂಡುಗಾರರಿದ್ದಾರೆ ಹಾಗು ಅವರ ಸೈನ್ಯಶಕ್ತಿಯೆಷ್ಟು ಎಂಬ ಬಗ್ಗೆ ಅವನ ಸೈನ್ಯಾಧಿಕಾರಿಗಳು ಅವನಿಗೆ ಸರಿಯಾಗಿ ಹೇಳಲಿಲ್ಲ. ಉತ್ತರಹಿಂದುಸ್ತಾನದ ಎಲ್ಲ ಸೈನ್ಯಠಾಣ್ಯಗಳಲ್ಲಿಯ ಸಿಪಾಯಿದಳಗಳು ಸರಕಾರದ ವಿಶ್ವಾಸಕ್ಕೆ ಅಪಾತ್ರವಾಗಿದ್ದ ಮೂಲಕ ಅಲ್ಲಲ್ಲಿದ್ದ ಯುರೋಪಿಯನ್ ಪಡೆಗಳನ್ನು ದಿಲ್ಲಿಗೆ ಕಳಿಸಲು ಬರುವಂತಿರಲಿಲ್ಲ. ಆದರೂ ಲಾರ್ಡ ಕ್ಯಾನಿಂಗನು ದಿಲ್ಲಿಯನ್ನು ಪುನಃ ವಿಲಂಬವಿಲ್ಲದೆ ವಶಪಡಿಸಿಕೊಳ್ಳಲು ಆತುರನಾಗಿದ್ದನು. ಕಲಕತ್ತೆಯಿಂದ ದಿಲ್ಲಿಯು ದೂರವಾಗಿತ್ತು. ದಿಲ್ಲಿಯಲ್ಲಿದ್ದವನೆ ಭಾರತದ ಅರಸನೆಂದು ಹಿಮಾಚಲದಿಂದ ಕನ್ಯಾಕುಮಾರಿಯ ವರೆಗೆ ಜನರು ತಿಳಿಯುತ್ತಿದ್ದರು. ಆದ್ದರಿಂದ ಬಂಡುಗಾರರಿಗೆ ವಿಜಯವಾಯಿತೆಂದೆ ಜನರು ತಿಳಿದುಕೊಂಡು ಆಗಲೆ ಅಲ್ಲಲ್ಲಿ ಇಂಗ್ಲೀಷರ ಫಜೀತಿಯನ್ನು ಮಾಡಹತ್ತಿದ್ದರು. ಆದ್ದರಿಂದ ಬಂಡುಗಾರರ ಈ ಪ್ರಾಬಲ್ಯವು ದಿಲ್ಲಿಯ ಪುನರಾಕ್ರಮಣವಾಗದೆ ನಷ್ಟವಾಗಲಾರದೆಂದು ಲಾರ್ಡ ಕ್ಯಾನಿಂಗನು ತುಂಬಾ ಅರಿತನು. ವೃದ್ಧ ಸೇನಾಪತಿ ಎನ್ಸನ್ ತನ್ನ ವಿಶ್ರಾಂತಿಸ್ಥಾನ ಬಿಟ್ಟು ಸಿಮಲೆಯಿಂದ ಕೆಳಗಿಳಿದನು. ದಿಲ್ಲಿಯ ಸುತ್ತಲೂ ಆಗ ಅತಿಯಾಗಿ ಬಿಸಿಲಿತ್ತು. ಕೂಡಿದಷ್ಟು ಸೈನ್ಯದಲ್ಲಿ ಸಹ ಬಿಸಿಲು, ಅತಿಸಾರದಿಂದ ಇಂಗ್ಲೀಷರು ಸಾಯಹತ್ತಿದರು. ಇದ್ದಷ್ಟು ಸೈನ್ಯದೊಡನೆ ದಿಲ್ಲಿಯ ಮೇಲೆ ಹಲ್ಲೆ ಮಾಡಬೇಕೆಂದು

ಲಾರ್ಡ ಕ್ಯಾನಿಂಗನ ಮನಸ್ಸಿತ್ತು. ಎನ್ಸನ್ ಮಾತ್ರ ಸಾವಕಾಶವಾಗಿ ಜಾಗ-ರೂಕತೆಯಿಂದ ಹೊರಟ. ಆವನ ಸೈನ್ಯವೂ ಅಷ್ಟು ಸುವ್ಯವಸ್ಥಿತವಾಗಿರಲಿಲ್ಲ. ಕೊನೆಗೆ ಮೇ ೨೭ನೆಯ ದಿನಾಂಕ ಎನ್ಸನ್ನನು ಚಿಂತೆಯಿಂದಲೊ ಅತಿಸಾರ ದಿಂದಲೊ ಶಿಬಿರದಲ್ಲಿಯೇ ಸತ್ತುಹೋದ. ದಿಲ್ಲಿ ಮುಟ್ಟುವ ಜವಾಬ್ದಾರಿಯು ಸರ್ ಹೆನ್ರಿ ಬರ್ನಾರ್ಡ ಎಂಬ ಕ್ರೀಮಿಯಾ ಯುದ್ಧದಲ್ಲಿ ನುಗ್ಗಾದ ಓರ್ವ ಯೋಧನ ಮೇಲೆ ಬಿದ್ದಿತು.

ಪರಿಸ್ಥಿತಿಯು ಹೀಗಿರುವಾಗ ಉತ್ತರ ಹಿಂದುಸ್ತಾನದಲ್ಲೆಲ್ಲ ಬಂಡಾಯವು ಹಬ್ಬಹತ್ತಿತ್ತು. ಲಾರ್ಡ ಕ್ಯಾನಿಂಗನು ಮೊದಲು ವಿಚಾರಮಾಡಿದಂತೆ ಅವಸರ ದಿಂದ ದಿಲ್ಲಿಯನ್ನು ವಶಪಡಿಸಿಕೊಂಡಿದ್ದರೆ ಇಂಗ್ಲೀಷರಿಗೆ ಪರಿಸ್ಥಿತಿಯು ಬೇಗನೆ ಅನುಕೂಲವಾಗುತ್ತಿತ್ತು. ಆದರೆ ಸೈನ್ಯದ ಅಭಾವದಿಂದಲೂ ಸೇನಾಪತಿಯ ಅಸ್ವಸ್ಥತೆಯಿಂದಲೂ ದಿಲ್ಲಿಯ ಮೇಲಿನ ದಾಳಿಯು ನೆನೆಗುದಿಗೆ ಬಿದ್ದು ಜೂನ ೮ನೆಯ ತಾರೀಖಿನವರೆಗೆ ಒಂದಾದರೂ ಮಹತ್ವದ ಚಕಮಕಿ ನಡೆಯಲಿಲ್ಲ. ಮುಂದಾದರೂ ಇಂಗ್ಲೀಷರಿಗೆ ದಿಲ್ಲಿಯಲ್ಲಿ ಬಂಡುಗಾರರ ಬೆನ್ನೆಲುಬು ಮುರಿ ಯಲು ನಾಲ್ಕು ತಿಂಗಳು ಹಿಡಿದವು. ಈ ಸುವರ್ಣಸಂಧಿಯ ಲಾಭವನ್ನು ಪಡೆಯುವ ಸೌಭಾಗ್ಯ ಬಂಡುಗಾರರಿಗಿರಲಿಲ್ಲ; ಆ ಮಾತು ಬೇರೆ.

ಮುಂದೆ ಸ್ವಲ್ಪ ದಿನಗಳಲ್ಲಿ ರೋಹಿಲಖಂಡ, ಬುಂದೇಲಖಂಡ, ಔಧಗಳಿಗೆ ಬಂಡಾಯವು ಹಬ್ಬಿಕೊಂಡು ಪ್ರಳಯಾಗ್ನಿಯಂತೆ ತನ್ನ ಸಹಸ್ರ ನಾಲಿಗೆಗಳನ್ನು ಹಳ್ಳಿಹಳ್ಳಿಗೂ ಚಾಚಿತು. ಮೀರತ, ದಿಲ್ಲಿ, ರೋಹಿಲಖಂಡ, ಆಗ್ರಾ, ಬನಾರಸ, ಅಲಹಾಬಾದ, ಛೋಟಾನಾಗಪೂರ, ನಿಮುಚ್ ಮತ್ತು ಅಜಮೀರ ಪ್ರದೇಶಗಳಲ್ಲಿ ಕಂಪನಿಸರಕಾರವು ಕೂಡಲೆ ಸೈನ್ಯಕಾಯದೆಯನ್ನು ಜಾರಿ ಮಾಡಿತು. ಔಧ ಪಂಜಾಬಗಳ ಚೀಫ್‌ಕಮಿಶನರರೂ ಸೈನ್ಯಕಾಯದೆಯಂತೆಯೇ ಆಡಳಿತ ನಡೆಸಿ ದರು. ಜೂನ ೧೮೫೭ರಷ್ಟೊತ್ತಿಗೆ ೬೫,೦೦೦ ಜನರು ಔಧದಲ್ಲಿ, ೩೦,೦೦೦ ಜನರು ದಿಲ್ಲಿಯ ಸುತ್ತಲೂ ಮತ್ತು ಮಧ್ಯಭಾರತದಲ್ಲಿ ೫೦,೦೦೦ ಜನರು ಬಂಡಾಯಕ್ಕೆ ತರಬೇತಿ ಪಡೆದು ಸಿದ್ಧರಾಗಿದ್ದರು. ( 1857, *Great Rebellion*, Ashok Mehta, 32 ).

ದಿಲ್ಲಿ, ಔಧ, ರೋಹಿಲಖಂಡ, ಬುಂದೇಲಖಂಡಗಳಲ್ಲಿ ಬ್ರಿಟಿಶ್ ಆಳಿಕೆ ಯೆಂಬುದೆ ಉಳಿಯಲಿಲ್ಲ. ವಾಯುವ್ಯಪ್ರಾಂತ (ಪಂಜಾಬ-ಔಧಗಳ ನಡುಪ್ರಾಂತ) ಮಧ್ಯಪ್ರಾಂತ, ಮಧ್ಯಭಾರತದ ಸಂಸ್ಥಾನಗಳು ಹಾಗು ಪಶ್ಚಿಮಬಿಹಾರಗಳಲ್ಲಿ

ಅತ್ಯಂತ ತುಮುಲವಾದ ಯುದ್ಧವು ನಡೆಯಿತು. ಪಂಜಾಬಕ್ಕೆ ಹೋಗುವ ಎಲ್ಲ ರಸ್ತೆಗಳೂ ಬಂದಾಗಿದ್ದವು. ಪರ್ಶಿಯದಿಂದ ಬಂದ ಸೇನಾಪತಿ ಹೆವ್‌ಲಕ್‌ನು ಭೂಮಾರ್ಗದಿಂದ ದಿಲ್ಲಿಗೆ ಹೋಗುವದು ಅಸಾಧ್ಯವಾಗಿ ಕಲಕತ್ತೆಯ ಮಾರ್ಗವಾಗಿ ದಿಲ್ಲಗೆ ಹೋಗಿ ಮುಟ್ಟಬೇಕಾಯಿತು !

ಔಧದಲ್ಲಿ ಸಾಮಾನ್ಯ ಜನರೂ ಸೈನ್ಯದೊಡನೆ ಬಂಡಾಯ ಹೂಡಿದರು. ರೋಹಿಲಖಂಡದಲ್ಲೆಲ್ಲ ಒಂದೇ ದಿನದಲ್ಲಿ ಬ್ರಿಟಿಶ್ ಆಳಿಕೆ ನಿರ್ನಾಮವಾಯಿತು. ಕೆಲವೆಡೆಗೆ ಮಿಲಿಟರಿ, ಪೋಲೀಸ, ನಾಗರಿಕರು ಹೀಗೆ ಮೂವರೂ ಸಂಯುಕ್ತ ಘೋಷಣೆಗಳನ್ನು ಹೊರಡಿಸಿದರು, ಸಿಪಾಯಿಗಳೂ ಜನರೂ ಒಮ್ಮೆಲೆ ಬಂಡಾಯ ಹೂಡಿದ ಉದಾಹರಣೆಗಳೂ ಇವೆ. ಔಧದಲ್ಲಿಯಂತೂ ಯಾವ ಜಿಲ್ಲೆಯಲ್ಲಿ ಸಿಪಾಯಿಗಳು ಬಂಡು ಸಾರಿದರೂ ಆ ಜಿಲ್ಲೆಯು ಬ್ರಿಟಿಶರ ಕೈಯನ್ನೇ ಬಿಟ್ಟು ಹೋಯಿತು. ಜೂನ ೪ರಿಂದ ೧೪ನೆಯ ತಾರೀಖಿನವರೆಗೆಂದರೆ ಔಧದಲ್ಲಿ ಬ್ರಿಟಿಶ್ ಆಳಿಕೆಯು ಒಂದು ದುಃಸ್ವಪ್ನದಂತೆ ಮಾಯವಾಗಿಬಿಟ್ಟಿತು! ಸಿಪಾಯಿಯಿಂದ ಓಲೆಕಾರನವರೆಗೆ ಎಲ್ಲರೂ ಬ್ರಿಟಿಶರ ವಿರುದ್ಧ ಶಸ್ತ್ರ ಎತ್ತಿದರು. ಪ್ರಾಂತದಲ್ಲಿದ್ದ ೧೫೦೦ ಕಿಲ್ಲೆಗಳಲ್ಲಿ ಬಂಡುಗಾರರು ಶಸ್ತ್ರಸನ್ನದ್ಧರಾಗಿ ಭಪ್ರತೆಯಿಂದ ಕುಳಿತರು. ಔಧವು ಕಂಪನಿ ರಾಜ್ಯಕ್ಕೆ ಸೇರಿದಾಗ ಎರಡುಮೂರಾಂಶ ಪ್ರದೇಶವು ೨೭೨ ತಾಲೂಕದಾರರ ಕೈಯಲ್ಲಿತ್ತು. ಇವರಲ್ಲಿ ಏಳು ಜನರನ್ನು ಬಿಟ್ಟು ಎಲ್ಲರೂ ಬಂಡಾಯ ಸೇರಿದರು ! ಮಧ್ಯಭಾರತವಂತೂ ಕೈಬಿಟ್ಟಿತೆಂದೆ ನಾನು ತಿಳಿದಿದ್ದೆನೆಂದು ಲಾರ್ಡ ಕ್ಯಾನಿಂಗನು ತನ್ನ ಅಭಿಪ್ರಾಯ ಸ್ಪಷ್ಟವಾಗಿ ಬರೆದು ತಿಳಿಸಿದ್ದಾನೆ. ದಿಲ್ಲಿಯ ಹೆಬ್ಬಾಗಿಲಲ್ಲಿ ಆಂಗ್ಲ ಸೇನಾಪತಿಗಳು ಏನು ನಡೆಸಿದ್ದಾರೆಂಬುದನ್ನು ಸರಿಯಾಗಿ ನಿತ್ಯ ತಿಳಿದುಕೊಳ್ಳುವದು ಸಹ ಹಿಂದುಸ್ತಾನ ಸರಕಾರಕ್ಕೆ ಸಾಧ್ಯವಿರಲಿಲ್ಲ. ( ಅಶೋಕ ಮೆಹತಾ )

ಬಂಡಾಯಕ್ಕೆ ಜನಬೆಂಬಲವು ಹೇಗಿದ್ದಿತೆಂಬುದನ್ನು ಚಾರ್ಲಸ್ ಬಾಲ್ ಎಂಬ ಇತಿಹಾಸಕಾರನು ( Vol. 2. P. 572 ) ಮಾರ್ಮಿಕವಾಗಿ ವರ್ಣನೆ ಮಾಡಿದ್ದಾನೆ. " ದ್ವೇಷದ ರಕ್ತಚಿಹ್ನೆಗಳು ಹಳ್ಳಿಗರ ಹಣೆಯ ಮೇಲೆ ಕಾಣುತ್ತಿದ್ದವು : ಬಿಹಾರದಲ್ಲಿ ಬ್ರಿಟಿಶರಿಗೆ ಜನರು ಸಹಸಾ ದಾರಿ ತಪ್ಪಿಸುತ್ತಿದ್ದರು. ಔಧದಲ್ಲಿ ಬಂಡುಗಾರರಿಗೆ ಜನರೇ ಆಹಾರ ಒದಗಿಸುತ್ತಿದ್ದರು. ಬಂಡುಗಾರರು ಇಟ್ಟುಹೋದ ಸಾಮಾನುಗಳಿಗೆ ರಕ್ಷಣೆ ಸಹ ಬೇಕಾಗಿರಲಿಲ್ಲ. ಬ್ರಿಟಿಶರು ಎಲ್ಲಿರುವರೆಂಬ ಬಗ್ಗೆ ಜನರು ಬಂಡುಗಾರರಿಗೆ ತಾಸು ತಾಸಿಗೆ ಮಾಹಿತಿ ತಂದು

ಒದಗಿಸುತ್ತಿದ್ದರು. ಆಂಗ್ಲರು ಊಟ ಮಾಡುವ ಮೇಜಿನಹತ್ತಿರ, ಅವರ ಡೇರಿಗಳ ಹತ್ತಿರ ಇದ್ದ ಹಿಂದೀಯರು ಅಶ್ವಾರೋಹಿಗಳಿಕಿಂತಲೂ ಶೀಘ್ರಗತಿಯಿಂದ ಬಂಡುಗಾರರಿಗೆ ಸಂದೇಶಗಳನ್ನೊಯ್ದು ಮುಟ್ಟಿಸುತ್ತಿದ್ದ ಮೂಲಕ ಅವರ ಮೇಲೆ ಅನಿರೀಕ್ಷಿತವಾಗಿ ದಾಳಿ ಮಾಡುವದೇ ಅಸಾಧ್ಯವಾಯಿತು.” ಮೊದಲಿನ ಹನ್ನೆರಡು ತಿಂಗಳಲ್ಲಿ ೩೦,೦೦೦ ಬಂಡುಗಾರ ಸಿಪಾಯರು ೧೦೦,೦೦೦ ಸಶಸ್ತ್ರ ನಾಗರಿಕರು ಬ್ರಿಟಿಶರೊಡನೆ ಕಾದಿ ಮಡಿದರು. ಗಲ್ಲಿಗೇರಿದವರ ಮತ್ತು ತೋಫಿನ ಬಾಯಿಗೆ ಕೊಡಲ್ಪಟ್ಟವರ ಸಂಖ್ಯೆಯಂತೂ ಅಪಾರವಾಗಿತ್ತು! ಒಟ್ಟು ಸಂಖ್ಯೆ ಒಂದು ಲಕ್ಷ ಮೀರಿರಬೇಕೆಂದು ಅಂದಾಜು ಮಾಡಲಾಗಿದೆ. ಪ್ಲಾಸಿ ಬಕ್ಸಾರಗಳನ್ನೊಳಗೊಂಡು ಭಾರತದಲ್ಲಿ ಬ್ರಿಟಿಶರು ನಡೆಸಿದ ಯಾವದೆ ಯುದ್ಧದಲ್ಲಿ ಇಷ್ಟು ಹಿಂದೀಯರ ಪ್ರಾಣಹಾನಿಯಾಗಿರಲಿಲ್ಲ; ಆರೇಳು ಸಾವಿರ ಸೈನ್ಯ ಹತವಾಗುವದೆಂದರೆ ಪರಮಾವಧಿಯಾಗಿತ್ತು.

ಬಂಡಾಯವು ಕಳಸಕ್ಕೆ ಮುಟ್ಟಿದಾಗ ೧ಲಕ್ಷ ಚೌರಸ ಮೈಲಿನಷ್ಟು ಪ್ರದೇಶವು ಅವರ ಅಂಕಿತದಲ್ಲಿತ್ತು. ೨ಕೋಟಿ ೮೦ಲಕ್ಷ ಜನರು ಈ ಪ್ರದೇಶದಲ್ಲಿದ್ದರು. ಕ್ರಿಮಿಯದಲ್ಲಿ ರಶಿಯದೊಡನೆ ಆದ ಯುದ್ಧಕ್ಕಿಂತಲೂ ಲಖನೌ, ದಿಲ್ಲಿ, ಝಾಂಸಿಗಳಲ್ಲಿ ಹೆಚ್ಚು ತುಮುಲವಾದ ಯುದ್ಧವು ನಡೆಯಿತು. ಲಖನೌದ ವಿಮೋಚನೆ ಮಾಡಲು ೩೬೦೦೦ ಸೈನ್ಯ ಬೇಕಾಯಿತು. ಕ್ರಿಮಿಯಾ ಯುದ್ಧದ ಯಾವದೆ ರಣರಂಗದಲ್ಲಿ ೨೬೦೦೦ಕ್ಕಿಂತ ಹೆಚ್ಚಿಗೆ ಸೈನ್ಯ ಹೋರಾಡಿಲ್ಲ. ಇದೇನು ಕೆಲವು ಸಿಪಾಯಿಗಳು ಹೂಡಿದ ಬಂಡಾಯವೋ ಅಥವಾ ಅಖಿಲಭಾರತ ಸ್ವಾತಂತ್ರ್ಯ ಸಂಗ್ರಾಮವೋ ಓದುಗರೇ ನಿರ್ಧರಿಸಲಿ.

ಬಂಡಾಯವಾದ ಎಷ್ಟೋ ಸ್ಥಳಗಳಲ್ಲಿ ಬಂಡಾಯಕ್ಕೆ ಜನತೆಯ ಬೆಂಬಲವು ಸಂಪೂರ್ಣವಾಗಿತ್ತೆಂಬುದನ್ನು ಸಿದ್ಧಪಡಿಸುವ ಅನೇಕ ಉದಾಹರಣೆಗಳಾದವು. ನಾಗರಿಕರೇ ಕೆಲವೆಡೆಗೆ ಸಿಪಾಯರನ್ನು ಬಂಡಾಯ ಹೂಡಲು ಪ್ರೇರೇಪಿಸಿದರು. ಪಾಟಣಾ ಮೊದಲಾದ ಕೆಲ ಊರುಗಳಲ್ಲಿ ಬ್ರಿಟಿಶರಿಗೆ ಬೆಂಬಲ ಕೊಟ್ಟವರ ಮೇಲೆ ಸಮಾಜವು ಬಹಿಷ್ಕಾರವನ್ನು ಹಾಕಿತು! ಜನರಲ್ ಹೆವ-ಲಾಕ್‌ನಿಗೆ ನದಿ ದಾಟಲು ಒಬ್ಬನೂ ನೌಕೆ ಕೊಡಲಿಲ್ಲ. ಈ ರೀತಿ ಇದು ಕೇವಲ ಸಿಪಾಯಿ ಬಂಡಾಯವಿರದೆ ಅಲ್ಲಲ್ಲಿಯ ಜನ ಸಿಪಾಯಿಗಳಿಗೆ ಬೆಂಬಲವಾಗಿ ನಿಂತು ಸಹಾಯ ಮಾಡಿದರು. ಆದುದರಿಂದಲೆ ಇದು ಭಾರತದ ಪ್ರಥಮ ಸ್ವಾತಂತ್ರ್ಯ ಯುದ್ಧ ಎಂದು ಸಾರಲಾಗಿದೆ. (ಅಶೋಕ ಮೆಹತಾ: Great Rebellion.)

# ಒಂಬತ್ತನೆಯ ಅಧ್ಯಾಯ

## ಕಾನಪೂರ ಹತ್ಯಾಕಾಂಡ

**ಬಂ**ಡಾಯದ ಇತಿಹಾಸದಲ್ಲಿ ಕಾನಪೂರ ಹತ್ಯಾಕಾಂಡವು ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದೆ. ಕಾನಪೂರ ಮತ್ತು ಲಖನೌಗಳಲ್ಲಿ ಇಂಗ್ಲೀಷರಿಗೆ ಒದಗಿದಷ್ಟು ಸಂಕಟಗಳು ಮತ್ತೆಲ್ಲಿಯೂ ಒದಗಲಿಲ್ಲ. ದಿಲ್ಲಿಯಲ್ಲಿ ಒಂದೆರಡೇ ದಿನಗಳಲ್ಲಿ ಯುರೋಪಿಯನ್ನರು ಸಂಪೂರ್ಣ ನಿರ್ನಾಮವಾಗಿಹೋದರು. ಆದರೆ ಕಾನಪೂರದ ಯುರೋಪಿಯನ್ನರು ಸಾಯುವ ಮುನ್ನ ಘನಘೋರವಾದ ಸಂಕಟಗಳನ್ನು ಸಹಿಸುವ ಪ್ರಸಂಗವು ಬಂದಿತು.

ಕಾನಪೂರದ ಬಂಡಾಯದಲ್ಲಿ ನಾನಾ ಸಾಹೇಬ ಪೇಶ್ವೆಯ ಹೆಸರು ಎಲ್ಲಕ್ಕೂ ಮುಂದೆ ಬಂದಿತು. ಬ್ರಹ್ಮಾವರ್ತದಿಂದ ಅವನು ಇಂಗ್ಲೀಷರಿಗೆ ಸಹಾಯಮಾಡಬೇಕೆಂದು ಕೆಲವು ಸಂರಕ್ಷಕದಳಗಳೊಡನೆ ಬಂದು ಕಾನಪೂರ ಕ್ಯಾಂಟೋನಮೆಂಟಿನಲ್ಲಿ ವಸತಿ ಮಾಡಿದ್ದನು. ಬಂಡಾಯವು ಪ್ರಾರಂಭವಾಗುವವರೆಗೆ ಅವನು ಇಂಗ್ಲೀಷರೊಡನೆ ಸ್ನೇಹದಿಂದ ಇದ್ದುದು ನಿರ್ವಿವಾದವು. ಆಗ ಯಾವದೇ ಬಗೆಯ ಒಳಸಂಚಿನಲ್ಲಿದ್ದನೆಂಬ ಅವನ ಬಗ್ಗೆ ಪುರಾವೆಯಿಲ್ಲ. ಅವನು ಸ್ವಸಂತೋಷದಿಂದ ಬಂಡಾಯವನ್ನು ಸೇರಲೆ ಇಲ್ಲವೆಂದು ತಾತ್ಯಾಟೋಪಿ ತನ್ನ ಜವಾಬಿನಲ್ಲಿ ಹೇಳಿದ್ದಾನೆ. ( Malleson III. 515 ). ಆದರೆ ತಾತ್ಯಾ ಟೋಪಿಯ ಈ ಸಾಕ್ಷಿಗೆ ಬಹಳ ಮಹತ್ವವು ಬರಲಾರದು. ತಾತ್ಯಾನ ಬಂಧನವಾಗಿ ಅವನ ವಿಚಾರಣೆ ನಡೆದಾಗ ನಾನಾ ಸಾಹೇಬನು ಇನ್ನೂ ಫರಾರಿಯೇ ಇದ್ದನು. ಬಂಡಾಯದಲ್ಲಿದ್ದ ನಾನಾ ಸಾಹೇಬನ ನಿಜವಾದ ಅಂಗವನ್ನು ತಾನೇಕೆ ಬಹಿರಂಗಪಡಿಸಬೇಕೆಂದು ಅವನು ವಿಚಾರ ಮಾಡಿರಲಿಕ್ಕೆ ಸಾಕು. ನಾನಾ ಸಾಹೇಬನು ವಹಿಸಿದ ಪಾತ್ರವು ತಾತ್ಯಾಟೋಪಿಗೆ ಸಂಪೂರ್ಣ ಗೊತ್ತಿರಬೇಕು.

ಮೀರತ ಮತ್ತು ದಿಲ್ಲಿಯ ಘಟನೆಗಳು ಮುಂದೆ ನಾಲ್ಕೇ ದಿನಗಳಲ್ಲಿ ಕಾನಪೂರಕ್ಕೆ ಗೊತ್ತಾದರೂ ಜೂನ ನಾಲ್ಕರವರೆಗೆ ಕಾನಪೂರದಲ್ಲಿ ಬಂಡಾಯವಾಗಲಿಲ್ಲ. ಲಖನೌದಲ್ಲಿ ಮೇ ತಿಂಗಳ ಕೊನೆಗೆ ಪ್ರಾರಂಭವಾಯಿತು. ಕಾನ

ಪೂರವು ೧೮೦೧ರಲ್ಲಿ ಔಧ ನವಾಬರಿಂದ ಬ್ರಿಟಿಶರ ಕೈಗೆ ಬಂದಿತ್ತು. ಅದು ಬಂಡಾಯದ ಕಾಲಕ್ಕೆ ಒಂದು ಮಹತ್ವದ ಸೈನ್ಯ ಠಾಣ್ಯವಾಗಿತ್ತು. ಲಖನೌದಿಂದ ನಾಲ್ವತ್ತೆಂಟು ಮೈಲು ದೂರದಲ್ಲಿರುವ ಕಾನಪೂರಕ್ಕೆ ಮುಂದೆ ಅಲಹಾಬಾದ ನೂರು ಮೈಲು ದೂರದಲ್ಲಿದೆ. ಗಂಗಾನದಿಯ ದಂಡೆಯ ಮೇಲಿರುವ ಕಾನಪೂರವು ನೌಕಾಸಾರಿಗೆಯ ಸೌಕರ್ಯದ ಮೂಲಕ ಚರ್ಮ ಹದ ಮಾಡುವ ಮುಂತಾದ ಅನೇಕ ಉದ್ಯೋಗಗಳ ಮತ್ತು ವ್ಯಾಪಾರಗಳ ಕೇಂದ್ರವಾಗಿತ್ತು.

ಕಾನಪೂರದಲ್ಲಿ ಬಂಡಾಯದ ಕಾಲಕ್ಕೆ ಸಾಕಷ್ಟು ಸೈನ್ಯವಿತ್ತು. ಆರು ತೋಫುಗಳು ಮತ್ತು ಅರವತ್ತೊಂದು ಬ್ರಿಟಿಶ ತೋಫುದಳದವರೂ ಇದ್ದರು. ಹಿಂದೀ ಕಾಲ್ದಳಗಳು ೧, ೫೩ ಮತ್ತು ೫೬ ಹೀಗೆ ಮೂರು ನಂಬರಿನವಿದ್ದು ೨ನೆಯ ನಂಬರಿನ ಒಂದು ಹಿಂದೀ ಅಶ್ವದಳವೂ ಇತ್ತು. ಇವರ ಒಟ್ಟು ಸಂಖ್ಯೆಯು ಮೂರು ಸಾವಿರದಷ್ಟಿತ್ತು. ಸರ್ ಹ್ಯೂ ವ್ಹೀಲರ ಎಂಬ ವೃದ್ಧನಾಗಿದ್ದರೂ ಶೂರನಾದ ಒಬ್ಬ ಸೇನಾಪತಿಯು ಕಾನಪೂರ ಸೈನ್ಯಗಳ ಮುಖ್ಯಸ್ಥನಿದ್ದನು. ವ್ಹೀಲರನು ತನ್ನ ಸ್ಥಿತಿ ಭದ್ರವಾಗಿದೆ ಎಂದೇ ಆತ್ಮವಿಶ್ವಾಸದಿಂದ ಇದ್ದನು. ಮೀರತ-ದಿಲ್ಲಿ ಘಟನೆಗಳು ಕಾನಪೂರದಲ್ಲಿ ಪೂರಾ ಪ್ರಸಿದ್ಧಿಯನ್ನು ಹೊಂದಿದ ಮೇಲೆ ಸಹ ಕಾನಪೂರದ ಪರಿಸ್ಥಿತಿಯು ಎಷ್ಟೂ ಚಿಂತಾಜನಕವಾಗುವ ಕಾರಣವಿಲ್ಲವೆಂದು ಮೇ ೧೮ನೆಯ ತಾರೀಖಿಗೆ ಸೇನಾಪತಿ ವ್ಹೀಲರನು ಹಿಂದುಸ್ಥಾನ ಸರಕಾರಕ್ಕೆ ಬರೆದು ತಿಳಿಸಿದ್ದಾನೆ. ಕಾನಪೂರದಲ್ಲಿ ಯುರೋಪಿಯನ್ನರ ಜನವಸತಿಯು ವಿಶೇಷವಾಗಿದ್ದ ಮೂಲಕ ವ್ಹೀಲರನಿಗೆ ನಗರವನ್ನು ಖಾಲಿ ಮಾಡುವ ವಿಚಾರವಿರಲಿಲ್ಲ. ಕಲಕತ್ತೆಯಿಂದ ಯುರೋಪಿಯನ್ ಸೈನ್ಯ ನಗರದ ಸಂರಕ್ಷಣೆಗೆ ಬರುವದಿದೆ ಎಂದು ಅವನಿಗೆ ಮೇ ೨೦ಕ್ಕೆ ತಿಳಿಯಿತು. ಆದರೆ ತಮ್ಮ ಮೇಲೆ ಸೇನಾಪತಿಯ ವಿಶ್ವಾಸವು ಉಳಿದಿಲ್ಲವೆಂಬುದನ್ನು ಹಿಂದೀ ಸೈನಿಕರಿಗೆ ತಿಳಿಸಿಕೊಡುವದು ವ್ಹೀಲರನಿಗೆ ಬೇಕಾಗಿರಲಿಲ್ಲ. ಅದರಿಂದ ಶಾಂತವಿದ್ದವರೂ ಸಹ ಬಂಡುಹೂಡಬಹುದೆಂದು ಅವನಿಗೆ ಭಯ. ವ್ಹೀಲರನು ಈ ಮಾಹಿತಿಯನ್ನು ಗುಪ್ತವಾಗಿಟ್ಟರೂ ಬೇರೆ ಮಾರ್ಗದಿಂದ ಹಿಂದೀ ಅಶ್ವದಳ-ಕಾಲ್ದಳಗಳು ಎಲ್ಲ ಸಂಗತಿಯನ್ನೂ ಗೊತ್ತು ಮಾಡಿಕೊಂಡವು. ಅಲ್ಲದೆ, ಯುರೋಪಿಯನ್ ಸೈನ್ಯವು ಬಂದೊಡನೆ ತಮ್ಮ ಕುದುರೆ, ಶಸ್ತ್ರ, ಸಮುಸಸ್ತ್ರಗಳನ್ನೆಲ್ಲ ಅವರಿಗೆ ಕೊಡಲಾಗುವದೆಂಬ ಒಂದು

ಸುದ್ದಿಯೂ ಹಬ್ಬಿಬಿಟ್ಟಿತು. ಎರಡನೆಯ ನಂಬರಿನ ಅಶ್ವದಳದಲ್ಲಿ ಅಸಮಾಧಾನವು ತಲೆದೋರಹತ್ತಿತು. ೨೨ನೆಯ ತಾರೀಖಿಗೆ ಮೊದಲಿನ ವಾರ್ತೆಯ ಪ್ರಕಾರ ಐವತ್ತೈದು ಯುರೋಪಿಯನ್ ಹಾಗೂ ೨೪೦ ಹಿಂದೀ ಅಶ್ವಾರೋಹಿಗಳು ಲಖನೌದಿಂದ ಬಂದೇಬಿಟ್ಟರು. ತೋರಿಕೆಗೆ ಎಲ್ಲವೂ ಶಾಂತವಿದ್ದರೂ ಇದರಿಂದ ಸಿಪಾಯಿ ಲೈನಿನಲ್ಲಿ ವಿಶೇಷ ಉದ್ವೇಗ ಉಂಟಾಯಿತು. ಯಾವದೊ ಒಂದು ಅನಾಹುತ ತಮ್ಮನ್ನು ಕಾಯ್ದಿರುವದಾಗಿ ಪ್ರತಿಯೊಬ್ಬನ ಅಂತರಂಗವೂ ಹೇಳತೊಡಗಿತು. ಅಲ್ಲಲ್ಲಿ ಜನರು ಊರು ಬಿಟ್ಟು ಹೋಗುವ ದೃಶ್ಯಗಳೂ ಕಣ್ಣಿಗೆ ಬೀಳತೊಡಗಿದವು.

ಊರಲ್ಲಿ ವಾರ್ತೆಯ ಮೇಲೆ ವಾರ್ತೆಗಳು ಹಬ್ಬತೊಡಗಿದವು. ಅದೇ ವೇಳೆಗೆ ಕೆಟ್ಟಹಿಟ್ಟು ಪೇಟೆಗೆ ಬಂದು ಅಗ್ಗದರದಿಂದ ಮಾರತೊಡಗಿತು. ಹಂದಿ ಮತ್ತು ಆಕಳುಗಳ ಎಲವುಗಳ ಪುಡಿಯಿಂದ ಮಿಶ್ರಿತವಾದ ಹಿಟ್ಟು ಪೇಟೆಗೆ ಬಂದಿದೆಯೆಂದೂ ಧರ್ಮಾಚಾರಗಳನ್ನು ಭ್ರಷ್ಟಗೊಳಿಸುವದೇ ಇದರ ಮುಖ್ಯ ಹೇತುವೆಂದೂ ಜನರಲ್ಲಿ ಮತ್ತು ಸಿಪಾಯಿಗಳಲ್ಲಿ ಗುಜುಗುಜು ಮಾತುಗಳು ಪ್ರಾರಂಭವಾದವು. ವ್ಹೀಲರನ ವಿನಂತಿಯ ಮೇರೆಗೆ ನಾನಾಸಾಹೇಬನು ಬ್ರಹ್ಮಾವರ್ತದಿಂದ ೩೦೦ ಸೈನಿಕರನ್ನೂ ಎರಡು ತೋಫುಗಳನ್ನೂ ಕಳಿಸಿದ್ದನು. ಬಂಡಾಯವು ಪ್ರತ್ಯಕ್ಷ ಸುರುವಾಗಲು ಇನ್ನೂ ಎರಡು ವಾರ ಗಳಿದ್ದವು. ಈ ಅವಧಿಯಲ್ಲಿ ನಾನಾಸಾಹೇಬನು ಬ್ರಹ್ಮಾವರ್ತದಿಂದ ಕಾನಪೂರಕ್ಕೆ ಬರಲು ಇಂಗ್ಲೀಷರಿಗೆ ತಕ್ಕಮಟ್ಟಿಗೆ ಸಂತೋಷವೇ ಆಯಿತು. ನವಾಬಗಂಜದಲ್ಲಿಯ ಸರಕಾರಿ ಖಜಾನೆಯನ್ನು ವ್ಹೀಲರನು ಅವನಿಗೆ ಒಪ್ಪಿಸಿ ಅವನಿಗೆ ೫೦೦ ಅಶ್ವ ಹಾಗು ಕಾಲ್ದಳಗಳ ಸಹಾಯವನ್ನು ಒದಗಿಸಿಕೊಟ್ಟನು. ಕಾನಪೂರ ಮ್ಯಾಜಿಸ್ಟ್ರೇಟ ಮತ್ತು ಕಲೆಕ್ಟರರು ತಮ್ಮ ಕುಟುಂಬದ ಜನರನ್ನು ಸಹ ಬ್ರಹ್ಮಾವರ್ತದ ಅರಮನೆಗೆ ಕಳಿಸಿಬಿಡಬೇಕೆಂದಿದ್ದರು. ಯಾಕೊ ಅದು ಹೆಂಗಸರ ಮನಸ್ಸಿಗೆ ಬರಲಿಲ್ಲ.

ಜನರಲ್ ವ್ಹೀಲರನಿಗೆ ಮಾತ್ರ ಈಗ ಮೊದಲಿನ ಆತ್ಮವಿಶ್ವಾಸವು ಉಳಿದಿರಲಿಲ್ಲ. ಕಲಕತ್ತೆಯಿಂದ ಸಾಕಷ್ಟು ಸಹಾಯವು ಬರುವವರೊಳಗೆ ಏನಾದರೂ ವಿಪತ್ತು ಬರಬಹುದೆಂದು ಹೆದರಿ ಆವನು ಆಶ್ರಯಕ್ಕಾಗಿ ಒಂದು ವ್ಯೂಹರಚನೆ ಮಾಡಿ ಅಲ್ಲಿ ಕೆಲವು ಕಚ್ಚಾ ವಸತಿಗೃಹಗಳನ್ನೂ ಅವುಗಳ ಸುತ್ತಲೂ ಕಂದರಗಳನ್ನೂ ರಚಿಸಿಕೊಂಡನು. ಸಾಕಷ್ಟು ಆಹಾರಸಾಮುಗ್ರಿಗಳೂ ಇಡಲ್ಪಟ್ಟವು.

ಆದರೆ ಸಿಪಾಯಿಗಳಿಗೆ ಇದರಿಂದ ಸೇನಾಪತಿಯು ತಮ್ಮ ಬಗ್ಗೆ ಸಂಶಯಪಡು ತಿರುವನೆಂದು ಸಂಪೂರ್ಣ ಮನವರಿಕೆಯಾಯಿತು. ಒಂದು ವೇಳೆ ಅವನಿಗೆ ಸಾಕಷ್ಟು ಸಹಾಯವು ಬಂದು ತಲುಪಿದರೆ ಆವನು ತಮ್ಮನ್ನು ನಿಃಶಸ್ತ್ರಗೊಳಿ ಸಲು ಹಿಂದುಮುಂದೆ ನೋಡುವದಿಲ್ಲವೆಂದೂ ಖಾತ್ರಿಯಾಯಿತು. ಆದಷ್ಟು ಬೇಗನೆ ಬಂಡಾಯ ಹೂಡುವದೇ ಲೇಸೆಂದು ಅವರ-ಅಂತರಂಗದಲ್ಲಿ ವಿಚಾರ ಗಳು ಅಲೆದಾಡಹತ್ತಿದವು. ವಾತಾವರಣವು ಇಷ್ಟು ಪ್ರಕ್ಷುಬ್ಧವಿದ್ದಾಗ ಒಂದು ದಿನ ಓರ್ವ ಯುರೋಪಿಯನ್ ಸೈನ್ಯಾಧಿಕಾರಿಯು ಮದ್ಯದ ಉನ್ಮಾದದಲ್ಲಿ ಎರಡನೆಯ ಅಶ್ವದಳದ ಗಸ್ತಿಪಡೆಯ ಮೇಲೆ ಗುಂಡು ಹಾರಿಸಿದನು. ಆವ ನನ್ನು ವಿಚಾರಣೆಗೆ ಗುರಿಪಡಿಸಿದರೂ ಆ ಕೃತಿಯನ್ನೆಸಗುವ ಕಾಲಕ್ಕೆ ಮೈಮೇಲೆ ಆವನಿಗೆ ಎಚ್ಚರವಿರಲಿಲ್ಲವೆಂಬ ನೆವಮಾಡಿ ಅವನನ್ನು ಬಿಟ್ಟು-ಬಿಟ್ಟರು!

ಸಿಪಾಯಿಗಳ ತಲೆ ತಿರುಗಿತು: ನಾವೇ ಹೀಗೆ ಮಾಡಿದ್ದರೆ ಇವರು ನಮ್ಮನ್ನು ಗಲ್ಲಿಗೇರಿಸುತ್ತಿದ್ದರೆಂದು ಕೂಗಾಡಿದರು. ಖಜಾನೆಯ ಮೇಲಿನ ನಮ್ಮ ಕಾವ ಲನ್ನು ಯಾಕೆ ಕಿತ್ತಿದರು? ಸೇನಾಪತಿ ಸಾಹೇಬರು ಅಡಗಿಕೊಂಡು ಕೂಡ್ರುವ ತಯಾರಿಯನ್ನು ಇಷ್ಟೇಕೆ ಭರದಿಂದ ನಡೆಸಿದ್ದಾರೆ? ಮುಂತಾದ ಪ್ರಶ್ನೆಗಳನ್ನು ಹಿಂದೀ ಸೈನಿಕರು ಇಂಗ್ಲೀಷರಿಗೆ ಬಹಿರಂಗವಾಗಿಯೇ ಹಾಕಹತ್ತಿದರು.

ಜೂನ ೪ನೆಯ ತಾರೀಖು ಮುಂಜಾನೆ ವ್ಹೀಲರನಿಗೆ, ಇಂದು ಏನಾದರೂ ದುರ್ಘಟನೆಯಾಗುವದು ನಿಶ್ಚಿತವೆಂದು ಎನಿಸಹತ್ತಿತು. ಆದ್ದರಿಂದ ಅವನು, ಒಂದು ತಿಂಗಳ ಸಾಮುಗ್ರಿಗಳನ್ನೂ ಖಜಾನೆಯಿಂದ ಒಂದು ಲಕ್ಷ ನಗದು ಹಣವನ್ನೂ ತನ್ನ ಆಶ್ರಯಸ್ಥಾನಕ್ಕೆ ಅಂದು ಮುಂಜಾನೆ ತರಿಸಿಕೊಳ್ಳುವ ವ್ಯವಸ್ಥೆಯನ್ನು ಮಾಡಿದನು. ಯುರೋಪಿಯನ್ ನಾಗರಿಕರು ಕೋಟೆಯಲ್ಲಿ ಬಂದು ಕುಳಿತರು. ಆಂಗ್ಲಸೈನ್ಯ ಬರುವವರೆಗೆ ದಾರಿಕಾಯುವ ಮನಸ್ಸು ತಮ ಗಿಲ್ಲವೆಂದು ಬಹಿರಂಗವಾಗಿ ಸಾರಿ ಅಂದೇ ರಾತ್ರಿ ಎರಡನೆಯ ನಂಬರಿನ ಅಶ್ವದ ಳವು ಬಂಡುಸಾರಿಬಿಟ್ಟಿತು. ಮುಂದೆ ಕಾಲಾಳುಗಳೆಲ್ಲ ಕೂಡಿಕೊಳ್ಳಲು ವಿಶೇಷ ಸಮಯವು ಬೇಕಾಗಲಿಲ್ಲ. ೫೩ನೆಯ ಕಾಲ್ದಳವು ಮಾತ್ರ ಬಂಡಾಯದಲ್ಲಿ ಕೂಡಿರಲಿಲ್ಲ. ಆದರೆ ಯಾವ ಕಾರಣದಿಂದಲೊ ಅವರ ಮೇಲೆಯೂ ಗೋಳಿ ಬಾರು ನಡೆಯಲು ಅವರೂ ಸೇರಿಬಿಟ್ಟರು. ಇಷ್ಟಾದರೂ ಈ ಕಾಲ್ದಳದ ಪೈಕಿ ಕೆಲವರು ಕೊನೆವರೆಗೂ ಸಾ [illegible]

ವ್ಹೀಲರನು ತೋಡಿದ ಕಂದರಗಳು, ಕಟ್ಟಿದ ವ್ಯೂಹವು ವಿಶೇಷ ಭದ್ರವಾಗಿರಲಿಲ್ಲ. ಸಿಪಾಯಿಗಳು ಬಂಡಾಯ ಸಾರಿದ ಮೇಲೆ ಕಾನಪೂರದಲ್ಲಿ ನಿಲ್ಲದೆ ದಿಲ್ಲಿಗೆ ಹೋಗಿಬಿಡುವರೆಂದು ಅವನ ಕಲ್ಪನೆಯಾಗಿತ್ತು. ಅದರಂತೆ ಎಲ್ಲರೂ ದಿಲ್ಲಿಯ ಮಾರ್ಗವಾಗಿ ಕಲ್ಯಾಣಪೂರಕ್ಕೆ ಹೋಗಿ ಮುಟ್ಟಿದರು. ಅದಕ್ಕೂ ಮೊದಲು ಅವರು ಸರಕಾರಿ ಖಜಾನೆಯ ಲೂಟಿಯನ್ನು ಮಾಡಿ ಜೇಲು ಒಡೆದು ಕೈದಿಗಳನ್ನು ಮುಕ್ತಗೊಳಿಸಿದ್ದರು. ಕಲ್ಯಾಣಪುರದವರೆಗೆ ನಾನಾಸಾಹೇಬನೂ ಬಂಡುಗಾರ ಸಿಪಾಯರೊಡನೆ ಹೋಗಿದ್ದನು. ಕಲ್ಯಾಣಪುರದಲ್ಲಿ ಸಂಜೆಯಾದ್ದರಿಂದ ವಸತಿಮಾಡಲಾಯಿತು. ಆಗ ಮುಂದೇನು ಎಂಬ ವಿಚಾರನಡೆಯಿತು. ಅಜಿಮುಲ್ಲಾ ಖಾನನು ನಾನಾಸಾಹೇಬನಿಗೆ ದಿಲ್ಲಿಗೆ ಹೋಗಬೇಡೆಂದು ಮತ್ತು ಅಲ್ಲಿ ಹೋದರೆ ನಿನಗೆ ಯಾವ ಪ್ರಾಮುಖ್ಯತೆಯೂ ಸಿಗಲಾರದೆಂದು ಸಲಹೆ ನೀಡಿದನು. ನಾನಾಸಾಹೇಬನಿಗೂ ಮುಂದೆ ಹೋಗುವ ಮನಸ್ಸಿರಲಿಲ್ಲ. ಮರುದಿನ ಕಾನಪೂರಕ್ಕೆ ಮರಳಿ ಸಿಪಾಯಿಗಳು ವ್ಹೀಲರನ ವ್ಯೂಹವನ್ನು ಮುತ್ತಿದರು! ವ್ಹೀಲರನ ಲೆಕ್ಕ ತಪ್ಪಿತು. ಮುತ್ತಿಗೆಯು ಮುಂದೆ ಜೂನ ೨೭ನೆಯ ತಾರೀಖಿನವರೆಗೆ ನಡೆಯಿತು. ಕೋಟೆಯಲ್ಲಿ ಹಿಂದೀಯರೂ ಆಂಗ್ಲರೂ ಕೂಡಿ ೩೧೦ ಸೈನಿಕರು ೩೩೦ ಸ್ತ್ರೀಯರು ಮಕ್ಕಳು ಇದ್ದರು. ಇತರ ಜನರು ಕೂಡಿ ಸುಮಾರು ೯೦೦ ಜನರಿದ್ದರು. ಬಂಡುಗಾರರು ಕೂಡಲೆ ಏರಿ ಹೋಗಿ ದಾಳಿಯನ್ನು ನಡೆಸಿ ಕೋಟೆಯನ್ನು ವಶಪಡಿಸಿಕೊಳ್ಳಲಿಲ್ಲ. ಮುತ್ತಿಗೆ ಹಾಕಿ ಸ್ವಸ್ಥ ಕುಳಿತರು. ಇದರಿಂಧ ಒಳಗಿದ್ದವರು ಘೋರ ಸಂಕಟಕ್ಕೆ ಪಾತ್ರರಾದರು. ಕೋಟೆಯಲ್ಲಿ ಒಂದೇ ಬಾವಿಯಿದ್ದಿತು. ಅದರ ನೀರೂ ಬೇಸಿಗೆ ಮೂಲಕ ಬತ್ತತೊಡಗಿತ್ತಲ್ಲದೆ ಬಾವಿಯ ಹತ್ತರ ಯಾರಾದರೂ ಹೋದರೆ ಸಿಪಾಯಿಗಳು ಒಮ್ಮೆಲೆ ಗುಂಡು ಹಾರಿಸುತ್ತಿದ್ದರು. ಆಹಾರವೂ ದಿನಕಳೆದಂತೆ ಕಡಿಮೆ ಬೀಳಹತ್ತಿತು. ರಾತ್ರಿ ಮೇಯಲಿಕ್ಕೆ ಬಂದ ದನಕರಗಳನ್ನೂ ಕತ್ತೆನಾಯಿಗಳನ್ನೂ ಕತ್ತಲಲ್ಲಿ ನಾಲ್ಕಾರು ಮಂದಿ ಬಂದು ಎಳೆದುಕೊಂಡು ಹೋಗಿ ಕೊಂದು ತಿನ್ನಹತ್ತಿದರು. "ಕ್ಯಾಪ್ಟನ್ ಹಾಲಿಡೆ ಎಂಬುವವನು ಒಂದು ಕುದುರೆಯನ್ನು ಒಳಗೆ ಸಾಗಿಸುವಾಗ ಸಿಪಾಯಿಗಳ ಗುಂಡು ಬಡಿದು ಸತ್ತನು. ಮತ್ತೊಮ್ಮೆ ಒಂದು ನಾಯಿಯನ್ನು ಕೊಂದು ಅಡಿಗೆ ಮಾಡಿದಾಗ ಲೆಫ್ಟನಂಟ ಮೊಬ್ರೆ ಥಾಮಸನ್ ಊಟ ಮಾಡಲು ಒಪ್ಪಲಿಲ್ಲ." (ಸೇನ, ೧೩೯-೪೦) ಸ್ತ್ರೀಯರು ಮಕ್ಕಳ ಸಂಕಟಗಳು

ಅವರ್ಣನೀಯವಾಗಿತ್ತು. ಆದರೂ ಅವರ ಮೇಲೆ ಯಾರೂ ದಯೆ ತೋರ ಲಿಲ್ಲ. ಯುದ್ಧದಲ್ಲಿ ಹತರಾದವರಿಗೆ ಯೋಗ್ಯ ಅಂತ್ಯ ಸಂಸ್ಕಾರವು ಸಹ ಆಗು ವಂತಿರಲಿಲ್ಲ. ಗಾಯಾಳುಗಳಿಗೆ ಮಾತ್ರ ಸ್ತ್ರೀಯರು ಧೈರ್ಯದಿಂದ ಉಪಚಾರ ಮಾಡುತ್ತಿದ್ದರು. ಮುಂದೊಮ್ಮೆ ಗಾಯಾಳುಗಳ ವಸತಿಯು ಬೆಂಕಿ ತಗಲಿ ಸುಟ್ಟುಹೋಯಿತು.

ನಾನಾಸಾಹೇಬನು ಸೈನ್ಯ ಹಾಗು ಸರಕಾರದ ಮುಖ್ಯಸ್ಥನಾದನು. ಸುಬೆ ದಾರ ಟಿಕ್ಕಾಸಿಂಗ ಎಂಬ ಎರಡನೆಯ ನಂಬರಿನ ಅಶ್ವದಳದ ಸವಾರನು ಪ್ರಧಾನ ಸೇನಾಪತಿಯಾದನು. ನಾನಾನ ನೌಕರಿಯಲ್ಲಿದ್ದ ಜ್ವಾಲಾ ಪ್ರಸಾ ದನು ಬ್ರಿಗೇಡಿಯರನಾದನು. ಬಾಬಾ ಭಟ ಎಂಬ ನಾನಾಸಾಹೇಬನ ಒಬ್ಬ ಬಂಧು ನ್ಯಾಯಾಧೀಶನಾದನು. ಮೊಗಲ ಬಾದಶಹನಿಗೆ ನಿಷ್ಠೆ ವ್ಯಕ್ತ ಮಾಡುವ ಒಂದು ಘೋಷಣೆಯನ್ನು ಹೊರಡಿಸಲಾಯಿತು. ಮೊಗಲ ನಿಶಾನೆ ಯನ್ನು ಭಗವಾ ಝೆಂಡಾದೊಡನೆ ಏರಿಸಲಾಗುತ್ತಿತ್ತು.

ಜೂನ ೨೪ರ ವರೆಗೂ ಕಾನಪೂರಕ್ಕೆ ಹೊರಗಿನ ಸಹಾಯ ಬರಲಿಲ್ಲ. ವ್ಹೀಲರನು ಅಂದೇ ಲಖನೌಕ್ಕೆ ತನ್ನ ಕೊನೆಯ ಸಂದೇಶ ಕಳಿಸಿದನು. ಮುತ್ತಿ ಗೆಯ ೨೧ನೆಯ ದಿನ ಒಂದು ಚಮತ್ಕಾರ ನಡೆಯಿತು. ಓರ್ವ ಹೆಂಗಸು ಒಂದು ಮಗುವಿನೊಡನೆ ಕೋಟೆಯ ಕಡೆಗೆ ಬರತೊಡಗಿದ್ದಳು. ಗಾರ್ಡ ನೊಬ್ಬನು ಅವಳಿಗೆ ಗುಂಡುಹಾಕಲು ರೈಫಲ ಎತ್ತಿದಾಗ ಲೆಫ್ಟನಂಟ ಥಾಮ್ಸ ನ್ನನು ಅವನ ಕೈ ಹಿಡಿಯದಿದ್ದರೆ ಆ ಹೆಣ್ಣು ಮಗಳು ಗುಂಡು ತಗಲಿ ಸತ್ತೇ ಹೋಗುತ್ತಿದ್ದಳು. ಹಿಂದೀ ಸಿಪಾಯರ ಕೈದಿನಲ್ಲಿದ್ದ ಶ್ರೀಮತಿ ಗ್ರೀನ್ವೆ ಎಂಬ ಆ ಸ್ತ್ರೀಯು ನಾನಾಸಾಹೇಬನ ಕಡೆಯಿಂದ ಒಂದು ಸಂದೇಶ ತಂದಿದ್ದಳು. ಲಾರ್ಡ ಡಾಲಹೌಸಿಯ ಕೃತಿಗಳಿಗೆ ಸಂಬಂಧವಿಲ್ಲದ ಎಲ್ಲ ವಿಕ್ಟೋರಿಯಾ ಮಹಾರಾಣಿಯ ಪ್ರಜೆಗಳನ್ನೂ ಸುರಕ್ಷಿತವಾಗಿ ಅಲಹಾಬಾದಿಗೆ ಕಳಿಸುವ ಒಂದು ಸೂಚನೆಯು ಅದರಲ್ಲಿತ್ತು. ಪತ್ರಕ್ಕೆ ಸಹಿ ಇರಲಿಲ್ಲ. ಮರುದಿನ ಅಜಿ ಮುಲ್ಲಾ ಮತ್ತು ಜ್ವಾಲಾ ಪ್ರಸಾದರು ಕೋಟೆಗೆ ಬಂದರು. ಎಲ್ಲ ಜನರನ್ನೂ ನೌಕಾ ಮಾರ್ಗವಾಗಿ ಅಲಹಾಬಾದಿಗೆ ಕಳಿಸುವದಾಗಿ ಗೊತ್ತುಪಡಿಸಲಾ ಯಿತು. ಸಾರಿಗೆ ಮತ್ತು ಆಹಾರದ ಪೂರೈಕೆ ಮಾಡಲು ನಾನಾ ಒಪ್ಪಿಕೊಂ ಡನು. ಸ್ತ್ರೀಯರುಮಕ್ಕಳ ಸಂಕಟವನ್ನು ನೋಡಲಾರದೆ ವ್ಹೀಲರನು ಎಲ್ಲ ಶರಾರುಗಳಿಗೆ ಒಪ್ಪಿದನು. ವ್ಹೀಲರನು ಕೈಯಲ್ಲಿಯ ಅಧಿಕಾರಿಗಳನ್ನು ಕಳಿಸಿ

ಸತಿ ಚೌರಾ ಘಾಟದಲ್ಲಿ ತಯಾರಿಸುತ್ತಿದ್ದ ನೌಕೆಗಳ ವ್ಯವಸ್ಥೆ ಸರಿಯಾಗಿದೆ ಎಂದು ಮನವರಿಕೆ ಮಾಡಿಕೊಂಡನು. ಗಂಗೆಯ ದಂಡೆಯ ಮೇಲೆ ನಾಲ್ವತ್ತು ನೌಕೆಗಳು ಸಿದ್ಧವಾಗಿದ್ದವು.

ಜೂನ ೨೭ನೆಯ ದಿನ ಮುಂಜಾನೆ ವ್ಹೀಲರನು ಕೋಟೆಯನ್ನು ಖಾಲಿ ಮಾಡಹತ್ತಿದನು. ಹದಿನಾರು ಆನೆಗಳು, ಎಂಭತ್ತು ಡೋಲಿಗಳು, ಛಕ್ಕಡಿ ಗಳು ಎರಡು ಸಾರೆ ಸಾರಿಗೆ ಮಾಡಿದರೂ ಸ್ತ್ರೀಯರು ಮಕ್ಕಳು ಮತ್ತು ಊನ ರನ್ನು ಮಾತ್ರ ನೌಕೆಗಳಿಗೆ ಸಾಗಿಸುವದು ಸಾಧ್ಯವಾಯಿತು. ಸದೃಢರೆಲ್ಲ ನಡೆದೇ ಹೋದರು. ಜನರಲ್ ವ್ಹೀಲರ ತನ್ನ ಪತ್ನಿ ಮತ್ತು ಮಗಳ ಕೂಡ ಘಾಟಕ್ಕೆ ನಡೆದೇ ಬಂದನು. ಒಂಭತ್ತು ಗಂಟೆಗೆಂದರೆ ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತರು.

ಮುಂದೇನಾಯಿತೆಂಬುದು ಬಂಡಾಯದ ಕಥೆಯಲ್ಲಿ ಸಾಕಷ್ಟು ಪ್ರಸಿದ್ಧಿ ಯನ್ನು ಪಡೆದಿದೆ. ಆದರೆ ಸಾಕ್ಷಿಪುರಾವೆಗಳ ಅಭಾವದ ಮೂಲಕ ಘಟನೆಯ ಸರಿಯಾದ ವರದಿಯು ಲಭ್ಯವಿಲ್ಲ. ಹೊರಡುವ ಮುಂಚೆ ದಂಡೆಯ ಮೇಲೆ ಅಕಸ್ಮಾತ್ತಾಗಿ ಬ್ಯೂಗಲ ಆಯಿತು; ಅದರಿಂದ ಗಾಬರಿಗೊಂಡು ನಾವಿಕರು ಬಿಟ್ಟು ಓಡಿ ಹೋದರು; ಕೂಡಲೆ ದಂಡೆಯ ಮೇಲಿನಿಂದ ನೌಕೆಗಳ ಮೇಲೆ ಗುಂಡಿನ ಸುರಿಮಳೆ ಪ್ರಾರಂಭವಾಯಿತು! ಈ ಭಯಂಕರ ಮೋಸಗಾರಿಕೆಯಿಂದ ಇಂಗ್ಲೀಷರು ಅತ್ಯಂತ ಅಸಹಾಯರಾದರು; ಹೆಂಗಸರು ಹುಡುಗರು ಚೀರುವ ದೃಶ್ಯ ಹೃದಯದ್ರಾವಕವಾಗಿತ್ತು. ನಾವಿಕರೆ ಮೊದಲು ನೌಕೆಗಳನ್ನು ಬಿಟ್ಟು ಓಡಿಹೋಗಲೆತ್ನಿಸಿದರೆಂದೂ ಕೆಲವು ಇಂಗ್ಲೀಷರು ಅವರ ಮೇಲೆ ಗುಂಡುಹಾರಿಸಿ ದರೆಂದೂ, ಅದೇ ಮುಂದಿನ ಅತ್ಯಾಚಾರಕ್ಕೆ ಕಾರಣವಾಯಿತೆಂದೂ ಒಂದು ಅಭಿ ಪ್ರಾಯವಿದೆ. (ಸೆನ್, ೧೫೬) ಪೂರ್ವಸಿದ್ಧತೆಯಿಲ್ಲದಿದ್ದರೆ ಸಿಪಾಯಿಗಳು ತೋಫುಗಳಿಗೆ ಮರೆಯಾಗಿ ನಿಲ್ಲಲು ಏನು ಅಗತ್ಯವಿತ್ತು ಎಂಬುದೂ ಒಂದು ಸಂದಿಗ್ಧಪ್ರಶ್ನೆ. ನೌಕೆಗಳಲ್ಲಿ ಉರುವಲನ್ನು ಬಚ್ಚಿಡಲಾಗಿತ್ತೆಂದೂ ಗೋಳಿ ಬಾರು ಸುರುವಾದೊಡನೆ ನೌಕೆಗಳಿಗೆ ಬೆಂಕಿ ಹತ್ತಿತೆಂದೂ ತಿಳಿಯುತ್ತದೆ. ನಿಜ ಸಂಗತಿ ಏನೇ ಇದ್ದರೂ ಮುಂದೆ ಎರಡೇ ತಾಸುಗಳಲ್ಲಿ ಆ ಶರಣಾಗತರ ಸಂಪೂರ್ಣ ಸಂಹಾರ ಮುಗಿದು ಹೋಯಿತು. ಸೇನಾಪತಿ ವ್ಹೀಲರ ಹತನಾದ! ಅವನ ಮಗಳು ಕಣ್ಮರೆಯಾದಳು! ಸ್ತ್ರೀಯರುಮಕ್ಕಳ ರಕ್ತದಿಂದ ಗಂಗೆ ಕೆಂಪಾ ದಳು. ಒಂದೆ ನೌಕೆ ಪಾರಾದರೂ ಮುಂದೆ ಅದರಲ್ಲಿಯ ನಾಲ್ಕಾರು ಜನರನ್ನು

ದಂಡೆಯ ಮೇಲಿನ ಜನರು ಫಜೀತಿ ಮಾಡಿದರು. ಡಾಲ್ಫಿಸ್ ಮತ್ತು ಥಾಮ್ಸನ್ ಇವರು ಜೀವದಿಂದ ಉಳಿದು ತಮ್ಮ ಅನುಭವಗಳನ್ನು ಬರೆದಿಟ್ಟಿದ್ದಾರೆ.

ನಾನಾಸಾಹೇಬನ ಹುಕುಮಿನ ಪ್ರಕಾರ ಮಧ್ಯಾಹ್ನ ಕೊಲೆಯನ್ನು ನಿಲ್ಲಿಸಿ ಉಳಿದ ಸ್ತ್ರೀಯರುಮಕ್ಕಳನ್ನು ಕೂಡಿ ಒಟ್ಟು ೧೨೫ ಜನರನ್ನು ಕೈದುಮಾಡಿ ಬೀಬಿಘರ ಎಂಬ ಮನೆಗೆ ಸಾಗಿಸಲಾಯಿತು. ದಂಡೆಯ ಮೇಲೆ ಸಿಕ್ಕವರನ್ನು ಜನರು ಮರಳಿ ಕಾನಪೂರಕ್ಕೆ ಕಳಿಸಿದರು. ಇವರು ಸರಾಸರಿ ೬೦ ಜನರಿದ್ದರು. ಇವರೆಲ್ಲರ ಮೇಲೆ ಭಯಂಕರ ಕ್ರೂರತನ ನಡೆಯಿತು. ಗಂಡಸರನ್ನು ಬೇರೆ ಮಾಡಿ ಗುಂಡಿಕ್ಕಿ ಕೊಲ್ಲಲಾಯಿತು. ಸಿಪಾಯರು ಗುಂಡು ಹಾಕುವವರೆಗೂ ಓರ್ವ ಮಹಿಳೆಯು ತನ್ನ ಗಂಡನನ್ನು ಬಿಡದೆ ಅವನೊಡನೆ ಮರಣ ಹೊಂದಿದಳು. ಸ್ತ್ರೀಯರು ಮಕ್ಕಳು ಬೀಬಿಘರದಲ್ಲಿಯೇ ಉಳಿದರು.

ಜುಲೈ ೧ನೆಯ ತಾರೀಖಿಗೆ ಬ್ರಹ್ಮಾವರ್ತದಲ್ಲಿ ನಾನಾಸಾಹೇಬನಿಗೆ ದೊಡ್ಡ ಸಂಭ್ರಮದಿಂದ ರಾಜ್ಯಾಭಿಷೇಕವಾಯಿತು. ಜೂನ ೬ಕ್ಕೆ ನಾನಾ ತಿರುಗಿ ಕಾನಪೂರಕ್ಕೆ ಬಂದನು. ಸಿಪಾಯಿಗಳಿಗೆ ಒಂದು ಲಕ್ಷ ರೂಪಾಯಿಯಷ್ಟು ಸಂಭಾವನೆ ಕೊಡಲಾಯಿತು.

ಈ ಸಮಯಕ್ಕೆ ಅಲಹಾಬಾದದಲ್ಲಿ ಜನರಲ್ ನೀಲ ಮತ್ತು ಹೆವಲಾಕರ ತಾಂಡವ ನೃತ್ಯ ನಡೆದಿತ್ತು. ಕಾನಪೂರದ ಸತಿ ಚೌರಾಘಾಟದ ಅತ್ಯಾಚಾರದಿಂದ ಹೆವಲಾಕನ ಕಣ್ಣು ಕೆಂಪಾದವು. ಕೈದಿನಲ್ಲಿದ್ದ ಸ್ತ್ರೀಯರುಮಕ್ಕಳ ವಿಮೋಚನೆಗಾಗಿ ಅವನು ಕಾನಪೂರಕ್ಕೆ ಧಾವಿಸಿದನು. ಇಂಗ್ಲೀಷ ಸೈನ್ಯವು ಊರಿಗೆ ಮುತ್ತಿಗೆ ಹಾಕಲಿದೆಯೆಂಬ ವಾರ್ತೆಯು ಬಂದೊಡನೆ ಊರ ಜನರು ಗಾಬರಿಯಾದರು. ಹೆವಲಾಕನಕಿಂತ ಮೊದಲು ರೆನಾಡ್ ಎಂಬುವವನ ನಾಯಕತ್ವದಲ್ಲಿಯೂ ಒಂದು ಚಿಕ್ಕ ಅಂಗ್ಲಸೈನ್ಯ ಕಾನಪೂರಕಡೆಗೆ ಹೊರಟಿತ್ತು. ಇಬ್ಬರ ಸೈನ್ಯಗಳೂ ಫತ್ತೇಪೂರದ ಹತ್ತಿರ ಕೂಡಿದವು. ೧೪೦೦ ಬಿಳಿಯರು, ೬೦೦ ಹಿಂದೀಯರು ಮತ್ತು ಎಂಟು ತೋಫುಗಳು ಈ ಸೈನ್ಯದಲ್ಲಿದ್ದವು. ಇಷ್ಟರಲ್ಲಿ ನಾನಾಸಾಹೇಬನ ಸೈನ್ಯ ಫತ್ತೇಪೂರದಲ್ಲಿತ್ತು. ಇದರ ಸಂಖ್ಯೆಯು ಸಾಧಾರಣ ೩॥ ಸಾವಿರದಷ್ಟಿತ್ತು- ರೇನಾಡನೊಬ್ಬನೆ ಮುಂದೆ ಬಂದಿರುವನೆಂಬ ಕಲ್ಪನೆಯಿಂದ ಪೇಶ್ವೆ ಸೇನಾಪತಿ ಜ್ವಾಲಾಪ್ರಸಾದನು ಬೆಲಿಂದಾ ಎಂಬಲ್ಲಿ ಹೆವಲಾಕನ ಸೈನ್ಯಕ್ಕೆ ಎದುರಾಗಿಬಿಟ್ಟ. ನಡೆದ ಯುದ್ಧದಲ್ಲಿ ಜ್ವಾಲಾಪ್ರಸಾದನಿಗೆ ಸೋಲಾಯಿತು. ೧೫೦ ಸೈನಿಕರು ಹತರಾದರು. ಆದರೆ ಹೆವಲಾಕನಿಗೆ ಮಾತ್ರ

ತನ್ನ ದಳದಲ್ಲಿದ್ದ ಕೆಲವು ಸಿಪಾಯಿಗಳ ಮೇಲೆ ಸಂಶಯಬಂದ ಮೂಲಕ ಅವ: ಆಯುಧ ಕುದುರೆಗಳನ್ನು ಕಸಿದು ಅವರನ್ನು ಹೊರಗೆ ಹಾಕಿಬಿಟ್ಟನು.

ಹೆವಲಾಕನ ಸೈನ್ಯ ಫತ್ತೇಪೂರಕ್ಕೆ ಹೊರಟಿತು. ಹೆವಲಾಕನು ದಾರಿಯು ದ್ದಕ್ಕೂ ಬೆಂಕಿಹಚ್ಚದೆ ಒಂದು ಊರನ್ನೂ ಬಿಡಲಿಲ್ಲ. ಫತ್ತೇಪೂರವು ಅವನ ವಶವಾಯಿತು. ಇಂಗ್ಲೀಷರು ಲೂಟಿ-ನಾಶಮಾಡದ ಸ್ಥಳವೇ ಉಳಿಯಲಿಲ್ಲ. ಮುಂದೆ ಜುಲೈ ೧೫ಕ್ಕೆ ಹೆವಲಾಕನ ಸೈನ್ಯವು ನಾನಾಸಾಹೇಬನ ಸೇನಾಪತಿ ಬಾಳಾರಾವನ ಸೈನ್ಯಕ್ಕೆ ಕಾನಪೂರದಿಂದ ೨೨ ಮೈಲು ದೂರದಲ್ಲಿ ಎದುರಾ ಯಿತು. ಬಾಳಾರಾವನ ಸೈನ್ಯ ಸೋತು ಚದುರಿಹೋಯಿತು. ಕಾನಪೂರಕಡೆಗೆ ಹೋಗಲು ಪಾಂಡುನದಿಯನ್ನು ದಾಟಹೋಗುತ್ತಿತ್ತು. ಪಾಂಡುನದಿಗೆ ಮಹಾ ಪೂರವಿದ್ದು ಅದಕ್ಕೆ ಒಂದೇ ಪೂಲು ಇತ್ತು. ಓಡಿಹೋಗುವ ಬಾಳಾರಾವನ ಸೈನ್ಯ ನದಿಯಾಚೆಯಿಂದ ಪೂಲನ್ನು ನಷ್ಟಪಡಿಸುವಷ್ಟರಲ್ಲಿ ಹೆವಲಾಕನೂ ಅಲ್ಲಿಯೇ ಬಂದ. ಭಯಂಕರ ಹೋರಾಟವಾಗಿ ರೇನಾಡನು ಮೊಣಕಾಲಿನಲ್ಲಿ ಗಾಯಗೊಂಡನು. ಬಾಳಾರಾವನಿಗೂ ಪೆಟ್ಟು ಹತ್ತಿತು. ಇಂಗ್ಲೀಷರಿಗೆ ಬಹಳ ಹಾನಿತಟ್ಟಿದರೂ ಸೇತುವೆ ಉಳಿಯಿತು. ಜುಲೈ ೧೫ ಮಧ್ಯಾಹ್ನ ಬಾಳಾ ರಾವನು ಗಾಯಹೊಂದಿ ಬಂದು ನಾನಾಸಾಹೇಬನ ದರ್ಬಾರದಲ್ಲಿ ಆದದ್ದ ನ್ನೆಲ್ಲ ವಿವರಿಸಿದನು. ಎಲ್ಲರೂ ಚಿಂತೆಗೊಳಗಾದರು. ಕಾನಪೂರನ್ನು ಕಾಪಾಡು ವದು ಸಾಧ್ಯವಿಲ್ಲವೆಂದು ನಾನಾಸಾಹೇಬನು ಮನಗಂಡು ಇದ್ದಷ್ಟು ಸೈನ್ಯ ವನ್ನು ಕೂಡಿಸಿ ಹೆವಲಾಕನೊಡನೆ ಯುದ್ಧಮಾಡುವ ಸಿದ್ಧತೆಯಲ್ಲಿ ಮಗ್ನ ನಾದನು.

ಬೀಬೀಘರದಲ್ಲಿದ್ದ ಆಂಗ್ಲ ಸ್ತ್ರೀಯರುಮಕ್ಕಳನ್ನು ಉಳಿಸುವದರ ಸಲು ವಾಗಿ ಹೆವಲಾಕನು ಇಷ್ಟೊಂದು ಅವಸರ ಮಾಡುತ್ತಿರುವನೆಂದು ಎಲ್ಲರಿಗೂ ಗೊತ್ತಿತ್ತು. ಆದ್ದರಿಂದ ಅವರನ್ನೆ ಯಾಕೆ ಕೊಲೆಮಾಡಿಬಿಡಬಾರದೆಂದು ಕೆಲವು ಅಧಮರಿಗೆ ವಿಚಾರಬಂದಿತು. ಎಲ್ಲ ವಿಷಯಗಳೂ ನಾನಾಸಾಹೇಬನ ಕೈಯಲ್ಲಿರಲಿಲ್ಲ. ಜುಲೈ ೧೫ನೆಯ ದಿನ ರಾತ್ರಿ ಬೀಬೀಘರದಲ್ಲಿ ನಡೆದ ಕೊಲೆಯ ಕಥೆ ಹೇಳಲು ಒಬ್ಬಳೂ ಉಳಿಯಲಿಲ್ಲ. ಸಿಪಾಯರು ಸ್ತ್ರೀಯರುಮಕ್ಕಳ ಕೊಲೆಮಾಡಲು ನಿರಾಕರಿಸಿದ್ದರಿಂದ ಚಾಂಡಾಲರನ್ನು ತಂದು ಈ ಕ್ರೂರ ಕೃತ್ಯ ವನ್ನು ಮಾಡಿಸಲಾಯಿತೆಂದು ಹೇಳುತ್ತಾರೆ !

ಬೀಬೀಘರದ ಘೋರ ಕೃತ್ಯದಕ್ಕಿಂತಲೂ ನೀಲ ಹೆವಲಾಕರು ಸಾವಿರಪಟ್ಟು.

ಹೆಚ್ಚಿನ ಕ್ರೂರ ಕೃತ್ಯಗಳನ್ನೆಸಗಿದರು. ಆದರೆ ಹಿಂದೀಯರ ಈ ದುಷ್ಕೃತಿಯು ಅವರ ಕೋಪಕೊಲೆಗಳಿಗೆ ಒಂದು ಸಮರ್ಥನೆ ಕೊಟ್ಟಿತು. ಸತಿ ಚೌರಾ ಘಾಟದ ಮೇಲೆ ವ್ಹೀಲರನ ಜನರ ಕೊಲೆಯು ನಡೆಯುವ ಪೂರ್ವದಲ್ಲಿಯೇ ಅಲಹಾಬಾದದಲ್ಲಿ ನೀಲಸಾಹೇಬನ ಹತ್ಯಾಕಾಂಡವೂ ನಡೆದೇ ಇತ್ತು.

ಕಾನಪೂರದ ಈ ಎರಡು ಕ್ರೂರಕೃತಿಗಳನ್ನು ಬಿಟ್ಟರೆ ಹಿಂದೀಸಿಪಾಯರು ಯಾವದೇ ಬಗೆಯ ಅಮಾನುಷ ಕೃತಿಗಳನ್ನು ಮಾಡಿದ್ದು ತೀರ ಕಡಿಮೆ. ಆದರೆ ಇಂಗ್ಲೀಷರು ಹಿಂದೀಯ ಜನರ ಮೇಲೆ ಮಾಡಿದ ಅತ್ಯಾಚಾರ ಅಷ್ಟಿಷ್ಟಲ್ಲ. ಎಷ್ಟೋ ಬಯಲಿಗೂ ಬರಲಿಲ್ಲ. ಹಿಂದೀಯರ ಕೃತಿಗಳ ಪ್ರಮಾಣ ಮೀರಿ ಕಂಪನಿ ಸೈನ್ಯ ಹತ್ಯಾಕಾಂಡ ನಡೆಸಿತು. “ಝಾಂಸಿಯಲ್ಲಿ ೭೫ ಜನ ಇಂಗ್ಲೀಷರ ಕೊಲೆಗಾಗಿ ೫೦೦೦ ನಾಗರಿಕರು ಹತರಾದರು; ಒಂದು ವಾರ ಊರಿನ ಲೂಟಿ ನಡೆಯಿತು. ದಿಲ್ಲಿಯಲ್ಲಿ ಕೆಲವು ಆಂಗ್ಲರ ಕೊಲೆಯಾದದ್ದಕ್ಕೆ ಸರಾಸರಿ ೨೭೦೦೦ ಜನರನ್ನು ಗುಂಡಿಕ್ಕಿ, ಗಲ್ಲಿಗೆ ಹಾಕಿ ಅಥವಾ ತೋಫಿನ ಬಾಯಿಗೆ ಕೊಟ್ಟು ಕೊಂದರು. ಲಾಹೋರದ ಸೈನ್ಯ ಒಮ್ಮೆ ಬಂಡು ಮಾಡಿ ಈರ್ವರು ಐರೋಪ್ಯ ಅಧಿಕಾರಿಗಳನ್ನು ಕೊಂದಿತ್ತು. ಅದರ ಸಲುವಾಗಿ ೧೫೦ ಜನರಿಗೆ ಮರಣದಂಡನೆಯಾಯಿತು. ತಲೆಹೊಡೆಯುವವರಲ್ಲಿ ಓರ್ವನು ಮೂರ್ಛೆಹೋದ. ಮುಂದೆ ೨೩೭ ಜನರನ್ನು ತಲೆಹೊಡೆಯಲು ಉಳಿದವರು ಕೋಣೆಯೊಳಗಿಂದ ಹೊರಗೆ ಬರಲೇ ಇಲ್ಲ. ಒಳಗೆ ಹೋಗಿ ನೋಡಲು ೪೫ ಜನರು ಉಸಿರು ಕಟ್ಟಿ ಸತ್ತಿದ್ದರು! ಈ ಕೃತಿಯನ್ನು ಮಾಡಿದ ಲಾಹೋರ ಡೆಪ್ಯುಟಿ ಕಮಿಶನರನಾದ ಫ್ರೆಡ್ರಿಕ್ ಕೂಪರನೇ ಈ ಕಥೆಯನ್ನು ಹೇಳಿದ್ದಾನೆ. “ಕಲಕತ್ತಾ ಬ್ಲಾಕ್ ಹೋಲ” ಇದು ಸುಳ್ಳು, ಹುಟ್ಟಿಸಿ ಹೇಳಿದ ಕಥೆ ಎನ್ನುವವರಿದ್ದಾರೆ. ಆದರೆ ಕೂಪರನ ಕೃತಿಯನ್ನು ಯಾರೂ ನಿರಾಕರಿಸಿಲ್ಲ.

“ಬಂಡಾಯದ ಧ್ವಜ ಹಿಡಿದ ಚಿಕ್ಕ ಬಾಲಕರನ್ನು ಗುಂಡು ಹಾಕಿ ಕೊಲ್ಲಲಾಯಿತು. ಕೆಲವು ಜನರು ಅತ್ತಕಡೆಗೆ ಮುಖ ಹೊರಳಿಸಿದ್ದರೆಂದು ನೀಲಸಾಹೇಬನು ಅವರನ್ನು ಗಲ್ಲಿಗೆ ಹಾಕಿದ. ಅಲಹಾಬಾದ ಒಂದರಲ್ಲಿಯೇ ನೀಲಸಾಹೇಬನು ನಿರ್ದಯೆಯಿಂದ ೬೦೦೦ ನಿರಪರಾಧಿಯನ್ನು ಕೊಂದ- ರೇನಾಡನ ಸೈನ್ಯ ಹಾಯ್ದುಹೋದ ದಾರಿಗುಂಟ ಎಲ್ಲ ಹಳ್ಳಿಗಳೂ ಭಸ್ಮೀಭೂತ ವಾಗಿದ್ದವು. ಮುಸಲ್ಮಾನರನ್ನು ಹಂದಿಯ ಚರ್ಮಗಳಲ್ಲಿ ಹೊಲಿದು ನದಿಯಲ್ಲಿ ಒಗೆದದ್ದಾಯಿತು. ಫತ್ತೇಗಡದ ದಿವಾಣನನ್ನು ಗಲ್ಲಿಗೆ ಹಾಕುವ ಮುಂಚೆ

ಅವನ ಬಾಯೊಳಗೆ ಹಂದಿಯ ಮಾಂಸವನ್ನು ಹಾಕಲಾಗಿತ್ತು! ಹಿಂದುಗಳ ಬಾಯಲ್ಲಿ ಗೋಮಾಂಸ ಹಾಕಿದ ಉದಾಹರಣೆಗಳೆಷ್ಟೋ ಆದವು! ಕಪ್ಪು ಜನರು, ಗುಲಾಮರು ನಮ್ಮ ಮೇಲೆ ಹೊರಳಿ ಬಿದ್ದು ನಮ್ಮ ಸ್ತ್ರೀಯರು ಮಕ್ಕಳನ್ನು ಹೀಗೆ ನಡೆಸಿಕೊಂಡರಲ್ಲ, ಎಂಬ ವರ್ಣಾಭಿಮಾನದ ಭಂಗದಿಂದ ಅವರು ಇಷ್ಟು ಕೋಪಿಷ್ಠರಾಗಿದ್ದರು." ( ಅಶೋಕ ಮೆಹತಾ ೫೬-೫೯ ).

ಜುಲೈ ೧೬ಕ್ಕೆ ನಾನಾಸಾಹೇಬನ ಸೈನ್ಯವು ಕಾನಪೂರದ ಪೂರ್ವಕ್ಕೆ ನಾಲ್ಕು ಮೈಲು ದೂರವಿದ್ದ ಆಹರವಾ ಎಂಬಲ್ಲಿ ತಳವೂರಿತು. ಆದರಲ್ಲಿ ಸುಮಾರು ೫೦೦೦ ಸೈನಿಕರಿದ್ದರು. ಜುಲೈ ೧೬ಕ್ಕೆ ಹೆವಲಾಕನು ಅಲ್ಲಿಗೆ ಬಂದು ಮುಟ್ಟಿದನು. ನಾನಾಸಾಹೇಬನು ಬಹಳ ಜಾಣತನದಿಂದ ತನ್ನ ಸೈನ್ಯವ್ಯೂಹ ವನ್ನು ರಚನೆಮಾಡಿದ್ದರೂ ಇಂಗ್ಲೀಷ ಸೈನ್ಯ ಅವರ ಮೇಲೆ ಅತ್ಯಂತ ರಭಸ ದಿಂದ ದಾಳಿಮಾಡಿ ತೋಫುಗಳನ್ನು ವಶಪಡಿಸಿಕೊಂಡಿತು. ನಾನಾಸಾಹೇಬನ ವ್ಯೂಹದಲ್ಲಿ ಅಲ್ಲಲ್ಲಿ ಒಡಕುಗಳಾದವು. ಅವುಗಳನ್ನು ಸರಿಪಡಿಸಿ ಹೋರಾಡು ವದು ಅವರಿಂದ ಆಗಲಿಲ್ಲ. ನಾನಾಸಾಹೇಬನ ಸೈನ್ಯ ಸೋತು ಚದುರಿ ಬಿಟ್ಟಿತು.

ದಿನಾಂಕ ೧೭ಕ್ಕೆ ಹೆವಲಾಕ್ ಕಾನಪೂರದಲ್ಲಿ ಪ್ರವೇಶ ಮಾಡಿ ಪುನಃ ನಗ ರದ ಮೇಲೆ ಯೂನಿಯನ್ ಜಾಕ್ ಹಾರಿಸಿದ. ಬೀಬೀಘರದಲ್ಲಿ ನಡೆದ ಸ್ತ್ರೀಯರುಮಕ್ಕಳ ಕೊಲೆಯ ವಾರ್ತೆಯಿಂದ ಅವನು ಸಂತಪ್ತನಾಗಿ ಮನ ಬಂದಂತೆ ಜನರ ಮೇಲೆ ಸೇಡು ತೀರಿಸಿದ! ಎದುರಿಗೆ ಬಂದವರನ್ನು ಗುಂಡಿಕ್ಕಿ ಕೊಲ್ಲಲಾಯಿತು. ಮುಂದೆ ಕೆಲ ದಿನಗಳಲ್ಲಿ ಹತ್ತು ಸಾವಿರ ಹಿಂದೀ ನಾಗರಿ ಕರು ಕೊಲ್ಲಲ್ಪಟ್ಟರೆಂದೂ ನಡೆದ ಅತ್ಯಾಚಾರಗಳು ನಾದಿರಶಹನನ್ನು ಸಹ ನಾಚಿಸುವಂತಾಗಿದ್ದವೆಂದೂ ಹೇಳುತ್ತಾರೆ. ಕಾನಪೂರದಿಂದ ಬಹಳ ನಾಗರಿ ಕರು ಓಡಿಹೋಗಿದ್ದರು. ಬೀಬೀಘರದಲ್ಲಿಯ ರಕ್ತದ ಕಲೆಗಳನ್ನು ನಾಲಿಗೆ ಯಿಂದ ಸ್ವಚ್ಛ ಮಾಡಲು ಧಾರ್ಮಿಕ ಹಿಂದುಗಳಿಗೆ ಹೆವಲಾಕ್‌ನು ಬಲವಂತ ಪಡಿಸಿದನು!

ಹೀಗೆ ಕಾನಪುರದ ಕಥೆಯು ಭೀಕರ ದುರಂತದಲ್ಲಿ ಮುಗಿದು ಹೋಯಿತು. ಯುದ್ಧದಲ್ಲಿ ಸೋಲಾದೊಡನೆ ನಾನಾಸಾಹೇಬನು ಬ್ರಹ್ಮಾ- ವರ್ತಕ್ಕೆ ಹೋದನು. ಅವನ ಆಶ್ರಿತರನೇಕರು ಸಾವಕಾಶವಾಗಿ ಅವನನ್ನು ಬಿಟ್ಟು ಹೋಗತೊಡಗಿದ್ದರು. ಬ್ರಹ್ಮಾವರ್ತದಲ್ಲಿ ಅವನು ಉಳಿಯುವದು

ಶಕ್ಯವೇ ಇರಲಿಲ್ಲ. ತನ್ನ ಕುಟುಂಬದವರನ್ನು ಕರಕೊಂಡು ಕೆಲವು ವಿಶ್ವಾಸಿಕ ನೌಕರರೊಡನೆ ಆವನು ಗಂಗೆಯನ್ನು ದಾಟಿದನು. ಕೆಲವರು ಬ್ರಹ್ಮಾವರ್ತದಲ್ಲಿಯ ಆವನ ಅರಮನೆಯಲ್ಲಿಯೇ ಉಳಿದರು. ತಾತ್ಯಾ ಟೋಪಿಯು ಆವನ ಕೂಡ ಹೋಗದೆ ಮತ್ತೆ ಸೈನ್ಯ ಕೂಡಿಸಿ ಹೋರಾಡುವ ಕೆಲಸದಲ್ಲಿ ಬಿದ್ದನು. ರಾತ್ರಿ ಕತ್ತಲೆಯಲ್ಲಿ ನದಿ ದಾಟುವಾಗ ನಾನಾಸಾಹೇಬನ ನೌಕಾದೀಪಗಳನ್ನು ನಡುವೆ ನಂದಿಸಲಾಯಿತು. ಆವನು ಮುಳುಗಿದನೆಂದು ಅಲ್ಲಿ ಇದ್ದವರಿಗೆ ಕಲ್ಪನೆಯಾಗಲೆಂದು ಹೀಗೆ ಮಾಡಿದ್ದಾಯಿತು. ಮುಂದೆ ಒಂದೇ ದಿನದಲ್ಲಿ ಇಂಗ್ಲೀಷರು ಬ್ರಹ್ಮಾವರ್ತಕ್ಕೆ ಬಂದರು. ನಾನಾಸಾಹೇಬನ ಅಗಣಿತ ದ್ರವ್ಯವು ಆವರಿಗೆ ದೊರೆಯಿತು. ಬಾವಿಯಲ್ಲಿ ಹಾಕಿದ ಬೆಳ್ಳಿಬಂಗಾರದ ಪಾತ್ರೆಗಳು ದೊರೆತವು. ವಜ್ರದಿಂದ ಕೆತ್ತಿಸಿದ ಹಿಡಿಕೆಯಿದ್ದ ಮೂರು ಲಕ್ಷ ರೂಪಾಯಿ ಬೆಲೆ ಬಾಳುವ ಪೇಶವೆಯರ ಖಡ್ಗವು ಸೀಖರ ಪಾಲಾಯಿತು. ಲೂಟಿಯಾದ ಸಂಪತ್ತನ್ನು ಸೈನಿಕರಿಗೆ ಎಷ್ಟೂ ಕೊಡದೆ ಕಂಪನಿಸರಕಾರವೇ ಎತ್ತಿಹಾಕಿತು! ಬಾವಿಯೊಳಗಿನ ಚಿನ್ನಬೆಳ್ಳಿಗಳ ವಸ್ತುಗಳು ತಮಗೇ ದೊರೆಯುವವೆಂಬ ಕಲ್ಪನೆಯಿಂದ ಸೈನಿಕರು ಬಹಳ ಶ್ರಮಪಟ್ಟು ಅವುಗಳನ್ನು ಹೊರಗೆ ತೆಗೆದಿದ್ದರು. ಅರಮನೆಯು ಸುಟ್ಟು ಭಸ್ಮವಾಯಿತು. ಒಳಗೆ ಕೆಲವು ಸ್ತ್ರೀಯರು ಸುಟ್ಟುಕೊಂಡು ಸತ್ತರು. ನಾನಾಸಾಹೇಬನ ಮಗಳೊ ತಾತ್ಯಾ ಟೋಪಿಯ ಪತ್ನಿಯೊ ಯಾರೊ ಒಬ್ಬ ಸುಂದರಿಯು ಅರಮನೆಗೆ ಬೆಂಕಿಹತ್ತಿದ ಮೇಲೆ ಸಹ ಗಚ್ಚಿಯ ಮೇಲೆ ಶಾಂತವಾಗಿ ಅಡ್ಡಾಡುತ್ತಿದ್ದುದನ್ನು ಸಿಪಾಯರು ಕಂಡರಂತೆ !

ಪೇಶ್ವಾಯಿಯ ಕೊನೆಯ ಸುಂದರ ಕುರುಹಾದ ಅರಮನೆ ಭಸ್ಮವಾಗಿ ಭೂಮಿಗೆ ಬಿದ್ದಿತು. ಪ್ರತ್ಯಕ್ಷ ಕಂಡವರಿಗೆ ಅದೆಷ್ಟು ಸಂಕಟವಾಗಿರಬೇಕು? ನಾನಾಸಾಹೇಬನನ್ನು ಆರೋಪಿ ಮಾಡಿ ಇತಿಹಾಸಕಾರರು ಈಗಲೂ ವಿಚಾರಣೆ ಮಾಡುತ್ತಿದ್ದಾರೆ. ಪರಕೀಯರು ಬಂದು ನಡೆಸಿದ ಇಂಥ ಅತ್ಯಾಚಾರವನ್ನು ತಡೆಗಟ್ಟಲು ಆವನು ಏನೇ ಮಾಡಿದ್ದರೂ ಅದು ನಿಂದ್ಯವೆನಿಸಬಲ್ಲದೇ ?

## ಹತ್ತನೆಯ ಅಧ್ಯಾಯ

## ಲಖನೌ ರೆಸಿಡೆನ್ಸಿಯ ಮುತ್ತಿಗೆ

**೧೮೫೭**ರಲ್ಲಿ ಬಂಡಾಯವು ಪ್ರಾರಂಭವಾದಾಗ ಔಧದ ನವಾಬಶಾಹಿಯು ಅದೇ ನಿರ್ಮೂಲವಾಗಿತ್ತು. ಕೊನೆಯ ನವಾಬನಾದ ವಜೀದ ಅಲಿಯು ಕಲಕತ್ತೆಯಲ್ಲಿ ಬ್ರಿಟಿಶರ ಸ್ಥಾನಬದ್ಧತೆಯಲ್ಲಿದ್ದನು. ಅವನ ಪತ್ನಿ ಬೇಗಮ ಹಜರತ ಮಹಾಲ ತನ್ನ ಬಾಲಕ ರಾಜಕುಮಾರನೊಡನೆ ಮುಂದೆ ಯುದ್ಧದಲ್ಲಿ ಮಹತ್ವದ ಪಾತ್ರವನ್ನು ವಹಿಸಿದಳು. ನವಾಬಶಾಹಿಯ ಅಭಿಮಾನವು ಇನ್ನೂ ಜನರಲ್ಲಿ ತುಂಬಿಕೊಂಡಿತ್ತು. ನವಾಬನಂಥ ಸ್ನೇಹಿತನಿಗೆ ಈ ಅನ್ಯಾಯವಾಗ ಬಾರದಿತ್ತು ಎಂದು ಜನರು ನೊಂದುಕೊಂಡಿದ್ದರು. ನವಾಬನ ತಾಲೂಕ ದಾರರು ಬ್ರಿಟಿಶರ ಹೊಸ ಭೂಧಾರಣಪದ್ಧತಿಯಿಂದ ತುಂಬಾ ರೇಗಿದ್ದರು. ಬಂಗಾಲ ಸೈನ್ಯದಲ್ಲಿ ಔಧದವರೇ ಬಹಳ. ಅವರಿಗೆ ಇದ್ದ ಎಷ್ಟೋ ಸವಲತ್ತು ಗಳು ನವಾಬಶಾಹಿಯೊಡನೆ ಮಾಯವಾದವು. ಕಂಪನಿಸರಕಾರದ ಮೇಲಿನ ವಿಶ್ವಾಸವೇ ಹಾರಿ ಹೋಯಿತು. ಅಷ್ಟರಲ್ಲಿ ಕಾಯ್ದು ಕುಳಿತ ಸಮಯವೂ ಬಂದು ಇಡಿಯ ಔಧವು ಇಂಗ್ಲೀಷರ ಮೇಲೆ ಯುದ್ಧ ಸಾರಿತು. ಇಂಗ್ಲೀಷರು ಔಧದಲ್ಲಿ ಚನ್ನಾಗಿ ಬುದ್ಧಿ ಕಲಿತರು. ಸಿಪಾಯಿಗಳ ಶೌರ್ಯವು ಅವರನ್ನು ಬೆರಗುಗೊಳಿಸಿತು. ಎಷ್ಟೋ ದಿನ ಅವರು ತಾಸು, ನಿಮಿಷ ಎಣಿಸುತ್ತ ಕುಳಿತಿದ್ದರು. ಅಲ್ಲಿ ಸತ್ತಷ್ಟು ಬಿಳಿಯ ಅಧಿಕಾರಿಗಳು ಹಾಗೂ ಸೈನಿಕರು ದಿಲ್ಲಿಯ ಹೊರತು ಬೇರೆ ಎಲ್ಲಿಯೂ ಸಾಯಲಿಲ್ಲ. ಇಂಗ್ಲೀಷರ ಬಗ್ಗೆ ಹಿಂದು ಸ್ತಾನದ ಅಭಿಪ್ರಾಯವೇನಿದೆ ಎಂಬುದನ್ನು ಔಧದ ಯೋಧರು ನಾಲ್ಕು ತಿಂಗ ಳಲ್ಲಿ ಅತ್ಯಂತ ಉಜ್ವಲರೀತಿಯಲ್ಲಿ ತಿಳಿಸಿಕೊಟ್ಟರು. ಔಧದ ಕಥೆ ಪ್ರತಿಯೊಬ್ಬ ಭಾರತೀಯನು ಅಭಿಮಾನಪಡುವಂಥದಾಗಿದೆ.

ಔಧದ ರಾಜಧಾನಿಯಾದ ಲಖನೌದಲ್ಲಿ ಮೇ ೩೦ನೆಯ ದಿನಾಂಕ ಬಂಡಾಯವು ಸುರುವಾಯಿತು. ರಜೆಯ ಮೇಲೆ ಹೋಗಿದ್ದ ಸರ್ ಹೆನ್ರಿ ಲಾರೆನ್ಸ ಮರಳಿ ಬಂದು ಮತ್ತೆ ಚೀಫ ಕಮಿಶನರಾಗಿ ಅದೇ ಎರಡು ಮೂರು

ತಿಂಗಳುಗಳಾಗಿದ್ದವು. ಮಧ್ಯಂತರ ಚೀಫ ಕಮೀಶನರನಾಗಿ ಬಂದ ಕೊವರ್ಲಿ ಜಾಕ್ಸನ್ ಇವನು ತನ್ನ ಕಠೋರವಾದ ಧೋರಣೆಯಿಂದ ವಿಶೇಷ ಅಸಂತೋಷ ವನ್ನುಂಟುಮಾಡಿದ್ದ. ಆದ ಅನ್ಯಾಯಗಳನ್ನೂ ಸುಧಾರಿಸಿಕೊಳ್ಳುವದು ಸರ್ ಹೆನ್ರಿಗೆ ತುಂಬಾ ದುಸ್ತರವಾಯಿತು. ಮೇ ತಿಂಗಳಲ್ಲಿ ಸುತ್ತಲೂ ನಡೆದ ಘಟನೆಗಳಿಂದ ಸಿಪಾಯಿದಳಗಳಲ್ಲಿ ಸಾಕಷ್ಟು ಉದ್ವೇಗವುಂಟಾಗಿತ್ತಲ್ಲದೆ ಧರ್ಮಭ್ರಷ್ಟತೆಯ ಭಯವೂ ಬಹಳವಾಗಿತ್ತು. ೪೮ ನೆಯ ಹಿಂದೀ ಕಾಲ್ದಳದ ಡಾಕ್ಟರನೊಬ್ಬನು ಆಸ್ಪತ್ರೆಯಲ್ಲಿಯ ಒಂದು ಔಷಧದ ಬಾಟ್ಲಿಗೆ ಬಾಯಿ ಹಚ್ಚಿದ್ದು ವಿಶೇಷ ಪ್ರಕ್ಷೋಭಕ್ಕೆ ಕಾರಣವಾಗಿ ಅವನ ಬಂಗಲೆಯೆ ಭಸ್ಮವಾ ಯಿತು! ಸಿಪಾಯರು ಹೊಸ ಕಾಡತೂಸಗಳನ್ನು ಉಪಯೋಗಿಸಲು ನಿರಾಕರಿ ಸುತ್ತಿದ್ದರು. ಸರ್ ಹೆನ್ರಿ ಲಾರೆನ್ಸನು ಬಹಳ ಸಮಾಧಾನದ ಧೋರಣೆಯನ್ನು ಅನುಸರಿಸಹತ್ತಿದನು. ಒಳಸಂಚಿನ ಪತ್ರವ್ಯವಹಾರವನ್ನು ಕೆಲವು ನಿಷ್ಠಾವಂತ ಸಿಪಾಯರು ಚೀಫಕಮೀಶನರರಿಗೆ ಮುಟ್ಟಿಸಿದ್ದಕ್ಕೆ ಸರ್ ಹೆನ್ರಿಯು ಈ ಸಿಪಾಯ ರನ್ನು ದರ್ಬಾರದಲ್ಲಿ ಸಂಭಾವನೆ ಮಾಡಿ ಸರಕಾರದ ಧೋರಣೆ ಬಗ್ಗೆ ದೀರ್ಘ ಭಾಷಣಮಾಡಿದನು. ಮೊಗಲರು, ಹೈದರ, ರಣಜಿತಸಿಂಗ ಇವರೆಲ್ಲರಕ್ಕಿಂತ ನಾವು ಪರಧರ್ಮದ ವಿಷಯದಲ್ಲಿ ಬಹಳ ಸಹನಶೀಲರಿರುವೆವೆಂದೂ ಬ್ರಿಟಿಶಸರಕಾ ರಕ್ಕೆ ಹಿಂದು ಮತ್ತು ಮುಸಲ್ಮಾನ ಧರ್ಮಗಳ ಮೇಲೆ ಯಾವದೂ ದ್ವೇಷವಿಲ್ಲ ವೆಂದೂ ಲಾರೆನ್ಸನು ಕಳಕಳಿಯಿಂದ ತಿಳಿಸಿಹೇಳಿದನು. ಆಗಿನ ಮಟ್ಟಿಗೆ ಸಿಪಾ ಯಿಗಳ ಮೇಲೆ ಇದರಿಂದ ಸ್ವಲ್ಪ ಒಳ್ಳೆಯ ಪರಿಣಾಮವು ಆಗಿರಬೇಕು. ಚೀಫ್ ಕಮೀಶನರರಿಗೆ ಮಾತ್ರ ಸಿಪಾಯಿಗಳ ಅಂತರಂಗವು ಬೆಂದುಹೋಗಿದೆ ಎಂಬುದು ಪೂರಾ ಗೊತ್ತಿತ್ತು. ಪರಿಸ್ಥಿತಿಯು ನಾಜೂಕಾದೊಡನೆ ಸರಕಾರದ ವರು ಲಾರೆನ್ಸನಿಗೆ ಹೆಚ್ಚಿನ ಅಧಿಕಾರವನ್ನು ಕೊಟ್ಟು ಔಧದ ಜವಾಬ್ದಾರಿ ಯನ್ನು ಅವನ ತಲೆಯಮೇಲೆಯೇ ಹೊರಿಸಿದರು. ಬಂಡಾಯದ ಭಯವು ಹೆಚ್ಚತೊಡಗಿದಂತೆ ಲಾರೆನ್ಸನು ಊರಲ್ಲಿಯ ತನ್ನ ವಾಸಸ್ಥಾನವಾದ ರೆಸಿಡೆನ್ಸಿ ಕಟ್ಟಡದಲ್ಲಿಯೇ ಎಲ್ಲ ಬಳಿಯ ನಾಗರಿಕರ ಸೈನ್ಯಸಾಮಗ್ರಿಗಳು ಕೇಂದ್ರೀಕೃತ ವಾಗಬೇಕೆಂದು ಆಜ್ಞೆಮಾಡಿದನು. ಲಖನೌದಿಂದ ಹೊರಟುಹೋದರೆ ಬ್ರಿಟಿಶ್ ಆಳಿಕೆಯ ಗೌರವಭಂಗವಾಗುವದರಿಂದ ಸಾಂಕೇತಿಕವಾಗಿಯಾದರೂ ಕೊನೆ ವರೆಗೆ ಲಖನೌಬಿಡಬಾರದೆಂದು ಅವನ ನಿರ್ಧಾರವಾಗಿತ್ತು. ರೆಸಿಡೆನ್ಸಿಯಲ್ಲಿ ನೀರಿತ್ತು; ಎಲ್ಲರಿಗೂ ಸ್ಥಳವಿತ್ತು. ಸಂರಕ್ಷಕ ಕಂದರಗಳನ್ನು, ಗೋಡೆಗಳನ್ನು

ನಿರ್ಮಾಣ ಮಾಡಲು ಬರುವಂತಿತ್ತು. ೧೭೨೦ ಯೋಧರು ೧೩೮೦ ಇತರರು ಹೀಗೆ ಸುಮಾರು ೩೦೦೦ ಜನರು ರೆಸಿಡೆನ್ಸಿಯಲ್ಲಿ ಬಂದು ಸೇರಿಕೊಂಡರು. ಇವರಲ್ಲಿ ಅರ್ಧದಷ್ಟು ಹಿಂದೀಯರಿದ್ದರು. ಅವರೆಲ್ಲರಿಗೂ ಸಾಲುವಂತೆ ಲಾರೆನ್ಸನು ಧಾನ್ಯ, ಹಿಟ್ಟು ಮೊದಲಾದ ಸಾಮುಗ್ರಿಗಳನ್ನಿಟ್ಟಿದ್ದ. ಕಂಪನಿರಾಜ್ಯಕ್ಕೆ ಸಹಾನುಭೂತಿಯುಳ್ಳವರು ಏನಾದರೂ ಬೇಕೆ ಎಂದು ಕೇಳಿದರೆ ಕಮೀಶನರ ಸಾಹೇಬರು ಕಾಳಿನ ಹೊರತು ಬೇರೆ ಏನೂ ಬೇಡುತ್ತಿರಲಿಲ್ಲ.

ಮೇ ೩೦ನೆಯ ದಿನ ರಾತ್ರಿ ಒಂಭತ್ತು ಗಂಟೆಗೆ ಸಿಪಾಯಿದಳಗಳು ಬಂಡಾಯ ಸಾರಿದವು. ೧೩, ೭೧, ೪೮ ಮೊದಲಾದ ನಂಬರಿನ ಹಿಂದೀ ಕಾಲ್ದಳಗಳು ಬಹುತರ ಇಂಗ್ಲೀಷರ ಕೈಬಿಟ್ಟವು. ಆದರೂ ಒಮ್ಮೆಲೆ ದೊಡ್ಡ ಪ್ರಮಾಣದ ಯಾವ ಹೋರಾಟವೂ ಅಂದು ಆಗಲಿಲ್ಲ. ಕೆಲವು ಸಿಪಾಯರನ್ನು ಕಮೀಶನರರ ಮನೆಯ ಮುಂದೆಯೇ ಮರುದಿನ ಗಲ್ಲಿಗೇರಿಸಲಾಯಿತು. ಹೀಗಿದ್ದರೂ ರೆಸಿಡೆನ್ಸಿಯ ಸಂರಕ್ಷಣೆಗೆ ಸುಮಾರು ೫೦೦ ಹಿಂದೀ ಸೈನಿಕರು ಬ್ರಿಟಿಶರಿಗೆ ನೆರವಾದರು. ಅವರನ್ನು ಸಹ ಇಂಗ್ಲೀಷರು ಬಹಳ ಸಂಶಯದಿಂದ ಕಾಣುತ್ತಿದ್ದರು.

ಲಖನೌದಲ್ಲಿ ಬಂಡಾಯವು ಪ್ರಾರಂಭವಾದಾಗ ಅದು ಇನ್ನೂ ಕಾನಪೂರದಲ್ಲಿ ಪ್ರಾರಂಭವಾಗಿರಲಿಲ್ಲ. ಕಾನಪೂರ ಮುತ್ತಿಗೆ ಜೂನ ನಾಲ್ಕಕ್ಕೆ ಪ್ರಾರಂಭವಾಯಿತು. ಲಖನೌದೊಡನೆ ಔಧದಲ್ಲಿ ಎಲ್ಲಕಡೆಗೂ ಬಂಡಾಯವು ಸುರುವಾಗಿಬಿಟ್ಟಿತು. ಸೀತಾಪೂರ, ಫೈಜಾಬಾದ, ಸಿಕ್ರೋರಾ ಮೊದಲಾದ ಪ್ರದೇಶಗಳಲ್ಲಿ ಬಂಡಾಯವಾಗಿ ಸುಮಾರು ಜೂನ ಮಧ್ಯದೊಳಗೆ ಔಧದಲ್ಲಿ ಬ್ರಿಟಿಶ್ ಸರಕಾರವೇ ಇಲ್ಲದಾಯಿತು. ಗ್ರಾಮಾಂತರದಿಂದ ಬಿಳಿಯ ನಿರ್ವಾಸಿತರು ಲಖನೌಗೆ ಬಂದು ತುಂಬತೊಡಗಿದರು.

ಬಂಡಾಯವು ಪ್ರಾರಂಭವಾದೊಡನೆ ಸರ್ ಲಾರೆನ್ಸ್‌ನು ತನ್ನ ಪರಿವಾರದೊಡನೆ ರೆಸಿಡೆನ್ಸಿಗೆ ಬಂದು ಸೇರಿದನು. ಮಚ್ಛಭವನ ಮೊದಲಾದ ಎಲ್ಲ ಸರಕಾರಿ ಭವನಗಳನ್ನು ಬಿಡಲಾಯಿತು. ಎರಡು ಮೂರು ಕಡೆಗಲ್ಲದೆ ಉಳಿದೆಡೆಗೆ ಆತ್ಮಸಂರಕ್ಷಣೆಯು ಸಾಧ್ಯವೇ ಇಲ್ಲವೆಂಬುದು ಲಾರೆನ್ಸನಿಗೆ ಗೊತ್ತಿತ್ತು. ಎಂಟು ಹತ್ತು ದಿನಗಳಲ್ಲಿ ಎಲ್ಲ ಸೈನಿಕ ಹಾಗೂ ಇತರ ಸಾಮುಗ್ರಿಗಳನ್ನು ರೆಸಿಡೆನ್ಸಿಗೆ ಸಾಗಿಸಿ ರೆಸಿಡೆನ್ಸಿಯ ಆವಾರವನ್ನು ಭದ್ರಪಡಿಸಲಾಯಿತು. ಕಾನಪೂರದಲ್ಲಿಯ ಜನರಲ್ ವ್ಹೀಲರನ ಗೋಳನ್ನು ಸರ್ ಹೆನ್ರಿ ತಿಳಿದುಕೊಂಡಿದ್ದ. ಇಡಿಯ ಔಧ

ದಲ್ಲಿ ರೆಸಿಡೆನ್ಸಿಯ ಹೊರಗೆ ಬ್ರಿಟಿಶ್ ಆಳಿಕೆಯೆಂಬುದೆ ಉಳಿದಿರಲಿಲ್ಲ. ಲಾರೆನ್ಸನು ಅತ್ಯಂತ ಜಾಗರೂಕತೆಯಿಂದ ವರ್ತಿಸತೊಡಗಿದನು. ಕಾನಪೂರ ಬಂಡುಗಾರರು ಲಖನೌಕ್ಕೆ ಬಂದೇ ತೀರುವರೆಂದು ಅವನು ನಿರೀಕ್ಷಿಸುತ್ತಿದ್ದನು.

ಕೆಲಕಾಲ ಸರ್ ಹೆನ್ರಿಯು ರೆಸಿಡೆನ್ಸಿಯಿಂದ ಹೊರಬಿದ್ದು ವೈರಿಯಮೇಲೆ ಬೀಳಬೇಕೆಂದು ವಿಚಾರನಡೆಸಿದ್ದನು. ಆದರೆ ಚಿನ್ಹಾತ ಎಂಬಲ್ಲಿ ಇಂಗ್ಲೀಷರಿಗೆ ಒಂದು ದೊಡ್ಡ ಸೋಲಾಗಿ ಕೆಲವು ಹಿಂದೀ ದಳಗಳು ಮತ್ತೆ ಬಿಟ್ಟುಹೋಗಹತ್ತಲು ಇಂಗ್ಲೀಷರು ರೆಸಿಡೆನ್ಸಿಯಲ್ಲಿ ಪೂರಾ ಸಿಕ್ಕುಬಿದ್ದರು. ದೀರ್ಘಾವಧಿ ಮುತ್ತಿಗೆಯನ್ನು ಸಹನ ಮಾಡದೆ ಗತ್ಯಂತರವೇ ಉಳಿಯಲಿಲ್ಲ.

ರೆಸಿಡೆನ್ಸಿಯ ಎದುರಿಗಿನ ಮತ್ತು ಸುತ್ತಲಿನ ಕೆಲವು ಕಟ್ಟಡಗಳು ಸಿಪಾಯಿಗಳ ಕೈಯಲ್ಲಿದ್ದು ಅವರು ಅಲ್ಲಿಂದ ರೆಸಿಡೆನ್ಸಿಯ ಎಲ್ಲ ಸಂಪರ್ಕವನ್ನೂ ಕಡಿದುಬಿಟ್ಟರು. ರೆಸಿಡೆನ್ಸಿಯ ಮೇಲೆಯೂ ಗುಂಡಿನ ಸುರಿಮಳೆ ನಡೆಯಿತು. ಇದರಿಂದ ರೆಸಿಡೆನ್ಸಿಯಲ್ಲಿದ್ದವರ ಸಂಕಷ್ಟಗಳು ಹೆಚ್ಚಾಗತೊಡಗಿದವು. ಮುತ್ತಿಗೆ ಹಾಕಿದವರ ಸಂಖ್ಯೆಯು ನಿಶ್ಚಿತವಿಲ್ಲದಿದ್ದರೂ ಸುಮಾರು ೧೫ ಪಡೆಗಳು ಅವರಲ್ಲಿದ್ದಿರಬೇಕು. ರೆಸಿಡೆನ್ಸಿಯಲ್ಲಿ ಸ್ತ್ರೀಯರುಮಕ್ಕಳಿಗೆ ಸಂರಕ್ಷಣೆಗಾಗಿ ನೆಲಮನೆ ಕೊಡಲಾಗಿತ್ತು. ಯಾವ ಕುಟುಂಬಕ್ಕೂ ಪ್ರತ್ಯೇಕ ಸ್ಥಳವು ಸಿಗುವದು ಶಕ್ಯವಿರಲಿಲ್ಲ. ಅನಾರೋಗ್ಯದಿಂದ ಅಲ್ಲಲ್ಲಿ ಕಾಲರಾ, ಮೈಲಿ ಬೇನೆಗಳು ತಲೆಯೆತ್ತಿದರೂ ನಿರ್ವಾಹವಿಲ್ಲದೆ ಸಹಿಸಿಕೊಳ್ಳಬೇಕಾಯಿತು. ಸಂಗ್ರಹಸಾಮಗ್ರಿಗಳಲ್ಲಿ ೫೦೦ ಮಣ ಗೋದಿ ೧೦೦ ಮಣ ಕಡಲೆ, ೩೦ ಮಣ ಬೇಳೆ, ಸಾಕಷ್ಟು ಅಕ್ಕಿ ತುಪ್ಪ ಮತ್ತು ೫ ಮಣ ಸಕ್ಕರೆ ಮುಂತಾಗಿದ್ದವು. ಕೊನೆಗೊಮ್ಮೆ ಎಲ್ಲವೂ ತೀರಲುಬಂದಾಗ ಮುಚ್ಚಿಟ್ಟ ಕೆಲವು ಹೆಚ್ಚಿನ ಸಂಗ್ರಹ ಮತ್ತೆ ದೊರೆಯಿತು. ಆದರೂ ಅಲ್ಲಿದ್ದವರಿಗೆಲ್ಲ ಅದು ಈಡಾಗುವದು ಕಷ್ಟವಾಯಿತು. ಬರಬರುತ್ತ ಕಾನಪೂರ ಕೈದಿಗಳ ಪರಿಸ್ಥಿತಿಯೇ ಇವರಿಗೂ ಒದಗಿ, ಗುಬ್ಬಿಗಳನ್ನು ಸಹ ತಿಂದು ಬದುಕುವ ಪ್ರಸಂಗವು ಬಂದಿತು.

ಮುತ್ತಿಗೆಯು ಜೂನ ತಿಂಗಳಲ್ಲಿ ಪ್ರಾರಂಭವಾಗಿ ನೊವೆಂಬರದಲ್ಲಿ ಮುಕ್ತಾಯವಾಗಿದೆ! ಜುಲೈ ಪ್ರಾರಂಭದಲ್ಲಿ ಲಾರೆನ್ಸನು ಡೇರೆಯಲ್ಲಿ ಕುಳಿತಾಗ ಗುಂಡು ಬಡಿದು ಸತ್ತುಹೋದನು. ಸಾಯುವ ಮುಂಚೆ ಸರ ಹೆನ್ರಿ ಎಲ್ಲ ಅಧಿಕಾರಿಗಳಿಗೂ ಸವಿಸ್ತರ ಹುಕುಮು ಕೊಟ್ಟಿದ್ದನು. ಅವನ ಮರಣದಿಂದ ರೆಸಿಡೆನ್ಸಿಯ ನಿವಾಸಿಗಳಿಗೆ ಸಹಿಸದಂಥ ಆಘಾತವಾಯಿತು. ಹೊರಗೆ ಸುದ್ದಿ

ತಿಳಿಯದಂತೆ ಅವನನ್ನು ಹುಗಿದುಬಿಟ್ಟರು. ಜುಲೈ ೬ನೆಯ ತಾರೀಖಿಗೆ ನ್ಯಾಯಮೂರ್ತಿ ಓಮಾನಿ ತಲೆಗೆ ಗುಂಡುಬಡಿದು ಮರಣಹೊಂದಿದನು. ಸರ ಹೆನ್ರಿಯ ಶಿಫಾರಸಿನ ಮೇರೆಗೆ ಚೀಫ್‌ಕಮಿಶನರನಾಗಿದ್ದ ಮೇಜರ ಬ್ಯಾಂಕ್ಸ ಇವನೂ ಜುಲೈ ೨೧ನೆಯ ದಿನಾಂಕ ಗುಂಡಿನಿಂದ ಸತ್ತುಹೋದ. ಬ್ರಿಗೇಡಿಯರ ಇಂಗ್ಲಿಸ್ ಅನಂತರ ಅಧಿಕಾರವನ್ನು ವಹಿಸಿಕೊಂಡನು. ರೆಸಿಡೆನ್ಸಿಯ ಮೇಲೆ ಸಿಪಾಯರ ಗೋಳಿಬಾರು ಎಷ್ಟು ರಭಸದ್ದಿತ್ತೆಂಬುದು ಇದರಿಂದ ಗೊತ್ತಾಗುತ್ತದೆ. ದಿನಾಲು ೧೫ರಿಂದ ೨೦ ಜನರು ಗುಂಡುಗಳಿಂದ ಸಾಯುತ್ತಿದ್ದರು. ಜೊಹಾನ್ಸ್ ಹೌಸ್ ಎಂಬ ಒಂದು ಕಟ್ಟಡದಲ್ಲಿ ಓರ್ವ ಆಫ್ರಿಕನ್ನನಿದ್ದನೆಂದೂ ಅವನು ತನ್ನ ಗುರಿಯನ್ನು ಎಂದೂ ತಪ್ಪಲಿಲ್ಲವೆಂದೂ ಹೇಳುತ್ತಾರೆ. ರೆಸಿಡೆನ್ಸಿಯನ್ನು ಒಂದು ಕೋಟೆಯಂತೆ ಸಂಪೂರ್ಣ ಮರೆಮಾಡುವದೂ ಶಕ್ಯವಿರಲಿಲ್ಲ.

ಕಾನಪೂರ ಹತ್ಯಾಕಾಂಡದ ವರದಿಗಳು ಬರತೊಡಗಿದಂತೆ ಹೆಂಗಸರು ಬಹಳ ಹೆದರಿಬಿಟ್ಟರು. ವೈರಿಗಳ ಕೈಗೆ ಸಿಗತಕ್ಕದ್ದಲ್ಲವೆಂದು ತಮ್ಮತಮ್ಮೊಳಗೆ ಮಾತನಾಡಿಕೊಂಡು ಅನೇಕರು ಆತ್ಮಹತ್ಯೆಗೆ ಸಿದ್ಧರಾಗಿ, ತಮ್ಮ ಹತ್ತಿರ ವಿಷವನ್ನು ಇಟ್ಟುಕೊಂಡೆ ಬಿಟ್ಟರು. ಅಂಥ ಕೆಟ್ಟ ಪ್ರಸಂಗವು ಬಂದರೆ ಹೆಂಗಸರನ್ನು ಮದ್ದಿನಿಂದ ಹಾರಿಸುವ ವಿಚಾರವನ್ನೂ ಕೆಲವು ಸೈನ್ಯಾಧಿಕಾರಿಗಳು ಮಾಡಿದ್ದರು! ವೈರಿಯು ಒಳಗೆ ಬಂದರೆ ತಮ್ಮನ್ನು ಗುಂಡಿಕ್ಕಿ ಕೊಲ್ಲಬೇಕೆಂದು ಅನೇಕ ಹೆಂಡಿರು ತಮ್ಮ ಗಂಡಂದಿರೊಡನೆ ಗೊತ್ತುಮಾಡಿಕೊಂಡಿದ್ದರು !!

ದಿನಗಳೆದಂತೆ ಹೊರಗಿನ ಸಹಾಯದ ನಿರಾಶೆ ಒಡಮೂಡತೊಡಗಿತು. ದಿನಾಲು ಅಧಿಕಾರಿಗಳು, ನಾಗರಿಕರು, ಯೋಧರು ಸಾಯುತ್ತಲೆ ಇದ್ದರು. ಸಿಪಾಯರ ತೋಫುದಳಗಳು ರೆಸಿಡೆನ್ಸಿಯನ್ನು ಒಮ್ಮೆ ವಶಪಡಿಸಿಕೊಳ್ಳಲು ಪ್ರಯತ್ನಪಟ್ಟಾಗ ಅವರಿಗೆ ಓರ್ವ ಯುರೋಪಿಯನ್ ಅಧಿಕಾರಿಯು ನೆರವಿದೆಯೆಂದು ಸಂಶಯ ಪಡಲಾಯಿತು.[1]

ರೆಸಿಡೆನ್ಸಿಯ ಗುಪ್ತಸಂದೇಶಗಳನ್ನು ಅತ್ತಿತ್ತ ಒಯ್ಯಲು ಅಂಗದನೆಂಬ ಗುಪ್ತಚಾರನಿದ್ದನು. ಅವನೊಬ್ಬ ನಿವೃತ್ತ ಸಿಪಾಯಿ; ಕೊನೆವರೆಗೂ ಈ ಕೆಲಸ ಮಾಡಿ ಬ್ರಿಟಿಶರಿಂದ ಸಂಭಾವನೆಯನ್ನು ಪಡೆದನು. ಜುಲೈ ಅಂತ್ಯದಲ್ಲಿ ನಾನಾ ಸಾಹೇಬನು ಸೋತು ಕಾನಪೂರದಿಂದ ಓಡಿಹೋದನೆಂಬ ಸುದ್ದಿಯನ್ನು

---

1 ಸಿಪಾಯಿಗಳೊಡನೆ ಕೆಲವು ಯುರೋಪಿಯನ್ನರಿದ್ದರೆಂದು ಶ್ರೀ. ಸೇನ್ ಕೆಲ ಉದಾಹರಣೆಗಳನ್ನು ಕೊಟ್ಟಿದ್ದಾರೆ.

ಅಂಗದನೆ ಮೊದಲು ರೆಸಿಡೆನ್ಸಿಗೆ ಮುಟ್ಟಿಸಿದನು. "ನಾನಾ ಸೋತು ಓಡಿ ಹೋದನು. ಅವನ ಸೈನ್ಯ ಮಾತ್ರ ಎಲ್ಲಿ ಚದುರಿ ಹೋಯಿತೊ ಕಾಣೆವು, ಎಂದು ಹೆವಲಾಕ್ ಬರೆದು ತಿಳಿಸಿದ್ದ. ಹೆವಲಾಕ್‌ನ ಹಾದಿಯನ್ನು ನೋಡು ವದೇ ರೆಸಿಡೆನ್ಸಿಯವರಿಗೆ ಒಂದು ಉದ್ಯೋಗವಾಯಿತು. ಹೆವಲಾಕ್‌ನು ಜುಲೈ ದಾಟಿಹೋದರೂ ಬರಲೇ ಇಲ್ಲ; ಅವನು ಇತರ ತೊಂದರೆಗಳಲ್ಲಿ ಸಿಕ್ಕು ಬಿದ್ದಿದ್ದನು.

ಹೆವಲಾಕ್‌ನ ಬಳಿ ಬಹಳ ಸೈನ್ಯ ಇರಲಿಲ್ಲ. ಒಂದು ಸಾವಿರ ಇದ್ದಿರಬೇಕು. ಎರಡು ಸಾವಿರ ಸೈನ್ಯಕೊಟ್ಟು ನನ್ನನ್ನು ಬೇಕಾದಲ್ಲಿ ಕಳಿಸಿರಿ ಎಂದು ಅವನು ಹೇಳುತ್ತಿದ್ದನಂತೆ. ಕಾನಪೂರದಲ್ಲಿ ಅವನು ತನ್ನ ಕೆಲವು ಸೈನ್ಯ ಇಡಲೇ ಬೇಕಾಗಿತ್ತು. ಜುಲೈ ೨೯ಕ್ಕೆ ಅವನು ಔಧವನ್ನು ಪ್ರವೇಶಿಸಿದರೂ ಅವನಿಗೆ ಬಹಳ ವಿರೋಧವಿದ್ದಮೂಲಕ ಜುಲೈ ಅಂತ್ಯದ ವರೆಗೆ ಲಖನೌದ ಹತ್ತಿರ ಬರಲು ಶಕ್ಯವಾಗಲಿಲ್ಲ. ಹೆಜ್ಜೆ ಹೆಜ್ಜೆಗೆ ಅವನು ಯುದ್ಧಮಾಡಬೇಕಾಯಿತು. ಲಖನೌ ಮುಟ್ಟುವದರೊಳಗೆ ನಗರದ ಮೇಲೆ ದಾಳಿಮಾಡುವದು ಅಶಕ್ಯವಾಗುವಷ್ಟು ಅವನ ಸೈನ್ಯ ಸಾಮುಗ್ರಿಗಳು ಸೊರಗಿದವು. ಮನಸ್ಸಿಲ್ಲದೆ ಮತ್ತೆ ಅವನು ಹಿಂದೆ ಸರಿದನು. ಹೀಗೆ ಹಿಮ್ಮೆಟ್ಟಿದ್ದೆ ಕಾರಣವಾಗಿ ಅವನಿಗೂ ಜನರಲ್ ನೀಲನಿಗೂ ಬಡಿದಾಟವಾಯಿತು. ಆಗಸ್ಟ ಮೂರಕ್ಕೆ ಸ್ವಲ್ಪ ಹೊಸ ಸೈನ್ಯಸಾಮುಗ್ರಿ ಹೆವ ಲಾಕ್‌ನಿಗೆ ಮುಟ್ಟಿದವು. ಹೆವಲಾಕ್ ಮತ್ತೊಮ್ಮೆ ಲಖನೌದ ಮೇಲೆ ದಾಳಿ ಮಾಡಲು ಹೋಗಿ ವಿಫಲನಾದ; ಇಷ್ಟರಲ್ಲಿ ತಾತ್ಯಾಟೋಪಿಯು ಕಾನಪೂರದ ಮೇಲೆ ದಂಡೆತ್ತಿ ಬರುವನೆಂದು ತಿಳಿದೊಡನೆ ಆಗಸ್ಟ ೧೩ಕ್ಕೆ ಅವನು ಗಂಗೆ ಯನ್ನು ದಾಟಿ ೧೬ನೆಯ ತಾರೀಖಿಗೆ ಬ್ರಹ್ಮಾವರ್ತದಲ್ಲಿದ್ದನು. ಉಗ್ರ ಹೋರಾ ಟವಾದರೂ ಮತ್ತೂ ಸಿಪಾಯರೆ ಸೋತು ಚದುರಿದರು. ಇತ್ತ ರೆಸಿಡೆನ್ಸಿಯಲ್ಲಿ ಮಾತ್ರ ವಿಮೋಚನೆಯ ಆಸೆಯು ದೂರವಾಯಿತು. ಆಗಸ್ಟ ಅಂತ್ಯಕ್ಕೆ ಸಾಮುಗ್ರಿ ಗಳೆಲ್ಲ ತೀರುತ್ತ ಬಂದವು. ಆಹಾರದ ಪರಿಸ್ಥಿತಿ ಕೆಡಹತ್ತಿತು. ಸಿಕ್ಕದ್ದು ತಿಂದು ಬದುಕಿರುವ ಘೋರ ಸಮಯವು ಪ್ರಾಪ್ತವಾಯಿತು. ದಿವಸ ಹೋದಂತೆ ಹೊಸ ಹೊಸ ಸಮಸ್ಯೆಗಳು ಬರತೊಡಗಿದವು. ಒಂದು ದಿನ ರೆಸಿಡೆನ್ಸಿಯ ಒಂದು ಭಾಗ ಬಿದ್ದು ಹನ್ನೆರಡು ಜನರು ಸತ್ತುಹೋದರು ! ಪರಿಸ್ಥಿತಿಯು ಕಠಿಣವಾದಂತೆ ಒಳ್ಳಿದ್ದ ಸಿಪಾಯರ ವರ್ತನವೂ ಸಂಶಯಾಸ್ಪದವಾಯಿತು. ಆದರೆ ಅವರನ್ನು ಬಿಟ್ಟರೆ ಗತಿಯಿರಲಿಲ್ಲ. ಒಂದೆರಡು ಸಲ ಮದ್ದು ಗುಂಡುಗಳಲಿ ...

ಉದಾಹರಣೆಗಳು ಕಂಡು ಬಂದವು.

ಮುತ್ತಿಗೆಯು ನಡೆದಾಗಲೆ ಆಗಸ್ಟ ೬ ನೆಯ ದಿನಾಂಕ ಔಧ ನವಾಬನಿಗೆ ಪಟ್ಟಾಭಿಷೇಕವಾಯಿತು. ವಜೀದ ಅಲ್ಲಿಯ ಅಲ್ಪವಯ ಮಗನಾದ ಬಾಲಿ ಪಟ್ಟಕ್ಕೆ ಬಂದನು. ಬೇಗಮ ಹಜರತಮಹಾಲಳು ಆಡಳಿತದ ಎಲ್ಲ ಅಧಿಕಾರ ವನ್ನು ವಹಿಸಿಕೊಂಡು ದಿಲ್ಲಿಗೆ ವಿಧೇಯಳಾಗಿ ರಾಜ್ಯಸೂತ್ರ ಸಾಗಿಸಿದಳು. ಸಿಪಾಯಿಗಳಿಗೆ ಇಂಥದೊಂದು ಸುವ್ಯವಸ್ಥೆಯು ಬೇಕಾಗಿತ್ತು. ಔಧದ ತಾಲೂಕದಾರರು ಹೊಸ ನವಾಬನಿಗೆ ತೆರಿಗೆ ಕೊಡಹತ್ತಿದರು.

ಆಗಸ್ಟ ೧೦ ನೆಯ ತಾರೀಖಿಗೆ ರೆಸಿಡೆನ್ಸಿಯ ಒಂದು ಗೋಡೆಯು ಒಡೆ ಯಿತು. ಸಿಪಾಯರು ಒಮ್ಮೆಲೆ ಒಳಗೆ ನುಗ್ಗಲಿಲ್ಲ. ಕೂಡಲೆ ಇಂಗ್ಲೀಷರು ಗೋಡೆ ಒಡೆದಲ್ಲಿ ಒಂದು ತೋಫು ನಿಲ್ಲಿಸಿದರು. ಕರ್ನಲ್ ಇಂಗ್ಲಿಸ್‌ನು ಅಂದು ವೈರಿಯ ಗುಂಡಿನಿಂದ ಸತ್ತವನೆ, ಆದರೆ ಸ್ವಲ್ಪದರಲ್ಲಿ ಉಳಿದನು. ಆಗಸ್ಟ ತಿಂಗಳು ಹೀಗೆಯೇ ಸಾಗಹತ್ತಿತು. ಐದುವರೆ ನೂರು ಸ್ತ್ರೀಯರು ಮಕ್ಕಳು ೧೨೦ ಗಾಯಾಳುಗಳು ಕರ್ನಲ್ ಇಂಗ್ಲಿಸ್‌ನ ಕೊರಳಿಗೆ ಬಿದ್ದಿದ್ದರು. ಸಹಾ ಯವು ಬರಲಿದೆ ಎಂದುಅಂಗದನು ಪತ್ರವನ್ನು ತಂದೇ ತರುತ್ತಿದ್ದನು. ಮೊದ ಲಿನ ಒಂದು ನಾಲ್ಕಾಂಶದಷ್ಟು ಆಹಾರವನ್ನು ಸಹ ಒದಗಿಸುವದು ಈಗ ರೆಸಿ ಡೆನ್ಸಿಯಲ್ಲಿ ಕಠಿಣವಾಗಹತ್ತಿತು. ಆಗಸ್ಟ ತಿಂಗಳ ಕೊನೆಗೆ ಸರ್ ಕಾಲಿನ್ ಕ್ಯಾಂಪಬೆಲ್ ಭಾರತದಪ್ರಧಾನ ಸೇನಾಪತಿಯಾಗಿ ಬಂದನು. ಸರ್ ಕಾಲಿನ್ ೬೦ ವರ್ಷದವನಿದ್ದರೂ ಶೌರ್ಯಸಾಹಸಗಳಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದನು. ಅವನು ಬಾರದೆ ಇದ್ದರೆ ಔಧದಲ್ಲಿ ಬ್ರಿಟಿಶರ ಮರ್ಯಾದೆ ಉಳಿಯುವಂತೆ ಇರ ಲಿಲ್ಲ. ಆಗಸ್ಟ ಕೊನೆಗೆ, ಇನ್ನೂ ಒಂದು ತಿಂಗಳ ವರೆಗೆ ನಿಮಗೆ ಪರಿಹಾರ ಬರು ವದಿಲ್ಲವೆಂದು ಹೆವಲಾಕ್‌ನು ಕರ್ನಲ್ ಇಂಗ್ಲಿಸ್‌ನಿಗೆ ತಿಳಿಸಿದನು.

ಸಪ್ಟಂಬರದಲ್ಲಿ ದಿಲ್ಲಿಯು ಕೈವಶವಾದುದರಿಂದ ಇಂಗ್ಲೀಷರಿಗೆ ಎಷ್ಟೋ ಧೈರ್ಯ ಬಂದಿತ್ತು. ದಿಲ್ಲಿ—ಕಾನಪೂರಗಳಲ್ಲಿ ಯುದ್ಧಮಾಡುತ್ತ ಇರುವಾಗ ರೆಸಿಡೆನ್ಸಿ ಕಡೆಗೆ ಲಕ್ಷ್ಯವನ್ನು ಪೂರೈಸುವದು ಇಂಗ್ಲೀಷರಿಗೆ ಕೊನೆವರೆಗೆ ಆಗಲೇ ಇಲ್ಲ. ನಿತ್ಯಾವಶ್ಯಕ ಸಾಮಗ್ರಿಗಳ ದರ ಏರಹತ್ತಿತು. ಹಿಟ್ಟು ಮತ್ತು ಸಕ್ಕರೆ ಅನುಕ್ರಮವಾಗಿ ಒಂದು ಮತ್ತು ಹದಿನಾರು ರೂಪಾಯಿಗಳಿಗೆ ಸೇರು, ತುಪ್ಪ ಹತ್ತು ರೂಪಾಯಿಗೆ ಸೇರು, ಬ್ರಾಂಡಿ ಬಾಟ್ಲ ಡಜನಿಗೆ ೧೮೦ ರೂಪಾಯಿ ಹೀಗೆ ಮಾರತೊಡಗಿದ್ದವು. ಸಾಬೂನು ಸಿಗುತ್ತ ಇರಲಿಲ್ಲ ! ವಿನೋದನೆ ದಿನ

ಗಳು ಬಂದಂತೆ ವಿಪತ್ತುಗಳೂ ಬಂದವು. ಸಂರಕ್ಷಣೆಯ ಮುಖ್ಯಸ್ಥನಾದ ಕ್ಯಾಪ್ಟನ್ ಫಲ್ಟನ್ ೧ಳ ಸಪ್ಟಂಬರಕ್ಕೆ ಗುಂಡು ಬಡಿದು ಸತ್ತನು.

ಇಷ್ಟರಲ್ಲಿ ಹಿಂದೊಮ್ಮೆ ಔಧ ರೆಸಿಡೆಂಟನಾಗಿದ್ದ ಸರ್ ಜೇಮ್ಸ ಔಟ್ರಾಮನು ಮತ್ತೆ ಔಧದ ಚೀಫ್ ಕಮೀಶನರನಾಗಿ ನೇಮಕಹೊಂದಿ ಬಂದನು. ಪರ್ಶಿಯದಿಂದ ಮುಂಬೈ ಸಿಂಹಲಗಳ ಮೇಲೆ ಹಾಯ್ದು ಆವನು ಕಲಕತ್ತೆಗೆ ಬಂದು ಮುಟ್ಟಿದನು. ಹೆವಲಾಕ್‌ನು ಆಗ ಕಾನಪೂರದಲ್ಲಿದ್ದು ಅವನಿಗೂ ಸುತ್ತಲಿನ ಪ್ರದೇಶಗಳನ್ನು ಅಂಕಿತದಲ್ಲಿಟ್ಟುಕೊಳ್ಳುವದು ಶಕ್ತಿಮೀರಿದ ವಿಷಯವಾಗಿತ್ತು. ಅವನ ಸೈನ್ಯಸಂಖ್ಯೆ ಸಾವಿರದೊಳಗೆ ಬಂದಿತ್ತು. ರೆಸಿಡೆನ್ಸಿಯ ಚಿಂತಾಜನಕ ಪರಿಸ್ಥಿತಿಯನ್ನು ಲಕ್ಷ್ಯಕ್ಕೆ ತಂದುಕೊಂಡು ಔಟ್ರಾಮನು ಮೊದಲು ಹೆವಲಾಕ್‌ನೊಡನೆ ಲಖನೌಕ್ಕೆ ಬರಬೇಕೆಂದೇ ನಿಶ್ಚಯಿಸಿದನು. ಸಪ್ಟಂಬರ ಮಧ್ಯದಲ್ಲಿ ಔಟ್ರಾಮನ ಸೈನ್ಯವು ಕಾನಪೂರಕ್ಕೆ ಬಂದು ಲಖನೌಕ್ಕೆ ಹೊರಟಿತು. ಸೈನ್ಯದಲ್ಲಿ ೨೮೦೦ ಯುರೋಪಿಯನ್ನರು ೪೦೦ ಹಿಂದೀಯರು ಇದ್ದರು. ಲಖನೌದ ನೆರೆಹೊರೆಯಲ್ಲಿಯ ಆಲಂಬಾಗವನ್ನು ಔಟ್ರಾಮನು ಸಪ್ಟಂಬರ ೨೫ನೇ ತಾರೀಖಿಗೆ ಬಹಳ ಕಷ್ಟದಿಂದ ಮುಟ್ಟಿದನು.

ಔಟ್ರಾಮನ ಸೈನ್ಯವು ರೆಸಿಡೆನ್ಸಿಗೆ ಮುಟ್ಟಲು ಭಗೀರಥ ಪ್ರಯತ್ನವನ್ನು ಮಾಡತೊಡಗಿತು. ಊರೊಳಗೆ ಕಾಲು ಇಟ್ಟ ಕೂಡಲೆ ಹೆಜ್ಜೆಹೆಜ್ಜೆಗೆ ಸೈನಿಕರ ಮೇಲೆ ಗುಂಡಿನ ಸುರಿಮಳೆ ನಡೆಯಿತು. ಕಾನಪೂರ ಅತ್ಯಾಚಾರಗಳಿಂದ ಕುಪ್ರಸಿದ್ಧಿಯನ್ನು ಹೊಂದಿದ ನೀಲನು ಒಂದು ಮನೆಯೊಳಗಿನಿಂದ ಬಂದ ಗುಂಡು ಬಡಿದು ಸತ್ತನು. ಸೇನಾಪತಿಗಳು ಹೀಗೆ ದುರ್ದೆಸೆಯಿಂದ ಸತ್ತದ್ದು ನೋಡಿದರೆ ಯುದ್ಧವು ಎಷ್ಟು ಉಗ್ರವಾಗಿರಬೇಕೆಂಬುದರ ಕಲ್ಪನೆ ಬರುತ್ತದೆ. ಸರ್‌ಜಾನ್‌ಲಾರೆನ್ಸ್, ಮೇಜರ ಬ್ಯಾಂಕ್ಸ್, ಫಲ್ಟನ್ ಮೊದಲಾದ ಅಧಿಪತಿಗಳು ಸಾಮಾನ್ಯ ಸಿಪಾಯರ ಗುಂಡಿಗೆ ಆಹುತಿಯಾದರು. ಪ್ರಧಾನ ಸೇನಾಪತಿ ಸರ್ ಕಾಲಿನ್ ಕ್ಯಾಂಪಬೆಲ್ ಸಹ ಒಮ್ಮೆ ಬಂಡುಗಾರರ ಕೈಯಿಂದ ಅಕಸ್ಮಾತ್ತಾಗಿ ಪಾರಾಗಿದ್ದಾನೆ; ಅವನ ಸುದೈವವೇ ಅವನನ್ನು ಒಮ್ಮೆ ಪಾರುಮಾಡಿತು. ಕ್ಯಾಂಪಬೆಲ್‌ನು ಒಂದು ಛಕ್ಕಡಿಯಲ್ಲಿ ಅಲಹಾಬಾದದಿಂದ ಕಾನಪೂರಕ್ಕೆ ಹೊರಟಿದ್ದನು. ಅವನೊಡನೆ ಅಂಗರಕ್ಷಕರು ಕೂಡ ಇರಲಿಲ್ಲ. ಎದುರಿಗೆ ಕ್ರಾಂತಿಕಾರರ ಒಂದು ಪಡೆಯು ಹನ್ನೆರಡು ಆನೆಗಳ ಮೇಲೆ ಸವಾರಿಮಾಡಿ ಬಂದಿತು. ಅವರೊಡನೆ ೨೫ ಕುದುರೆ ಸವಾರರೂ ಇದ್ದರು. ಅವರು ಅವನ ಛಕ್ಕಡಿ ನೋಡದೆ

ದಾಟಿ ಹೋದರು ! ಗಾಡಿಯುವನು ಸ್ವಲ್ಪ ಸನ್ನೆ ಮಾಡಿದ್ದರೆ ಸೇನಾಪತಿಗಳ ಕಥೆಯೇ ಮುಗಿಯುತ್ತಿತ್ತು. ಸೇನಾಪತಿಗಳಿಗೆ ಮುಂದೆ ಹೋಗಲು ಧೈರ್ಯ ಸಾಲಲಿಲ್ಲ.[೨]

ಔಟ್ರಾಮನು ರೆಸಿಡೆನ್ಸಿಯಲ್ಲಿ ಪ್ರವೇಶಪಡೆಯಬೇಕಾದರೆ ಆಲಂಬಾಗ ಬಿಡುವ ಮುಂಚೆ ೨೦೭ ಅಧಿಕಾರಿ ಮತ್ತು ಸೈನಿಕರನ್ನು ನಂತರ ೩೧ ಅಧಿಕಾರಿ ಹಾಗೂ ೫೦೪ ಸೈನಿಕರನ್ನು ಕಳೆದುಕೊಂಡನು. ಜನರಲ್ ನೀಲನು ಇವರಲ್ಲಿ ಒಬ್ಬನಾಗಿದ್ದನು. ಸಪ್ಟಂಬರ ೨೬ಕ್ಕೆ ಔಟ್ರಾಮನು ರೆಸಿಡೆನ್ಸಿಯಲ್ಲಿ ಪ್ರವೇಶ ಪಡೆದಾಗ ಅವನಿಗೆ ಎಲ್ಲರನ್ನೂ ಕರಕೊಂಡು ಹೊರಗೆ ಬರುವ ಧೈರ್ಯವಾಗ ಲಿಲ್ಲ. ಮತ್ತೆ ಆಹಾರಸಾಮಗ್ರಿಗಳ ತುಟಾಗ್ರತೆಯಾಯಿತು. ಆದರೆ ಔಟ್ರಾಮ್ ಮತ್ತು ಹೆವಲಾಕ್‌ರ ಸೈನಿಕರು ಊರೊಳಗೆ ಕೆಲವು ಲೂಟಿ ನಡೆಸಿ ಸಾಮಗ್ರಿ ಗಳನ್ನು ತಂದರು. ಸಕ್ಕರೆ ತರಲು ಔಟ್ರಾಮನು ೧೦೦೦ ರೂ. ಕೊಟ್ಟು ಕಳಿ ಸಿದ ಓರ್ವ ವ್ಯಕ್ತಿಯು ಮರಳಿ ಬರಲೆ ಇಲ್ಲ !

ಸರ್ ಕಾಲಿನ ಕ್ಯಾಂಪಬೆಲ್ ನೊವೆಂಬರ ೭ನೆಯ ತಾರೀಖಿಗೆ ಒಂದು ಸಂದೇಶವನ್ನು ಕಾನಪೂರದಿಂದ ಕಳಿಸಿದ. ಕಾಲಪಿಯಲ್ಲಿ ಕೇಂದ್ರೀಕೃತವಾದ ನಾನಾಸಾಹೇಬನ ಸೈನ್ಯವು ಕಾನಪೂರದ ಮೇಲೆ ಮಂಡೆತ್ತಿ ಬರುವ ಹೆದರಿಕೆ ಯಿದ್ದಮೂಲಕ ಸರ್ ಕಾಲಿನ್ ಕ್ಯಾಂಪಬೆಲ್ ಕಾನಪೂರಕ್ಕೆ ಹೋಗಬೇಕಾಗಿತ್ತು. ದಿಲ್ಲಿಯು ಕೈಸೇರಿದ್ದರಿಂದ ಅವನಿಗೆ ಮತ್ತೆ ಕೆಲವು ಹೆಚ್ಚಿನ ಸೈನ್ಯವು ಲಭಿಸಿತು. ಎಲ್ಲ ಉತ್ತಮ ಸಾಮಗ್ರಿಗಳೊಡನೆ ನೊವೆಂಬರ ೧೬ಕ್ಕೆ ಕ್ಯಾಂಪಬೆಲ್ ಲಖ ನೌದ ಮೇಲೆ ದಾಳಿ ಪ್ರಾರಂಭಮಾಡಿದನು. ಮರುದಿನ ಅವನು ರೆಸಿಡೆನ್ಸಿಗೆ ಮುಟ್ಟುವದರೊಳಗೆ ೪೫೬ ಅಧಿಕಾರಿಗಳು ಮತ್ತು ಸೈನಿಕರು ಹತರಾದರು ! ಸ್ವತಃ ಕ್ಯಾಂಪಬೆಲ್ ಗಾಯಗೊಂಡನು. ರೆಸಿಡೆನ್ಸಿ ನಿವಾಸಿಗಳಿಗೆ ಬಹಳ ಸಂತೋಷವಾಯಿತು. ಆದರೂ ಆಪ್ತಬಳಗವನ್ನು ಕಳಕೊಂಡ ಅನೇಕರಿಗೆ ಹಿಂದಿನವೆಲ್ಲ ನೆನಪಾಗಿ ಅತೀವದುಃಖವೂ ಆಯಿತು. ಹೆವಲಾಕ್‌ನು ಮುಂದೆ ಸ್ವಲ್ಪೆ ದಿನಗಳಲ್ಲಿ ದಣಿವು ಅತಿಸಾರಗಳಿಂದ ಮರಣ ಹೊಂದಿಬಿಟ್ಟನು.

ಇಷ್ಟು ಸೈನ್ಯ, ಎಲ್ಲ ಅಧಿಕಾರಿಗಳು ರೆಸಿಡೆನ್ಸಿಯಲ್ಲಿದ್ದರೂ ಅದನ್ನು ರಕ್ಷಿ ಸುತ್ತ ಅಲ್ಲಿಯೆ ಕೂಡ್ರುವ ಧೈರ್ಯ ಅವರಿಗಾಗಲಿಲ್ಲ; ರೆಸಿಡೆನ್ಸಿಯ ಹೊರಗೆ ಸಿಪಾಯಿಗಳ ಆರ್ಭಟೆ ಉಗ್ರವಾಗಿತ್ತು. ಒಂದು ರಾತ್ರಿ ರೆಸಿಡೆನ್ಸಿಯ ಎಲ್ಲ

2. ಸಾವರಕರ, ಪುಟ ೩೬೮-೬೯.

ದೀಪಗಳನ್ನೂ ಹಾಗೆಯೇ ಇಟ್ಟು ಕತ್ತಲಲ್ಲಿ ಕ್ಯಾಂಪಬೆಲ್ ರೆಸಿಡೆನ್ಸಿಯನ್ನು ಖಾಲಿಮಾಡಿಬಿಟ್ಟ. ರೆಸಿಡೆನ್ಸಿ ಖಾಲಿಯಾದ ಮೇಲೆ ಎಷ್ಟೋ ಕಾಲ ಅದರ ಮೇಲೆ ಗೋಳಿಬಾರು ನಡೆದೇ ಇತ್ತು !

ಬ್ರಿಟಿಶರಿಗೆ ಸಿಪಾಯರ ಶೌರ್ಯ, ಹಿಂದೀಯರ ಸಾಹಸ ಇವುಗಳ ಕಲ್ಪನೆಯು ಲಖನೌದಲ್ಲಿ ಪೂರಾ ಬಂದಿತು; ಅವರು ಅಲ್ಲಿ ಎಂದೂ ಮರೆಯದ ಕೆಲವು ಪಾಠಗಳನ್ನು ಕಲಿತರು.

# ಹನ್ನೊಂದನೆಯ ಅಧ್ಯಾಯ

## ಸ್ವಾತಂತ್ರ್ಯದ ಸಂಗ್ರಾಮದೇವತೆ

**೧೮೫೭**ರ ಸ್ವಾತಂತ್ರ್ಯ ಯುದ್ಧದಲ್ಲಿ ಝಾಂಸೀ ಮಹಾರಾಣಿ ಲಕ್ಷ್ಮೀಬಾಯಿಯ ಪಾತ್ರವೆಂದರೆ ಸುವರ್ಣದ ಆಭರಣಕ್ಕೆ ವಜ್ರದ ಕಳೆಕಟ್ಟಿದಂತಿತ್ತು. ಆ ಯುದ್ಧವೆಂದರೆ ಲಕ್ಷ್ಮೀಬಾಯಿ, ಲಕ್ಷ್ಮೀಬಾಯಿಯೆಂದರೆ ಆ ಯುದ್ಧ ಎನ್ನುವಷ್ಟು ಆ ಮಹಾರಾಣಿ ಅದನ್ನು ಬೆಳಗಿಸಿದಳು. ಮಹಾರಾಣಿಯ ಶೌರ್ಯ ಧೈರ್ಯಸಾಹಸಗಳು ನಿಜವಾಗಿಯೂ ಅಪ್ರತಿಮವಾಗಿದ್ದವು. ಕೊನೆಯವರೆಗೂ ವೈರಿಗೆ ಸೊಪ್ಪುಹಾಕದೆ ಅತುಲಪರಾಕ್ರಮದಿಂದ ಕಾದು ಅವಳು ವೀರಸ್ವರ್ಗವನ್ನೈದಿದಳು. ಅವಳ ಚರಿತ್ರೆ ತುಂಬಾ ಹೃದಯಸ್ಪರ್ಶಿಯಾದದ್ದು.

ಮೇ ತಿಂಗಳ ಕೊನೆಯೊಳಗೆ ಉತ್ತರಹಿಂದುಸ್ತಾನದಲ್ಲೆಲ್ಲ ಭೀಕರ ಬಂಡಾಯವಾಗಿ ಬ್ರಿಟಿಶರು ಗಂಟುಕಟ್ಟುವ ಪ್ರಸಂಗ ಬಂದಾಗ ಝಾಂಸೀ ರಾಜ್ಯವು ಆಗಲೆ ಲಕ್ಷ್ಮೀಬಾಯಿಯ ಕೈಬಿಟ್ಟಿತ್ತು. ಅವಳ ಪತಿಯೂ ಹಿಂದಿನ ಮಹಾರಾಜನೂ ಆದ ಗಂಗಾಧರರಾಯನೂ ತೀರಿಕೊಂಡಿದ್ದನು; ಲಕ್ಷ್ಮೀಬಾಯಿ ವಿಧವೆಯಾಗಿದ್ದಳು. ಕಿಲ್ಲೆಯೊಳಗಿನ ಅರಮನೆಯನ್ನು ಬ್ರಿಟಿಶರು ಬಿಡಿಸಿದ್ದರಿಂದ ಊರೊಳಗಿನ ಒಂದು ಸಾಮಾನ್ಯ ವಾಡೆಯಲ್ಲಿ ಆಕೆ ವಾಸವಾಗಿದ್ದಳು. ಅವಳ ಪೆನಶನ್ನು, ಅವಳ ದೇವಸ್ಥಾನದ ಜಹಗೀರು ಮುಂತಾದವುಗಳ ಬಗ್ಗೆ ಬ್ರಿಟಿಶರು ತೋರಿದ ಕ್ಷುದ್ರತನದಿಂದ ಅವಳು ತುಂಬಾ ನೊಂದುಕೊಂಡಿದ್ದರೂ ತನ್ನ ಪರಾವಲಂಬಿ ಜೀವನವನ್ನು ಸಮಾಧಾನದಿಂದ ಸಾಗಿಸಿದ್ದಳು.

ಮನೆಯ ವ್ಯವಸ್ಥೆಯನ್ನೆಲ್ಲ ಅವಳ ತಂದೆ ಮೋರೋಪಂತನು ನೋಡುತ್ತಿದ್ದನು. ಲಕ್ಷ್ಮೀಬಾಯಿಯ ಸ್ವಭಾವ ಸ್ವಲ್ಪ ದಿಟ್ಟವಾದದ್ದೂ ಸ್ವಾತಂತ್ರ್ಯಪ್ರಿಯವಾದದ್ದೂ ಆಗಿತ್ತು. ಗಂಗಾಧರರಾಯನ ಜೀವಮಾನದಲ್ಲಿ ಅವಳು ಚಿಕ್ಕ ವಯಸ್ಸಿನವಳಿದ್ದುದರಿಂದ ಈ ಸ್ವಾತಂತ್ರ್ಯ ಅವಳಿಗೆ ಕಲ್ಪನೆ ಮೀರಿದ ವಿಷಯವಾಗಿತ್ತು. ಅವಳ ವಕೀಲನಾದ ಜಾನ್ ಲ್ಯಾಂಗನು (ಸೇನ ೨೭೦) ಆಕೆಯನ್ನು ಈ ರೀತಿ ಬಣ್ಣಿಸಿದ್ದಾನೆ: "ಆಕೆಯ ಮೈಕಟ್ಟು ದುಂಡಗಾಗಿತ್ತು;

ಕಳೆಕಟ್ಟಿದ ಮುಖ ನೋಡಿದಾಗ ಮೊದಲು ಇವಳು ಅತ್ಯಂತ ಸುಂದರಿಯಾಗಿರ ಬೇಕು ಎನಿಸುತ್ತಿತ್ತು. ನೋಡಿದೊಡನೆ ಇವಳು ತುಂಬಾ ಜಾಣೆಯೆಂದು ತಿಳಿ ಯುವಂತಿತ್ತು. ಕಣ್ಣುಗಳು ಬಹಳೆ ಆಕರ್ಷಕವಾಗಿದ್ದವು. ಮೂಗು ತೀಡಿ ತೆಗೆದಂತಿತ್ತು. ಅವಳ ವರ್ಣವು ತೀರಾ ಗೌರವೆಂದು ಹೇಳಲು ಬರುವಂತಿಲ್ಲ ದಿದ್ದರೂ ಕಪ್ಪಿನ ಅಂಶವು ಎಲ್ಲಿಯೂ ಇರಲಿಲ್ಲ. . . . . . ಅವಳು ಬಿಗಿತಾಗಿ ಬಿಳಿಯ ಸೀರೆಯನ್ನುಟ್ಟಾಗ ಅವಳ ಮೈಕಟ್ಟು ಮತ್ತಷ್ಟು ಅಂದವಾಗಿ ಎಸೆಯುತಿತ್ತು. ”

ಮಹಾರಾಣಿಗೆ ವ್ಯಾಯಾಮ ಮತ್ತು ಆಟಪಾಟಗಳು ಬಹಳೇ ಸೇರುತ್ತಿ ದ್ದವು. ಅಶ್ವಪರೀಕ್ಷೆಯಲ್ಲಿ ಅವಳು ಪಾಂಡಿತ್ಯ ಸಂಪಾದನೆ ಮಾಡಿದ್ದಳು. ಸ್ವತಃ ಉತ್ತಮ ಸವಾರಿಮಾಡುತ್ತಿದ್ದಳು. ನಸುಕಿನಲ್ಲಿ ಲಕ್ಷ್ಮೀಬಾಯಿ ವ್ಯಾಯಾಮ ಶಾಲೆಗೆ ಹೋಗುತ್ತಿದ್ದಳು. ಕುದುರೆ ಹತ್ತಿ ದಿನ್ನೆಹಾರುವದು, ಕಂದಕ ದಾಟು ವದು ಮೊದಲಾದ ಅಗಾಧ ಕಸರತ್ತುಗಳನ್ನು ಮಾಡುತ್ತಿದ್ದಳು. ಒಮ್ಮೊಮ್ಮೆ ಪುರುಷವೇಷವನ್ನು ಧರಿಸಿ ಊರೊಳಗೆ ಆಡ್ಡಾಡುವದೂ ಮಹಾರಾಣಿಗೆ ಸೇರು ತ್ತಿತ್ತು. ಪುರುಷವೇಷ ಲಕ್ಷ್ಮೀಬಾಯಿಗೆ ತುಂಬಾ ಶೋಭಿಸುತ್ತಿತ್ತು.

ಮಹಾರಾಣಿಯು ಒಳ್ಳೆ ಗೌರವಪೂರ್ಣ ವ್ಯಕ್ತಿ; ಮಾನಮರ್ಯಾದೆಗಳನ್ನು ಮೀರಿ ಎಂದೂ ವರ್ತಿಸುತ್ತಿರಲಿಲ್ಲ. ಅವಳ ಸ್ವಭಾವವು ಸ್ತ್ರೀಸಹಜವಾಗಿ ದಯಾಳುವಾಗಿತ್ತು. ಊರೊಳಗಿನ ಭಿಕ್ಷುಕರಿಗೆಲ್ಲ ಒಮ್ಮೆ ಲಕ್ಷ್ಮೀಬಾಯಿ ಅಂಗಿ ಗಳನ್ನು ಹೊಲಿಸಿ ಕೊಟ್ಟಿದ್ದಳು. ಅವಳ ಆದಾಯವು ತಗ್ಗಿದರೂ ಅವಳ ಉದಾರ ತನವು ಎಂಥ ರಾಣಿಗೂ ಶೋಭಿಸುವಂಥದಿತ್ತು. ಪರಿಶುದ್ಧವಾದ ದಿನಚರ್ಯೆ ಯಿಂದ ಅವಳು ಊರ ಜನರ ಪರಮಭಕ್ತಿಗೆ ಪಾತ್ರಳಾಗಿದ್ದಳು. ಪ್ರತಿ ಶುಕ್ರ ವಾರ ಕುಲದೇವತೆಯಾದ ಮಹಾಲಕ್ಷ್ಮಿಯ ದೇವಾಲಯಕ್ಕೆ ರಾಜವೈಭವದಿಂದ ಹೋಗಿಬರುತ್ತಿದ್ದಳು. ಧಾರ್ಮಿಕ ಅನುಷ್ಠಾನಗಳನ್ನು ಭಕ್ತಿಯಿಂದ ಸಾಂಗ ಗೊಳಿಸುತ್ತಿದ್ದಳು.

ಝಾಂಸಿ ಕೋಟೆಯಲ್ಲಿ ಆಗ ೧೨ನೆಯ ಬಂಗಾಲ ಹಿಂದೀ ಕಾಲ್ದಳ, ೧೪ ನೆಯ ಕಚ್ಚಾ (Irregulars) ಅಶ್ವದಳ ಇವುಗಳ ಮುಖ್ಯ ಠಾಣ್ಯವು ಇತ್ತು. ಇವುಗಳ ಮೇಲೆ ಕ್ಯಾಪ್ಟನ್ ಡನ್‌ಲಪ್ ಎಂಬ ಮುಖ್ಯಸ್ಥನಿದ್ದನು. ರಾಜ ಕೀಯ ಆಡಳಿತಾಧಿಕಾರಿಯು ಕ್ಯಾಪ್ಟನ್ ಅಲೆಕ್ಝಾಂಡರ ಸ್ಕೀನ ಎಂಬುವವನಿ ದ್ದನು. ಇನ್ನೂ ಇತರ ಕೆಲವು ಯುರೋಪಿಯನ್ ಅಧಿಕಾರಿಗಳು ಇದ್ದರೂ

ಬಿಳಿಯ ಸೈನ್ಯವು ಮಾತ್ರ ಝಾಂಸಿಯಲ್ಲಿ ಇರಲಿಲ್ಲ. ಅಲ್ಲಿ ಬಿಳಿಯ ಪುರುಷರು, ಸ್ತ್ರೀಯರು, ಮಕ್ಕಳು ಕೂಡಿ ಒಟ್ಟು ಐವತ್ತೈದಕ್ಕೆ ಮೀರಿರಲಿಲ್ಲ.

ಕೋಟೆಯಲ್ಲಿ ಶಸ್ತ್ರಾಗಾರವೂ ಖಜಾನೆಯೂ ಇತ್ತು. ಡನ್ಲಪ್‌ನಿಗೆ ಮೊದ ಮೊದಲು ತನ್ನ ಸೈನ್ಯದ ಬಗ್ಗೆ ಸಂಶಯ ಪಡಬೇಕೆನಿಸಲೇ ಇಲ್ಲ. ಅವನ ಅಂತ ರಂಗದಲ್ಲಿ ಸ್ವಲ್ಪಮಟ್ಟಿಗೆ ಭಯಸಂದೇಹಗಳು ಇದ್ದಿರಬಹುದಾದರೂ ಅವುಗ ಳನ್ನು ಬಹಿರಂಗಪಡಿಸುವದು ಆಗ ಸುರಕ್ಷಿತವೂ ಆಗಿರಲಿಲ್ಲ. ಜೂನ ೧ನೆಯ ತಾರೀಖಿಗೆ ಓರ್ವ ಸೇನಾಪತಿಯ ಬಂಗ್ಲೆಗೆ ಬೆಂಕಿ ಹತ್ತಿತು. ಡನ್ಲಪ್ ಮತ್ತು ಸ್ಕೀನರು, ಬೆಂಕಿಯು ಆಕಸ್ಮಿಕ ಇರಬಹುದೆಂದು ಸ್ವಸ್ಥಚಿತ್ತದಿಂದಿದ್ದರು. ಬಂಗ್ಲೆಗಳಿಗೆ ಬೆಂಕಿ ಇಡುವದು ಸಾಮಾನ್ಯವಾಗಿ ಬಂಡಾಯದ ಮುನ್ಸೂಚನೆ ಎಂಬ ಕಲ್ಪನೆಯೇ ಅವರಿಗೆ ಬರಲಿಲ್ಲ.[1] ಜೂನ ೫ನೆಯ ತಾರೀಖು ಮಧ್ಯಾಹ್ನ ಮೂರುಗಂಟೆಗೆ ಬಂಗಾಲದ ೧೨ನೆಯ ಹಿಂದೀ ಕಾಲ್ದಳದವರು ಶಸ್ತ್ರಾಗಾರದ ದರೋಡೆ ನಡೆದಿದೆ ಎಂದು ಸುಳ್ಳು ಹುಯಿಲನ್ನೆಬ್ಬಿಸಿ ಸ್ಟಾರ್ ಫೋರ್ಟ ಎಂಬ ಲ್ಲಿಗೆ ಧಾವಿಸಿದರು. ಶಸ್ತ್ರಾಗಾರವು ಬಂಡುಗಾರರ ವಶವಾಯಿತು. ಕ್ಯಾಪ್ಟನ್ ಡನ್ಲಪ್ಪನ ನೇತೃತ್ವದಲ್ಲಿ ಯುರೋಪಿಯನ್ನರೆಲ್ಲ ಕೋಟೆ ಸೇರಿದರು. ಇನ್ನೂ ಎಷ್ಟೋ ಸಿಪಾಯಿಗಳು ಬಂಡಿನಲ್ಲಿ ಸೇರಿದ್ದಿಲ್ಲವಾದ್ದರಿಂದ ಡನ್ಲಪ್ಪನ ವಿಶ್ವಾಸ ಪೂರಾ ಹೋಗಿರಲಿಲ್ಲ. ಮರುದಿನ ಕೆಲವು ಪತ್ರಗಳನ್ನು ಬರೆದುಹಾಕಿ ಅಂಚೆ ಕಚೇರಿಯಿಂದ ಮರಳಿ ಬರುವಾಗ ಕ್ಯಾಪ್ಟನ್ ಡನ್ಲಪ್ಪನು ಸಿಪಾಯಿಗಳ ಗುಂಡಿಗೆ ಆಹುತಿ ಬಿದ್ದನು. ಅವನೊಡನೆ ಇನ್ನೂ ಇಬ್ಬರು ಅಧಿಕಾರಿಗಳ

---

1. ಬಂಡಾಯದ ಮುಂಚಿನ ದಿನ ಸಾಹೇಬ ಜನರು ಗಾಬರಿಯಾಗಿ ಕ್ಯಾಪ್ಟನ ಗಾರ್ಡನ ನೊಡನೆ ಲಕ್ಷ್ಮೀಬಾಯಿಯು ಇದ್ದಲ್ಲಿಗೆ ಬಂದು ತಮಗೆ ಆಪತ್ತು ಬರುವದು ನಿಶ್ಚಿತ ವಾದಂತಾಗಿದೆ ಎಂದೂ ಲಕ್ಷ್ಮೀಬಾಯಿ ತನ್ನ ರಾಜ್ಯದ ಸುವ್ಯವಸ್ಥೆಯನ್ನು ಕಾಯಬೇ ಕೆಂದೂ ವಿನಂತಿ ಮಾಡಿಕೊಂಡರು, ಮತ್ತು ತಮ್ಮ ರಕ್ಷಣೆ ಮಾಡಬೇಕೆಂದೂ ಕೇಳಿ ಕಾಗದಪತ್ರಗಳನ್ನು ಸ್ವಾಧೀನ ಪಡಿಸಿದರು. ಲಕ್ಷ್ಮೀಬಾಯಿಗೆ ಸಿಟ್ಟು ಬಂದಿತು. "ಹಿಂದೆ ಪರಿಸ್ಥಿತಿ ಶಾಂತವಿದ್ದಾಗ ನಾನು ರಾಜ್ಯ ಬೇಡಿದರೆ ಕೊಟ್ಟಿರಾ? ಕೊಡಲಿಲ್ಲ. ದಂಗೆಯಲ್ಲಿ ರಾಜ್ಯ ನಿಮ್ಮ ಕಡೆ ಉಳಿಯುವದಿಲ್ಲವೆಂದು ನನಗೆ ಕೊಡಲು ಬಂದಿರುವಿ ರೇನು? ಮಹಾರಾಜರು ಮರಣಹೊಂದುವಾಗ, ನನ್ನ ರಾಣಿ ಹಾಗು ದತ್ತಕ ಮಗ ನಿಗೆ ಮನ್ನಣೆಕೊಡಬೇಕೆಂದು ಅಂಗಲಾಚಿನರು. ಆದರೆ ಏನಾಯಿತು?" ಎಂದು ಲಕ್ಷ್ಮೀಬಾಯಿ ಕಡಕಡನೆ ನಿಷ್ಠುರ ಮಾತನಾಡಿ ಒಳಗೆ ಎದ್ದು ಹೊದಳು.—ಮಾಝಾ ಪ್ರವಾಸ, ಗೋಡಸೆ ಭಟಜಿ. (ಪುಟಗಳು೬೧–೬೨)

ಕೊಲೆ ನಡೆಯಿತು. ಜೂನ ೮ನೇಯ ತಾರೀಖಿನ ವರೆಗೆ ಕಿಲ್ಲೆಯಲ್ಲಿ ಅಡಗಿದ ಯುರೋಪಿಯನ್ನರು ಭದ್ರವಾಗಿ ಕುಳಿತು ಸಿಪಾಯರನ್ನು ಸಮೀಪ ಬರಗೊಡ ಲಿಲ್ಲ. ಸಂಧಾನ ಪ್ರಯತ್ನಕ್ಕೆಂದು ವೇಷ ಬದಲಾಯಿಸಿ ಹೊರಬಿದ್ದ ಮೂವ ರನ್ನು ಹಿಡಿದು ಕೊಲ್ಲಲಾಯಿತು. ಜೂನ ೬ಕ್ಕೆ ಕ್ಯಾಪ್ಟನ್ ಗಾರ್ಡನ್ ಸತ್ತ; ಕೊಲೆಯೊ ಆತ್ಮಹತ್ಯೆಯೊ ತಿಳಿಯಲಿಲ್ಲ. ಲೆಫ್ಟನಂಟ ಪೊವೀಸನನ್ನು ಆವನ ಹಿಂದೀ ನೌಕರನೇ ಕೊಂದುಬಿಟ್ಟ! ಕೋಟೆಯಲ್ಲಿ ಯಾವ ಸಾಮುಗ್ರಿಗಳೂ ಇರ ಲಿಲ್ಲ. ಬಹಳ ದಿನ ಅಲ್ಲಿ ಉಳಿಯುವದು ಸಾಧ್ಯವಿಲ್ಲವೆಂದು ಅಧಿಕಾರಿಗಳು ಮನ ಗಂಡರು. ಕೋಟೆಯೊಳಗಿನ ಹಿಂದೀ ನೌಕರರು ಬಂಡಾಯದ ಚಿಹ್ನೆ ತೋರಿಸ ಹತ್ತಲು ಅಧಿಕಾರಿಗಳು ಸಂಧಾನದ ಪ್ರಯತ್ನವನ್ನು ಮಾಡಿದರು. ಅರಮನೆಗೆ ಸುರಕ್ಷಿತ ದಾರಿಕೊಡುವ ಆಶ್ವಾಸನದ ಮೇಲೆ ಭರವಸೆಯಿಟ್ಟು ಕ್ಯಾಪ್ಟನ್ ಸ್ಕೀನ್ ಕಿಲ್ಲೆಯ ಬಾಗಿಲು ತೆರೆದು ಹೊರಬಿದ್ದ. ಸಿಪಾಯಿಗಳು ಶರಣಾಗತರ ಮೇಲೆ ಬಿದ್ದರು. ಓರ್ವ ಕ್ರಿಸ್ತ ಮಹಿಳೆ ಮತ್ತು ಇಬ್ಬರು ಚಿಕ್ಕಮಕ್ಕಳ ಹೊರತಾಗಿ ಎಲ್ಲ ಬಿಳಿಯರ ಸಂಹಾರವಾಯಿತು. [೨]

ಝಾಂಸಿಯ ವಾರ್ತೆಯನ್ನು ಕೇಳಿ ಇಂಗ್ಲೀಷರು ಸಂತಪ್ತರಾದರು. ಮಹಾ ರಾಣಿಯ ಚಿತಾವಣಿಯಿಲ್ಲದೆ ಇದು ಆಗಿರಲು ಶಕ್ಯವೇ ಇಲ್ಲವೆಂದರು. ಎಲ್ಲ ಬಗೆಯ ಸಾಕ್ಷಿ–ಪುರಾವೆಗಳನ್ನು ಅವಳ ವಿರುದ್ಧ ಸಂಗ್ರಹಿಸಲಾಯಿತು. ಝಾಂಸಿಯ ಸೈನ್ಯವೇ ಅಲ್ಲಿರಲಿಲ್ಲ. ಇದ್ದುದೆಲ್ಲ ಕಂಪನಿಯ ಸೈನ್ಯ. ದಿಲ್ಲಿ, ಕಾನಪೂರ, ಆಗ್ರಾಗಳಂತೆ ಇಲ್ಲಿಯೂ ಅವರು ಬಂಡು ಹೂಡಿದ್ದರು. ಆದರೆ ರಾಣಿಯು ಎಷ್ಟೇ ಸುಸೂತ್ರವಾಗಿದ್ದರೂ ಕಂಪನಿಸರಕಾರದ ಕಣ್ಣಿನಲ್ಲಿ ಒತ್ತುತ್ತಿ ದ್ದಳು. ಸಾತಾರೆಯ ಪ್ರತಾಪಸಿಂಹನಂತೆ ಲಕ್ಷ್ಮೀಬಾಯಿಯ ಮೇಲೆಯೂ ಬಂಡಾಯದ ಒಳಸಂಚಿನ ಆರೋಪವು ಬಂದೇ ಬಿಟ್ಟಿತು!

ಝಾಂಸಿಯ ಪ್ರಕರಣವಾಗಿ ಒಂದು ವರ್ಷದ ಮೇಲೆ ಎಲ್ಲ ದುರ್ಘಟ- ನೆಗಳ ಸವಿಸ್ತರ ವಿಚಾರಣೆ ನಡೆಯಿತು. ಆಗ ನಡೆದ ಯಾವ ಸಾಕ್ಷಿ ಪುರಾವೆ ಗಳಿಂದಲೂ ಲಕ್ಷ್ಮೀಬಾಯಿಯೇ ಜೂನ ೮ರ ಕೊಲೆಯನ್ನು ಮಾಡಿಸಿದಳೆಂದು ಸಿದ್ಧವಾಗಲಿಲ್ಲ. ಹೀಗಿದ್ದರೂ ಅಲ್ಲಿ ನಡೆದ ಕೊಲೆಯ ಸೇಡನ್ನು ಇಂಗ್ಲೀಷರು ನೂರ ಮೇಲಾದರೂ ತಗೆಯಬೇಕಾಗಿತ್ತು. ಲಕ್ಷ್ಮೀಬಾಯಿಗೇ ಬುದ್ಧಿ ಕಲಿಸ

. ಲಕ್ಷ್ಮೀಬಾಯಿ ಶರಣುಬರಲು ಸಂದೇಶ ಕಳಿಸಿದ್ದಳೆಂದೂ ಅವಳೇ ಕೊಲೆ ಮಾಡಿ ಸಿದಳೆಂದೂ ಕೆ ಬರೆದಿದ್ದಾನೆ. Kaye, Vol III, 125.

ಬೇಕೆಂದು ಇಂಗ್ಲೀಷರು ತಮ್ಮ ಪೌರುಷ ತೋರಿಸಿದರು. ಮಹಾರಾಣಿಯ ಖಡ್ಗ ಅವರಿಗೆ ಆಹ್ವಾನವಿತ್ತಿತು.

ಬಂಡಾಯಹೂಡಿದ ಸಿಪಾಯಿಗಳು ಸ್ವಾಭಾವಿಕವಾಗಿ ಲಕ್ಷ್ಮೀಬಾಯಿಗೆ ಮುಖ್ಯಸ್ಥಳಾಗಲು ವಿನಂತಿ ಮಾಡಿಕೊಂಡರು. ಅವಳು ವೀರಾವೇಶವುಳ್ಳವಳಾದರೂ ಆಕೆಯ ಜೀವನದಲ್ಲಿ ಸ್ವಾರಸ್ಯ ಉಳಿದಿರಲಿಲ್ಲ. ಹೆಣ್ಣುಜಾತಿಗೆ ಇದು ಹೇಳಿದ್ದಲ್ಲವೆಂದು ಅವಳು ಮೊದಲು ಉದಾಸೀನಳಾಗಿದ್ದಳು. ಜೂನ ೧೨ ನೆಯ ತಾರೀಖಿಗೆ ಬಂಡುಗಾರರು ದಿಲ್ಲಿಗೆ ಹೊರಟುಹೋದ ಮೇಲೆ ಲಕ್ಷ್ಮೀಬಾಯಿ ತನ್ನಮೇಲೆ ಹೆಚ್ಚಿನ ಜವಾಬ್ದಾರಿಯನ್ನು ಹೊತ್ತುಕೊಳ್ಳದೆ ಬುಂದೇಲಖಂಡದ ಕಮೀಶನರರಿಗೆ ಪತ್ರ ಬರೆದಳು. ಬ್ರಿಟಿಶರ ಕೊಲೆಯನ್ನು ನಿಷೇಧಿಸಿ, ಸದ್ಯದ ಪರಿಸ್ಥಿತಿಯಲ್ಲಿ ಹೆಚ್ಚಿನ ಸೈನ್ಯವಿಲ್ಲದೆ ಶಾಂತಿಸುವ್ಯವಸ್ಥೆಗಳನ್ನು ಕಾಯ್ದುಕೊಳ್ಳುವದು ಕಠಿಣವೆಂದು ತಿಳಿಸಿದಳು. ಅವಳ ಕಡೆಗೆ ಸೈನ್ಯವೇ ಇಲ್ಲದಾಗ ಮತ್ತು ಅವಳು ಪದಚ್ಯುತಳಾಗಿರುವಾಗ ಇಂಥ ಗಂಡಾಂತರವನ್ನು ಎದುರಿಸುವ ಬಗೆ ಹೇಗೆ?

ಲಕ್ಷ್ಮೀಬಾಯಿಯು ರಾಣಿಯಾಗಬೇಕೆಂದು ಸಿಪಾಯಿಗಳು ಆಗ್ರಹ ತೊಟ್ಟರು. ಝಾಂಸಿಯಲ್ಲಿ ಯಾವ ಸರಕಾರವೇ ಉಳಿಯದಿದ್ದ ಮೂಲಕ ಏನಾದರೂ ಮಾಡುವ ಜವಾಬ್ದಾರಿಯು ಲಕ್ಷ್ಮೀಬಾಯಿಯ ಮೇಲೆಯೆ ಬಿದ್ದಿತು. ಆದರೂ ಅಧಿಕಾರವನ್ನು ವಹಿಸಿಕೊಳ್ಳುವ ಮುಂಚಿತವಾಗಿ ಮಹಾರಾಣಿಯು ಕಂಪನಿಸರಕಾರದ ಪರವಾಗಿ ತಾನು ಸೂತ್ರವನ್ನು ವಹಿಸಿರುವದಾಗಿ ಒಂದು ಅಸಂದಿಗ್ಧವಾದ ಘೋಷಣೆಯನ್ನು ಹೊರಡಿಸಿದಳು. (ಸೇನ್, ೩೦೨) ಲಕ್ಷ್ಮೀಬಾಯಿಯ ಪತ್ರಗಳನ್ನೆಲ್ಲ ನೋಡಿಕೊಂಡು ಬುಂದೇಲಖಂಡದ ಕಮೀಶನರರಾದ ಎರಸ್ಕಿನ್ ಸಾಹೇಬನು, ಸದ್ಯಕ್ಕೆ ಆಡಳಿತದ ಸೂತ್ರಗಳು ನಿನ್ನ ಕೈಯಲ್ಲಿಯೇ ಇರಲಿ, ಎಂದು ಲಕ್ಷ್ಮೀಬಾಯಿಗೆ ಬರೆದು ತಿಳಿಸಿದನು. ಭಾರತ ಸರಕಾರವು ಅದಕ್ಕೆ ಒಪ್ಪಿತು.

ಲಕ್ಷ್ಮೀಬಾಯಿಯು ಮತ್ತೆ ಝಾಂಸಿಯ ಮಹಾರಾಣಿಯಾದೊಡನೆ ಸರಕಾರವನ್ನು ಉತ್ತಮ ರೀತಿಯಲ್ಲಿ ಸಾಗಿಸಿದಳು. ರಾಜ್ಯದಲ್ಲಿ ಶಾಂತಿಸುವ್ಯವಸ್ಥೆಗಳು ಪುನಃ ನೆಲೆಸಿದವು. ಕೋಟೆಕೊತ್ತಳಗಳನ್ನು ಚನ್ನಾಗಿ ಭದ್ರಗೊಳಿಸಿದಳು. ಸ್ವತಂತ್ರ ನಾಣ್ಯಗಳನ್ನು ಚಲಾವಣೆಯಲ್ಲಿ ತಂದಳು. ಮತ್ತು ಕಿಲ್ಲೆಯಲ್ಲಿ ಫಿರಂಗಿ ಜನರು ನಿವಾಸಿಸಿದ್ದರೆಂದು ಗೋಮೂತ್ರದಿಂದ ಶುದ್ಧಮಾಡಿ

ಲಕ್ಷ್ಮೀಬಾಯಿ ಕೋಟೆಯಲ್ಲಿ ಇರಲಿಕ್ಕೆ ಹೋದಳು.

ಲಕ್ಷ್ಮೀಬಾಯಿಗೆ ರಾಜ್ಯದಲ್ಲಿ ಕೆಲವು ವೈರಿಗಳೂ ಇದ್ದರು. ಅತ್ತ ಬ್ರಿಟಿಶರು ಶೋರಿಕೆಗೆ ಒಳ್ಳೆಯ ಮಾತುಗಳನ್ನಾಡುತ್ತ ಲಕ್ಷ್ಮೀಬಾಯಿಯ ಬಗ್ಗೆ ತುಂಬಾ ಸಂಶಯಪಟ್ಟುಕೊಂಡಿದ್ದರು. ಝಾಂಸಿ ರಾಜಮನೆತನದ ಬಂಧುಗಳಲ್ಲಿ ಸದಾಶಿವರಾವ ಎಂಬುವವನು ತಾನೇ ಮಹಾರಾಜನೆಂದು ಸಾರಿ ಬ್ರಿಟಿಶರ ಮತ್ತು ರಾಣಿಯ ವಿರುದ್ಧ ಯುದ್ಧ ಸಾರಿದನು. ಲಕ್ಷ್ಮೀಬಾಯಿ ಅವನನ್ನು ಸೋಲಿಸಿ ಝಾಂಸಿಯಲ್ಲಿ ಬಂಧನದಲ್ಲಿಟ್ಟಳು. ಓರ್ಛಾ ಮತ್ತು ದಾತಿಯಾ ಎಂಬ ಎರಡು ಬುಂದೇಲಾ ಸಂಸ್ಥಾನಗಳು ಝಾಂಸಿಯಲ್ಲಿಯ ಮರಾಠಾ ಆಳಿಕೆಯನ್ನು ನಿರ್ಮೂಲಗೊಳಿಸಲು ಹವಣಿಸಿದವು. ಓರ್ಛಾದ ದಿವಾಣನು, ಕಂಪನಿ ಸರಕಾರದಷ್ಟೇ ನಾವೂ ಪೆನ್‌ಶನ್ ಕೊಡುತ್ತೇವೆ ರಾಜ್ಯವನ್ನು ಬಿಟ್ಟು ಬಿಡೆಂದರೆ, ಲಕ್ಷ್ಮೀಬಾಯಿ ಒಪ್ಪಲಿಲ್ಲ. ಮುಂದೆ ಓರ್ಛಾದ ದಿವಾಣ ನಥೆಖಾನನು ಝಾಂಸಿಯ ಮೇಲೆ ದಾಳಿಮಾಡಿದನು. ಈ ಜನರನ್ನೆದುರಿಸಲು ಲಕ್ಷ್ಮೀಬಾಯಿ ಮೊದಲು ಯುದ್ಧದ ಸಿದ್ಧತೆಯನ್ನು ನಡೆಸಿದಳು. ಅದೇ ಕಾಲಕ್ಕೆ, ಈ ಎಲ್ಲ ಜವಾಬ್ದಾರಿಯಿಂದ ತನ್ನನ್ನು ಮುಕ್ತ ಮಾಡಬೇಕೆಂದೂ ಸಾಲವು ಬಹಳಾಗತೊಡಗಿದೆ ಎಂದೂ ೧-೧-೧೮೫೮ಕ್ಕೆ ಲಕ್ಷ್ಮೀಬಾಯಿ ಸರ್ ರಾಬರ್ಟ ಹ್ಯಾಮಿಲ್ಟನ್ನನಿಗೆ ಮತ್ತೆ ಪತ್ರ ಬರೆದಳು. ಪತ್ರಕ್ಕೆ ಉತ್ತರವೇ ಬರಲಿಲ್ಲ. ಆತ್ಮಸಂರಕ್ಷಣೆಗೆಂದು ಅವಳು ಸೈನಿಕ ತಯಾರಿಯನ್ನು ನಡೆಸಹತ್ತಿದಳು. ನಥೆಖಾನನನ್ನು ಅವಳು ಸೋಲಿಸಿದಳು. ಆದರೆ ಮುಂದೆ ಅವಳ ಸೈನ್ಯದಲ್ಲಿ ಬಂಡುಗಾರರು ಸೇರಿದರು. ಫೆಬ್ರುವರಿ ೧೮೫೮ರ ವರೆಗೆ ಲಕ್ಷ್ಮೀಬಾಯಿಯು, ನೀವು ಬಂದಾಗ ನಿಮಗೆ ರಾಜ್ಯ ಒಪ್ಪಿಸುವೆನೆಂದು ಬ್ರಿಟಿಶರಿಗೆ ಭರವಸೆ ಕೊಡುತ್ತಲೆ ಇದ್ದಳು.

ಬ್ರಿಟಿಶರು ಮಾತ್ರ ಲಕ್ಷ್ಮೀಬಾಯಿಯನ್ನು ನಂಬಲಿಲ್ಲ. ಲಕ್ಷ್ಮೀಬಾಯಿಗೆ ಅವರ ವರ್ತನೆಯ ಅರ್ಥವಾಯಿತು. ಮಾರ್ಚ ತಿಂಗಳಲ್ಲಿ ಮಹಾರಾಣಿಯು ಯುದ್ಧಕ್ಕೆ ಸಿದ್ಧಳಾದಳು. ಅವಳ ಸೈನ್ಯದಲ್ಲಿ ಬಂಡುಗಾರರೆ ತುಂಬಿದರು. ಸರ್ ಹ್ಯೂ ರೋಜನು ಬಲಿಷ್ಠ ಸೈನ್ಯದೊಡನೆ ಮಾರ್ಚ ೨೨ನೆಯ ತಾರೀಖಿನ ದಿನ ಝಾಂಸಿಯನ್ನು ಮುತ್ತಿದನು. ಮಹಾರಾಣಿಗೆ ಮುಂದಿರುವ ಗಂಡಾಂತರದ ಪೂರಾ ಕಲ್ಪನೆಯಿತ್ತು. ಯುದ್ಧವು ಸುರುವಾದೊಡನೆ ಇಂಗ್ಲೀಷ ಸೈನ್ಯದ ಹಿಂಭಾಗದ ಮೇಲೆ ಹಲ್ಲೆ ಮಾಡಬೇಕೆಂದು ಮಹಾರಾಣಿಯು ತಾತ್ಯಾ

ಟೋಪಿಗೆ ವಿನಂತಿ ಮಾಡಿಕೊಂಡಿದ್ದಳು. ಮಾರ್ಚ ತಿಂಗಳ ಕೊನೆಯವರೆಗೆ ತಾತ್ಯಾ ಬರಲಿಲ್ಲ. ಆದರೂ ಲಕ್ಷ್ಮೀಬಾಯಿ ಅಪ್ರತಿಮ ಶೂರತನದಿಂದ ಇಂಗ್ಲೀಷರನ್ನು ಎದುರಿಸಿದಳು. ಲಕ್ಷ್ಮೀಬಾಯಿಯ ತೋಫುಗಳು ಇಂಗ್ಲೀಷರಕಿಂತ ಭಯಂಕರವಾಗಿದ್ದವು. ಮಹಾರಾಣಿಯಷ್ಟು ಸುಸಂಘಟಿತವಾಗಿಯೂ ಉಗ್ರವಾಗಿಯೂ ಹಿಂದುಸ್ತಾನದಲ್ಲಿ ಇಂಗ್ಲೀಷರೊಡನೆ ಇನ್ನಾರೂ ಯುದ್ಧ ಮಾಡಲಿಲ್ಲವೆಂದು ಹೇಳಬಹುದು. ಊರ ಹೊರಗೆ ಶಿಬಿರ ಹೊಡೆದ ಇಂಗ್ಲೀಷರಿಗೆ ಲಕ್ಷ್ಮೀಬಾಯಿಯು ಕೋಟೆಯ ಗೋಡೆಯ ಮೇಲೆ ಅಡ್ಡಾಡುತ್ತಿದ್ದುದು ಎಷ್ಟೋ ಸಲ ಕಾಣುತ್ತಿತ್ತು. ತೋಫುಗಳಿಗೆ ಮದ್ದುಗುಂಡುಗಳನ್ನು ಸ್ತ್ರೀಯರು ತಂದು ಕೊಡುತ್ತಿದ್ದರು ! ಲಕ್ಷ್ಮೀಬಾಯಿ ಭಾರತದ ವೀರಮಹಿಳಾಧರ್ಮದ ಮೂರ್ತಸ್ವರೂಪಳಾಗಿದ್ದಳು. ಭಾರತದಲ್ಲಿಯೇ ಆಗಲಿ ಜಗತ್ತಿನಲ್ಲಿಯೇ ಆಗಲಿ ಇಂಥ ಉಜ್ಜ್ವಲ ಉದಾಹರಣೆಗಳು ನಮಗೆ ಮತ್ತೆಮತ್ತೆ ನೋಡಲು ಲಭಿಸಲಾರವು. ಫ್ರಾನ್ಸ್‌ದೇಶದ ಜೋನ್ ಆಫ್ ಆರ್ಕ ಇವಳೊಂದೇ ಉದಾಹರಣೆ ಈ ಮಹಾರಾಣಿಯ ವೀರಕಥೆಗೆ ಸರಿಸಮಾನವಾಗಬಹುದು.

ತಾತ್ಯಾ ಟೋಪಿ ೩೧-೩-೧೮೫೮ನೆಯ ದಿನ ಝಾಂಸಿಗೆ ೨೦,೦೦೦ ಸೈನ್ಯದೊಡನೆ ಬಂದನು. ಅವನ ಸೈನ್ಯ ಶಿಸ್ತಿನದಿದ್ದರೆ ಇಂಗ್ಲೀಷರು ಅವನ ಮುಂದೆ ನಿಲ್ಲುವದೇ ಶಕ್ಯವಾಗುತ್ತಿರಲಿಲ್ಲ. ಯುದ್ಧವು ಎಷ್ಟೇ ತುಮುಲವಾದರೂ ತಾತ್ಯಾ ಸೋತು ಚದುರಿದನು. ತಾತ್ಯಾ ಟೋಪಿಯ ಸೈನ್ಯಕ್ಕೆ ಸೋಲು ಪ್ರಾಪ್ತವಾಗಲು ಲಕ್ಷ್ಮೀಬಾಯಿ ಗೆಲುವಿನ ಆಸೆ ಬಿಟ್ಟಳು. ಆದರೂ ಯುದ್ಧವು ನಡೆಯಿತು. ಇಂಗ್ಲೀಷರಿಗೆ ಏನೂ ಸಿಗಬಾರದೆಂದು ಸುತ್ತಲಿನ ದೇಶವನ್ನು ಸಹ ಮಹಾರಾಣಿ ಹಾಳುಮಾಡಿದ್ದಳು. ಸಿಂದೆ ಮತ್ತು ಓರ್ಛಾದ ರಾಣಿ ಇಂಗ್ಲೀಷರಿಗೆ ಬಹಳ ನೆರವಾದರು. ತಾತ್ಯಾ ಟೋಪಿ ಹಿಂದೆ ಸರಿದರೂ ಮಹಾರಾಣಿಯ ಸೈನ್ಯ ಎಷ್ಟೂ ಎದೆಗುಂದಲಿಲ್ಲ. ಎಷ್ಟೋ ಕಾಲ ಝಾಂಸಿ ಸೈನ್ಯ ಶಿಸ್ತಿನಿಂದ ಮಾಡುತ್ತಿದ್ದ ತೋಫಿನ ಗೋಳಿಬಾರಿನ ಎದುರಿಗೆ ಇಂಗ್ಲೀಷರಿಗೆ ನಿಲ್ಲುವದಾಗಲಿಲ್ಲ. ಮೂರು ನಾಲ್ಕು ದಿನ ಅತ್ಯುಗ್ರ ಹೋರಾಟವಾಗಿ ಕೊನೆಗೆ ಒಂದು ದಿನ ಕೋಟೆಯ ಗೋಡೆಯು ಒಂದೆರಡು ಕಡೆಗೆ ಒಡೆಯಿತು. ಇಂಗ್ಲೀಷರು ಒಳಗೆ ಬರಲು ಎಷ್ಟೂ ತಡ ಮಾಡಲಿಲ್ಲ.

"ಒಂದು ದಿನ ಮುಂಜಾನೆ ಇಂಗ್ಲೀಷರು ತಂಡತಂಡವಾಗಿ ಊರೊಳಗೆ ಬರುತ್ತಿರುವರೆಂಬ ವಾರ್ತೆಯನ್ನು ಕೇಳಿ ಮಹಾರಾಣಿಯು ಖಿನ್ನಮನಸ್ಕಳಾದಳು.

ದಿವಾನಖಾನೆಯಲ್ಲಿ ಕುಳಿತಳು. ಅವಳ ಕೋಮಲವಾದ ಅಂತಃಕರಣವು ಬೆಂದು ಹೋಗಿತ್ತು. ಅವಳು ಒಂದು ನಿಶ್ಚಲ ಮೂರ್ತಿಯಂತೆ ಕುಳಿತದ್ದನ್ನು ನೋಡಿ ದರೂ ಅವಳ ಆಶ್ರಿತಮಂಡಳಿಯಲ್ಲಿ ಯಾರೂ ಸಮೀಪಕ್ಕೆ ಹೋಗುವ ಧೈರ್ಯ ಮಾಡಲಿಲ್ಲ. ಎಲ್ಲರಿಗೂ ಮಹಾರಾಣಿಯನ್ನು ನೋಡಿ ಅತಿಶಯ ದುಃಖವಾಗಿತ್ತು.

"ಲಕ್ಷ್ಮೀಬಾಯಿ ಮಧ್ಯಾಹ್ನದ ಸುಮಾರಿಗೆ ಅರಮನೆಯ ಅಟ್ಟದ ಮೇಲೆ ಬಂದು ನಿಂತಳು. ಊರೊಳಗಿನ ಕೋಲಾಹಲವನ್ನು ನೋಡಿ ಲಕ್ಷ್ಮೀಬಾಯಿಯ ಕಣ್ಣೊಳಗೆ ಅಶ್ರುಧಾರೆ ಹರಿಯಹತ್ತಿತು. ಅತಿಶಯ ಶ್ರೀಮಂತ ಉಪನಗರ ವಾದ ಹಲ್ವಾಯಿಪುರವನ್ನು ಸುಂಗುತ್ತಿದ್ದ ಅಗ್ನಿದೇವನ ನಾಲಿಗೆಗಳು ಗಗನ ಚುಂಬಿಯಾಗಿದ್ದವು. ಜನರು ಅಳುವದು, ಓಡುವದು, ಗುಂಡುಹಾರುವ ಸಪ್ಪಳ, ನಿರಪರಾಧಿಗಳು ಪಟಪಟ ಬಿದ್ದು ಸಾಯುವದು ಅತ್ಯಂತ ಹೃದಯದ್ರಾವಕ ದೃಶ್ಯವಾಗಿತ್ತು.

"ಲಕ್ಷ್ಮೀಬಾಯಿಗೆ, ತಾನೇ ಜನರನ್ನು ಇಷ್ಟು ಫಜೀತಿಗೆ ಈಡುಮಾಡಿದೆ ನೆಂದೆನಿಸಿತು. ತಾನೋರ್ವ ಮಹಾಪಾತಕಿ ಎಂದುಕೊಂಡಳು. ಅರಮನೆಯ ಎಲ್ಲ ಆಶ್ರಿತರನ್ನೂ ಕರೆದು 'ನಾನು ಇವತ್ತು ರಾತ್ರಿ ಅರಮನೆಯನ್ನು ಮದ್ದಿ ನಿಂದ ಹಾರಿಸಿ ಅದರೊಳಗೆ ಸತ್ತುಹೋಗುತ್ತೇನೆ. ಮರಣ ಬೇಕಾದವರು ಇಲ್ಲಿರ ಬಹುದು ; ಉಳಿದವರು ರಾತ್ರಿಯ ಕತ್ತಲಲ್ಲಿ ಊರೊಳಗೆ ಹೋಗಿ ಪ್ರಾಣ ರಕ್ಷಣೆಯ ಉಪಾಯವನ್ನು ಕಂಡುಕೊಳ್ಳಬೇಕು' ಎಂದು ತಿಳಿಸಿದಳು.

"ಲಕ್ಷ್ಮೀಬಾಯಿಯನ್ನು ಅರಮನೆಗೆ ಕರೆತಂದ ವೃದ್ಧ ಸೇನಾಪತಿಯೇ ಮತ್ತೆ ಮುಂದೆಬಂದು—'ಮಹಾರಾಣೀ, ನೀವು ಶಾಂತರಾಗಬೇಕು. ಆತ್ಮ ಹತ್ಯೆಯು ಮಹಾಪಾಪ; ಇದೆಲ್ಲವೂ ಪೂರ್ವಜನ್ಮದ ಫಲ ; ಮತ್ತೆ ಈ ಜನ್ಮ ದಲ್ಲಿ ಹೊಸ ಪಾಪವನ್ನು ಮಾಡಬೇಡಿರಿ' ಎಂದು ಸಂತೈಸಿ ಆಹೊತ್ತು ರಾತ್ರಿಯೇ ಶತ್ರುಸೈನ್ಯವನ್ನು ಭೇದಿಸಿ ಪೇಶ್ವೆ ಸೈನ್ಯವನ್ನು ಕೂಡತಕ್ಕದ್ದೆಂದು ಸೂಚನೆ ಮಾಡಿದನು. ಲಕ್ಷ್ಮೀಬಾಯಿಯ ಮೈಯಲ್ಲಿ ಆವೇಶ ತುಂಬಿತು. ಆ ವೃದ್ಧ ಸರದಾರನ ಪಾದಗಳಿಗೆ ನಮಸ್ಕರಿಸಿ ಮಹಾರಾಣಿಯು ಸ್ನಾನ ಭೋಜನಗಳನ್ನು ಮುಗಿಸಿದಳು. ಸಾಯಂಕಾಲ ಯೋಗ್ಯರಲ್ಲದ ದಾಸ-ದಾಸಿ ಯರಿಗೆ ಯೋಗ್ಯ ಸಂಭಾವನೆಯೊಂದಿಗೆ ನಿರೋಪಕೊಟ್ಟಳು. ಮಹಾ ರಾಣಿಯು ಅರಮನೆಯಿಂದ ಹೊರಬಿದ್ದಾಗ ಮಧ್ಯರಾತ್ರಿಯಾಗಿರಬೇಕು. ಲಕ್ಷ್ಮೀಬಾಯಿಯ ತಂದೆ ಮೊರೋಪಂತನನ್ನೊಳಗೊಂಡು ಅನೇಕ ಸಶಸ್ತ್ರ

ಸವಾರರು ಅವಳೊಡನೆ ಹೊರಬಿದ್ದರು. ಅವರೆಲ್ಲರು ಸುಮಾರು ೨೦೦ ಜನರಿರಬಹುದು. ಲಕ್ಷ್ಮೀಬಾಯಿಯು ಪುರುಷವೇಷಧಾರಿಯಾಗಿ ಅಚ್ಚಬೆಳ್ಳಗಿನ ಬೆಟ್ಟದಂಥ ಒಂದು ಕುದುರೆಯನ್ನೇರಿದಳು. ಮೈಯಲ್ಲಿ ಕವಚವಿತ್ತು. ಕಿರಿಗತ್ತಿ, ಖಡ್ಗ ಇತ್ಯಾದಿ ಶಸ್ತ್ರಗಳನ್ನು ಧರಿಸಿದಳು. ಒಂದು ರೇಶಿಮೆ ಅಂಚಿನ ಧೋತರದಿಂದ ತನ್ನ ದತ್ತಕ ಮಗು ದಾಮೋದರನನ್ನು ಬೆನ್ನಿಗೆ ಕಟ್ಟಿಕೊಂಡಳು.

“ ‘ಜಯ ಶಂಕರ,’ ಎಂದು ಘೋಷಿಸುತ್ತ ಎಲ್ಲರೂ ಕಿಲ್ಲೆಯಿಂದ ಹೊರಬಿದ್ದರು. ನೇರವಾಗಿ ಶಹರದಲ್ಲಿ ಹಾಯ್ದು ಉತ್ತರ ಬಾಗಿಲಿನಿಂದ ಹೊರಬಿದ್ದರು. ಇಂಗ್ಲೀಷರ ಶಿಬಿರದಲ್ಲಿ ಗಡಿಬಿಡಿಯಾಯಿತು. ತೋಫುಗಳು ಸುರುವಾದವು. ಸೈನಿಕರು ಬೆನ್ನಟ್ಟಿದರು. ಕೈಯಲ್ಲಿಯ ಬಂದೂಕನ್ನು ಹಾರಿಸುತ್ತ ಮಿಂಚಿನಂತೆ ಸಾಗುವವಳು ಮಹಾರಾಣಿ. ಕತ್ತಲೆಯಲ್ಲಿ ಸಂಗಡಿಗರಲ್ಲಿ ಅನೇಕರು ದಾರಿ ತಪ್ಪಿದರು. ’

“ಮಹಾರಾಣಿಯು, ಅವಳ ಸಂಗಡ ಇದ್ದ ಒಬ್ಬಿಬ್ಬರು ಸವಾರರು ಕಾಲಪಿಯ ದಾರಿ ಹಿಡಿದು ಓಡಿ ಹೋದರು. ಒಂದೆರಡು ಹರದಾರಿ ಅವಳನ್ನು ಇಂಗ್ಲೀಷರು ಬೆನ್ನಟ್ಟಿದರು. ಆದರೆ ಅವರ ಕೈಗೆ ಹತ್ತದ ಲಕ್ಷ್ಮೀ ಮಾಯವಾಗಿ ಬಿಟ್ಟಳು.

“ಮಹಾರಾಣಿ ತಪ್ಪಿಸಿಕೊಂಡಳೆಂಬ ಸಿಟ್ಟಿನಿಂದ ಇಂಗ್ಲೀಷರು ಇಡಿಯ ಊರನ್ನು ಲೂಟಿಮಾಡಿದರು. ಲಕ್ಷ್ಮೀಬಾಯಿಯ ಅರಮನೆಯ ಅಮೌಲ್ಯ ವಸ್ತುಗಳೆಲ್ಲ ಬೀದಿಗೆ ಬಂದು ಬಿದ್ದವು. ಇಂಗ್ಲೀಷರು ಅರಮನೆಯಲ್ಲಿದ್ದ ನಾಲ್ಕು ನೂರು ಹಸ್ತಲಿಖಿತ ಸಂಸ್ಕೃತ ಗ್ರಂಥಗಳನ್ನು ಬೀದಿಗೆ ಎಸೆದು ನಷ್ಟಗೊಳಿಸಿದರು. ದೇವರಮನೆಯಲ್ಲಿಯ ಗಣಪತಿ, ವಿಷ್ಣು, ಲಕ್ಷ್ಮೀ ಮೊದಲಾದ ಅಂದವಾದ ಮೂರ್ತಿಗಳನ್ನು ಸೈನಿಕರು ತಮ್ಮತಮ್ಮೊಳಗೆ ಹಂಚಿಕೊಂಡರು. ಎಷ್ಟೋ ಚಿನ್ನ, ಬೆಳ್ಳಿಗಳಿಂದ ಮಾಡಿದ ಮೂರ್ತಿಗಳಿದ್ದು ಅವುಗಳಿಗೆ ಚಿಕ್ಕ ಪುಟ್ಟ ವಜ್ರಾಭರಣಗಳಿದ್ದವು. ಝಾಂಸಿಯಲ್ಲಿ ನಾಲ್ಕು ದಿನ ಸಾಕಷ್ಟು ಕೊಲೆಸುಲಿಗೆಗಳು ನಡೆದವು.[5]

4. ಮೋರೋಪಂತನು ಕಾಲ್ಪಿಯಲ್ಲಿ ಗಾಯಗೊಂಡು ಇಂಗ್ಲೀಷರ ಕೈಗೆ ಸಿಕ್ಕು ಝಾಂಸಿಯ ಕೋಟೆಯ ಮುಂದೆ ಫಾಸಿ ಹೊಂದಿದನು.

5. ಮೇಲಿನ ಐದಾರು ಪ್ಯಾರಾಗಳಲ್ಲಿಯ ಮುಖ್ಯಾಂಶಗಳನ್ನು ಗೋಡಸೆ ಭಟಜಿಯ

[ಮುಂದಿನ ಪುಟ ನೋಡಿರಿ]

ಲೂಟಿಯ ಕೊನೆಯದಿನ ಮಹಾಲಕ್ಷ್ಮಿ ಗುಡಿಯೂ ಲೂಟಿಯಾಯಿತು. ದೇವಿಯ ಅಲಂಕಾರಗಳು, ವಸ್ತ್ರಾಭರಣಗಳು ಎಲ್ಲವೂ ಹೋದವು. ದೇವಿಗೆ ತನ್ನ ಮೇಲೆ ತನಗೇ ಸಿಟ್ಟು ಬಂದು ಮೈಮೇಲಿನ ವಸ್ತ್ರಾಭರಣಗಳನ್ನು ಬಿಸುಟುತ್ತಿರುವಳೊ ಎಂದು ಆ ಉಗ್ರ ದೃಶ್ಯದಿಂದ ಭಾಸವಾಗುತ್ತಿತ್ತು. ಇಂಗ್ಲೀಷರಿಗೆ ಮಾತ್ರ ಇಷ್ಟಾದರೂ ಸೇಡಿನ ತೃಷ್ಣೆಯು ಹಿಂಗಿರಲಿಲ್ಲ.

( ಮುಂದೆ ಸಾಗಿದ್ದು )

" ಮಾಝಾ ಪ್ರವಾಸ " ದಿಂದಆಯ್ದುಕೊಳ್ಳಲಾಗಿದೆ. ಆ ಪ್ರತ್ಯಕ್ಷದರ್ಶಿಯು ಇನ್ನೂ ಒಂದು ಕೌತುಕದ ಘಟನೆಯನ್ನು ವಿವರಿಸಿದ್ದಾನೆ. ಭಟಜಿಯ ಮನೆಯ ಹತ್ತಿರ ಓರ್ವ ಅಗ್ನಿಹೋತ್ರವನ್ನಿಟ್ಟ ಬ್ರಾಹ್ಮಣನಿದ್ದನು. ಅವನು ಅಗ್ನಿದೇವನಿಗೆ ಹೋಮವನ್ನು ಅರ್ಪಿಸಿ ಹೊರಗೆ ಬರುವದರೊಳಗೆ ಇಬ್ಬರು ಇಂಗ್ಲೀಷರು ಒಳಗೆಹೋಗಿ ಹಣವನ್ನು ಶೋಧಿಸಹತ್ತಿದರು. ಹೋಮಶಾಲೆಗೇ ನೆಟ್ಟಗೆ ಹೋಗಿ ಅಗ್ನಿಕುಂಡದ ಮುಚ್ಚಳವನ್ನು ತೆಗೆದು ಒಳಗೆ ದುಡ್ಡು ಹುಗಿದಿರಬೇಕೆಂದು ಕೈಹಾಕಿಬಿಟ್ಟರು. ಸ್ವಾಭಾವಿಕವಾಗಿ ಅವರ ಕೈಗಳು ಸುಟ್ಟು ಹೋಗಲು ಬಹಳ ಸಿಟ್ಟಾಗಿ ಅಗ್ನಿಹೋತ್ರಿ ಮತ್ತು ಅವನ ಹನ್ನೊಂದು ಮಂದಿ ಕುಟುಂಬದ ಜನರನ್ನು ಗುಂಡಿಕ್ಕಿ ಕೊಂದುಬಿಟ್ಟರು." ಪುಟ ೮೫-೮೭.

# ಹನ್ನೆರಡನೆಯ ಅಧ್ಯಾಯ

## ಕುರುಕ್ಷೇತ್ರದ ಕೊನೆಯ ದಿನ

**೧೮೫೭ರ** ಆಗಸ್ಟ ತಿಂಗಳು ಗತಿಸಿದ ನಂತರ ಝಾಂಸಿ, ಲಖನೌ, ದಿಲ್ಲಿ, ಕಾನಪೂರಗಳ ಪರಿಸ್ಥಿತಿಯು ಬದಲಾಗಹತ್ತಿತು. ಇದರೊಡನೆ ಉತ್ತರಹಿಂದುಸ್ಥಾನದಲ್ಲಿ ಕಂಪನಿಸರಕಾರದ ವಿರುದ್ಧ ಹೂಡಲಾದ ಸ್ವಾತಂತ್ರ್ಯಯುದ್ಧವೂ ಅಲ್ಲಲ್ಲಿ ನಂದುತ್ತ ನಡೆಯಿತು. ಬಂಡುಗಾರರು ಮೊಟ್ಟಮೊದಲು ಹಿಡಿದುಕೊಂಡ ದಿಲ್ಲಿಯು ಬಂಡುಗಾರರ ಕೈಬಿಡಲೂ ಮೊದಲಾಯಿತು. ೧೮೫೭ರ ಸಪ್ಟಂಬರ ೨೦ನೇ ತಾರೀಖಿಗೆ ದಿಲ್ಲಿಯು ಪೂರಾ ಮತ್ತೆ ಬ್ರಿಟಿಶರ ಕೈಸೇರಿತು. ನೊವೆಂಬರ ತಿಂಗಳಲ್ಲಿ ಲಖನೌ ರೆಸಿಡೆನ್ಸಿಯ ಮುತ್ತಿಗೆಯಿಂದ ಸರ್ ಜೇಮ್ಸ್ ಔಟ್ರಾಮನು ಪಾರಾಗಿದ್ದರೂ ಮಾರ್ಚ ೧೮೫೮ರ ವರೆಗೆ ಆ ಪಟ್ಟಣದ ಪುನರಾಕ್ರಮಣವು ಬ್ರಿಟಿಶರಿಗೆ ಸಾಧ್ಯವಾಗಲಿಲ್ಲ. ಎಪ್ರಿಲ್ ತಿಂಗಳಲ್ಲಿ ಝಾಂಸಿಯು ಬ್ರಿಟಿಶರ ಕೈಸೇರಿತು. ಮುಂದೆ ೧೮೫೮ ಜೂನ ೧೮ಕ್ಕೆ ರಾಣಿ ಲಕ್ಷ್ಮೀಬಾಯಿಯು ಗ್ವಾಲೇರದಲ್ಲಿ ಮಡಿದಳು. ಮುಂದೆರಡು ದಿನಗಳಲ್ಲಿ ಗ್ವಾಲೇರದ ಪತನವಾಗಿ ನಾನಾಸಾಹೇಬ ಮತ್ತು ತಾತ್ಯಾ ಟೋಪಿ ಓಡಿಹೋದರು. ಗ್ವಾಲೇರದ ಆಕ್ರಮಣವಾದ ನಂತರ ಬ್ರಿಟಿಶರಿಗೆ ಆತ್ಮವಿಶ್ವಾಸವು ಬಂದಿತು. ಬಂಡಾಯವು ದಕ್ಷಿಣಭಾರತಕ್ಕೆ ಇಳಿಯಬಹುದೆಂಬ ಭಯವು ಸಾವಕಾಶವಾಗಿ ಮಾಯವಾಯಿತು. ಆದರೆ ಇಷ್ಟೆಲ್ಲ ಸಾಧಿಸಿಕೊಂಡು ಹಿಂದುಸ್ಥಾನದ ಮೇಲೆ ತಮ್ಮ ಭದ್ರಮುಷ್ಟಿಯನ್ನು ಮೊದಲಿನಂತೆ ಸ್ಥಾಪನೆಮಾಡಬೇಕಾದರೆ ಬ್ರಿಟಿಶರಿಗೆ ಮತ್ತೊಮ್ಮೆ ಹಿಂದುಸ್ಥಾನವನ್ನು ಯುದ್ಧದಿಂದ ಗೆದ್ದುಕೊಂಡಷ್ಟೆ ಪರಿಶ್ರಮವಾಯಿತು.

ಮೀರತ ಬಂಡುಗಾರರು ದಿಲ್ಲಿಯಲ್ಲಿ ಸೇರಿಕೊಂಡು ಬ್ರಿಟಿಶರನ್ನು ಹೊರಗೆ ಹಾಕಿ ಬಾದಶಾಹಿಯನ್ನು ಸಾರಿದಮೇಲೆ ಬ್ರಿಟಿಶರಿಗೆ ದಿಲ್ಲಿಗೆ ಬಂದುಮುಟ್ಟಲು ಎಷ್ಟೋ ದಿನಗಳು ಹಿಡಿದವು. ಜೂನ ೮ನೇ ತಾರೀಖಿಗೆ ಬ್ರಿಟಿಶರು ಬಂದು ಊರಹೊರಗೆ ಶಿಬಿರಹೊಡೆದರು. ಜನರಲ್ ಹೆನ್ರಿ ಬರ್ನಾರ್ಡನು ಆಗ

ಸೇನಾಪತಿಯಾಗಿದ್ದನು. ದಿನಾಲು ಬಂಡುಗಾರರು ಬಂದು ದಿಲ್ಲಿಯಲ್ಲಿ ಸೇರುವದು ನಡೆದೆ ಇತ್ತು. ಬ್ರಿಟಿಶರಿಗೆ ಅದನ್ನು ತಡೆಯುವದು ಸಾಧ್ಯವಾಗಲಿಲ್ಲ. ಬರ್ನಾರ್ಡನಿಗೆ ಹಿಂದುಸ್ತಾನವು ಹೊಸಪ್ರದೇಶವಾಗಿತ್ತು. ದಿಲ್ಲಿಯಲ್ಲಿ ಬಂಡುಗಾರರ ಸೈನ್ಯಶಕ್ತಿಯು ಎಷ್ಟಿತ್ತೆಂಬ ಕಲ್ಪನೆ ಕೂಡ ಇಂಗ್ಲೀಷರಿಗೆ ಇರಲಿಲ್ಲ. ತಮ್ಮ ಹತ್ತಿರ ಸಾಕಷ್ಟು ಸೈನ್ಯಸಾಮುಗ್ರಿಗಳಿಲ್ಲವೆಂದೂ ಅವರು ಹೆದರಿದ್ದರು. ಮುಂದೆ ಆಗಸ್ಟ ಮೂರನೆಯ ವಾರದ ವರೆಗೆ ಚಿಕ್ಕಪುಟ್ಟ ಘಟನೆಗಳ ಹೊರತು ದಿಲ್ಲಿಯ ಪುನರಾಕ್ರಮಣದ ಸಲುವಾಗಿ ಯಾವ ಭಗೀರಥ ಪ್ರಯತ್ನಗಳೂ ನಡೆಯಲಿಲ್ಲ.

ಬರೇಲಿ ಸೈನ್ಯವನ್ನು ರಾಜಧಾನಿಗೆ ತಂದ ಬಖ್ತಖಾನ ಎಂಬ ಸವಾರನು ಹೊಸತಾಗಿ ಬಂಡುಗಾರರ ಸೇನಾಪತಿಯಾದನು. ಇವನಿಗೆ ಸೈನಿಕ ಅನುಭವವು ಸಾಕಷ್ಟಿದ್ದರೂ ಇಳಿವಯಸ್ಸಾಗಿತ್ತು. ಮಿರ್ಝಾ ಮೊಗಲ ಎಂಬ ರಾಜಕುಮಾರನನ್ನು ಬಿಡಿಸಿ ಇವನ ನೇಮಕವಾದದ್ದು ಸ್ವಲ್ಪ ಅಸಂತೋಷಕ್ಕೆ ಕಾರಣವಾಗಿತ್ತು. ಬಖ್ತಖಾನನು ತುಂಬಾ ಯೋಗ್ಯತೆಯುಳ್ಳವನಿದ್ದು ನಗರದಲ್ಲಿ ಶಾಂತಿಸುವ್ಯವಸ್ಥೆಗಳನ್ನು ಚೆನ್ನಾಗಿ ಕಾಪಾಡುತ್ತಿದ್ದನು. ಇಷ್ಟಾದರೂ ಸಿಪಾಯಿಗಳನ್ನು ಹತೋಟಿಯಲ್ಲಿಡುವದು ಬಹಳ ದುಸ್ತರವಾಯಿತು. ಅಲ್ಲಲ್ಲಿ ಲೂಟಿಪ್ರಕರಣಗಳು, ಶ್ರೀಮಂತರ ಸುಲಿಗೆ ನಡೆದೆ ಇದ್ದವು. ಜನರಿಂದ ಬಹಾದ್ದೂರಶಹನಕಡೆಗೆ ದಿನಾಲು ತಕರಾರುಗಳು ಬರತೊಡಗಿದವು. ಉತ್ತರಹಿಂದುಸ್ತಾನದ ಎಲ್ಲ ಠಾಣ್ಯಗಳಿಂದ ಸೈನ್ಯಪಡೆಗಳು ಬಂದಿದ್ದವು. ಇಂಗ್ಲೀಷರ ಕೈಯಲ್ಲಿ ದುಡಿದುಡಿದು ಅವರ ಸ್ವಭಾವವೇ ವಿಚಿತ್ರವಾಗಿತ್ತು. ಬಂಡಾಯದ ಪೂರ್ವದಲ್ಲಿ ಸಹ ಕಂಪನಿಸೈನ್ಯದಲ್ಲಿ ಶಿಸ್ತು ಕಡಿಮೆಯಾಗಿತ್ತು. ಈಗಂತೂ ಅವರಿಗೆ ಒಂದು ಸೇನಾಧಿಪತ್ಯವೆ ಇರಲಿಲ್ಲ. ಬಾದಶಹನಿಂದ ಅವರಿಗೆ ಎಲ್ಲ ನಿತ್ಯದ ಅವಶ್ಯಕತೆಗಳನ್ನು ಪೂರೈಸುವದಾಗಲಿಲ್ಲ. ಹೀಗಾಗಿ ಅವರಮೇಲೆ ಅಧಿಕಾರವನ್ನು ನಡೆಸುವದೆ ದುಸ್ತರವಾಗಿಹೋಗಿತ್ತು. ಇತ್ತ ಬಾದಶಹನ ಅರಮನೆಯಲ್ಲಿಯೂ ರಾಜಕಾರಣವು ಸಾಕಷ್ಟಿತ್ತು. ಜುಲೈ ತಿಂಗಳಲ್ಲಿ ಮದ್ದುಗುಂಡುಗಳ ಕೊರತೆಯಾಗಹತ್ತಿತು. ಜುಲುಮೆಯಿಂದ ಹಣವನ್ನು ಎತ್ತುವ ರೀತಿಯಿಂದ ಜನರಲ್ಲಿ ಅಸಂತೋಷವುಂಟಾಗಹತ್ತಿತು. ನಗರದಲ್ಲಿ ಇಂಗ್ಲೀಷರ ಮೇಲೆ ವಿಶ್ವಾಸವಿದ್ದವರೂ ಇದ್ದರು. ಇವರು ಇಂಗ್ಲೀಷ ಶಿಬಿರಕ್ಕೆ ಗುಪ್ತವಾಗಿ ಸಾಮುಗ್ರಿಗಳನ್ನು ಮುಟ್ಟಿಸುವದು, ಗುಪ್ತ ಮಾಹಿತಿಕೊಡುವದು ಮಾಡಹತ್ತಿ

ದರು. ಆಗಸ್ಟ ೭ ನೆಯ ತಾರೀಖಿಗೆ ಶಸ್ತ್ರಾಗಾರದಲ್ಲಿ ಒಂದು ಸ್ಫೋಟವಾದಾಗ ಅದು ವಿಧ್ವಂಸಕರ ಕೃತಿಯಿರಬೇಕೆಂದು ಸಂಶಯಪಡಲಾಯಿತು. ಬಂಡುಗಾರರ ತೊಂದರೆಗಳು ಹೆಚ್ಚಾದಂತೆ ಅವರಲ್ಲಿ ಮೊದಲಿನ ಶಕ್ತಿಸ್ಫೂರ್ತಿಗಳು ಉಳಿಯಲಿಲ್ಲ. ಬಾದಶಹನೂ ಬೇಸರಗೊಂಡಿದ್ದನು.

ಈ ಎಲ್ಲ ಕಾರಣಗಳಿಂದ ಮತ್ತು ಗುಪ್ತಚಾರರ ಮುಖಾಂತರ ಆಗಸ್ಟ ಕೊನೆಯವಾರದೊಳಗೆಂದರೆ ಬಂಡುಗಾರರ ದುರ್ಬಲತೆಯ ಕಲ್ಪನೆಯು ಬ್ರಿಟಿಶರಿಗೆ ಬರತೊಡಗಿತ್ತು. ಆಗ ಜನರಲ್ ವಿಲ್ಸನ್ನನು ಸೇನಾಪತಿಯಾಗಿದ್ದ. ಬೆಯರ್ಡ ಸ್ಮಿಥ್ ಎಂಬುವನ ಮಿಲಿಟರಿ ಇಂಜನಿಯರನಿದ್ದ. ಹೆಚ್ಚಿನ ಸಹಾಯಬಾರದೆ ದಿಲ್ಲಿಯ ಮೇಲೆ ಹಲ್ಲೆಯು ಬೇಡವೆಂದು ವಿಲ್ಸನ್ನನ ಅಭಿಪ್ರಾಯವಿತ್ತು. ದಿಲ್ಲಿಯ ನಿಜವಾದ ಪರಿಸ್ಥಿತಿಯು ಕಲಕತ್ತೆಗೆ ತಿಳಿಯುವಂತಿರಲಿಲ್ಲ. ಕೂಡಲೆ ದಿಲ್ಲಿಯನ್ನು ಆಕ್ರಮಿಸಿರಿ, ಎಂದು ಲಾರ್ಡ ಕ್ಯಾನಿಂಗನು ರಾಜಧಾನಿಯಿಂದ ಒತ್ತಾಯ ಮಾಡತೊಡಗಿದ್ದನು. ಒಂದುದಿನ ವಿಲ್ಸನ್ನನು ಬೆಯರ್ಡ ಸ್ಮಿಥ್‌ನ ಅಭಿಪ್ರಾಯವನ್ನು ಕೇಳಿದೊಡನೆ, ಆತನು ದಾಳಿ ಮಾಡುವದೇ ಯೋಗ್ಯ, ಎಂದನು. ಮುತ್ತಿಗೆ ಕಾರ್ಯಗಳನ್ನು ರಚಿಸಲಾಯಿತು. ಮೊದಲು ಕಾಶ್ಮೀರಗೇಟನ್ನು ಹಾರಿಸತಕ್ಕದ್ದೆಂದು ನಿರ್ಧಾರವಾಯಿತು. ಬಂಡುಗಾರರು ಅತ್ಯಂತ ವಿಧ್ವಂಸಕವಾದ ಗೋಲಿಬಾರು ಮಾಡಿದರು. ಕಂದಕದ ಮೇಲಿನ ಸೇತುವೆ ಅರ್ಧನಾಶಹೊಂದಿತ್ತು. ಹೀಗಿದ್ದರೂ ಕಾಶ್ಮೀರಗೇಟಿಗೆ ಸುರಂಗಹಚ್ಚಿ ಹಾರಿಸಿದರು. ನಾಲ್ಕು ಅಧಿಕಾರಿಗಳು ಸತ್ತರು. ಕಾಶ್ಮೀರಗೇಟು ಹಾರಿ ಇಂಗ್ಲೀಷರಿಗೆ ಒಳಗೆ ಪ್ರವೇಶ ದೊರೆಯಿತು.

ನಗರದೊಳಗಿನ ವ್ಯವಸ್ಥೆಯು ಹೀಗೇ ಇದ್ದರೂ ಬಂಡುಗಾರರು ದಿಲ್ಲಿಯ ನಾಲ್ಕು ಬದಿಗಳನ್ನು ಸಾಕಷ್ಟು ಭದ್ರಪಡಿಸಿಕೊಂಡಿದ್ದರು. ದಿಲ್ಲಿಯ ಸುತ್ತಳತೆಯು ಆಗ ಏಳು ಮೈಲು ಇತ್ತು. ಸಾಧಾರಣ ೬೦,೦೦೦ ಸಶಸ್ತ್ರ ಸಿಪಾಯಿಗಳು ಒಳಗಿರಬಹುದೆಂದು ಇಂಗ್ಲೀಷರ ಅಂದಾಜಿತ್ತು. ಕೋಟೆಗೋಡೆಗಳಮೇಲೆ ೧೧೪ ತೋಪುಗಳನ್ನು ನಿಲ್ಲಿಸಲಾಗಿತ್ತು. ಬಂಡುಗಾರರ ಕೈಯಲ್ಲಿದ್ದಷ್ಟು ಶಸ್ತ್ರಗಳು ಉತ್ತರ ಹಿಂದುಸ್ಥಾನದಲ್ಲಿ ಇನ್ನಾರಲ್ಲಿಯೂ ಇರಲಿಲ್ಲ. ಅರವತ್ತು ತೋಪುದಳಗಳು ಆಂಗ್ಲರ ತರಬೇತಿಯನ್ನೆ ಪಡೆದ ಅಧಿಕಾರಿಗಳ ಕೈಯಲ್ಲಿದ್ದವು.

ಸಪ್ಟಂಬರ ೧೪ನೆಯ ತಾರೀಖಿಗೆ ದಾಳಿಮಾಡಿದಾಗ ಇಂಗ್ಲೀಷರ ಹತ್ತಿರ ೮೭೪೯ ಸೈನಿಕರಿದ್ದು ಅವರಲ್ಲಿ ೩೦೦೦ದಷ್ಟು ಮಾತ್ರ ಬಿಳಿಯರಿದ್ದರು. ಕಾಶ್ಮೀರ

ಮತ್ತು ಝಿಂದದ ಕೆಲವು ಹಿಂದೀ ದಳಗಳೂ ಇದ್ದವು. ಕಾಶ್ಮೀರಗೇಟನ್ನು ಹಾರಿಸಿದ ಮೇಲೆ ಪ್ರತ್ಯಕ್ಷ ಯುದ್ಧವು ಪ್ರಾರಂಭವಾಯಿತು. ಮೋರಿಗೇಟನಿಂದ ಒಳಸುಗ್ಗಲು ೧ ನಂಬರಿನ ಮುತ್ತಿಗೆದಳದೊಡನೆ ಜನರಲ್ ನಿಕೊಲ್ಸನ್ನನು ಮುಂದೆ ಬಂದನು. ಅವನು ಅತ್ಯಂತ ಸಾಹಸಿಯಾಗಿದ್ದನು. ಇಂಗ್ಲೀಷರು ಒಳಗೆ ಹೋಗಲು ಅತಿಶಯ ಗುಂಡಿನ ಸುರಿಮಳೆಯು ನಡೆಯಿತು. ಆದರೂ ಕಾಬೂಲ ಗೇಟನ್ನು ಅವರು ಆಕ್ರಮಿಸಿ ಕುಳಿತರು. ಮುಂದೆ ಮಾತ್ರ ಲಾಹೋರಗೇಟಿನ ಕಡೆಗೆ ಒಂದು ಹೆಜ್ಜೆಯಿಡುವದು ಸಹ ಅಸಾಧ್ಯವಾಗಿಬಿಟ್ಟಿತು. ಒಂದು ಹೆಜ್ಜೆ ಮುಂದಿಟ್ಟರೆ ಸಾವಿರಗುಂಡುಗಳು ಸುರಿಯುತ್ತಿದ್ದವು. ಆದರೂ ಮುಂದೆಹೋಗಲು ಪ್ರಯತ್ನಮಾಡಿ ಮೆಮಿಃಸ್, ಗ್ರೆನ್ವಿಲ್, ಕಾಲ್ಫೀಲ್ಡ್, ಸ್ಪೀಕ್, ವುಡ್‌ಕಾಕ್, ಬಟ್ಲರ ಮೊದಲಾದ ಒಂದೇ ದಳದ ಐದು ಅಧಿಕಾರಿಗಳು ಗುಂಡು ಬಡಿದು ಬಿದ್ದರು. ತಿರುಗಿ ಹೊರಳಿದೆ ನಿರ್ವಾಹವೇ ಇಲ್ಲದಾಯಿತು. ಆದರೂ ಸಾಹಸಿ ನಿಕೊಲ್ಸನ್ನನು ಖಡ್ಗವನ್ನು ಝುಳಪಿಸುತ್ತ ಮುಂದೆ ಬಂದನು; ಸಿಪಾಯಿಗಳು ಅವನನ್ನು ಗುಂಡಿಕ್ಕಿ ಕೆಡಹಿದರು. ಮುಂದೆ ದಿಲ್ಲಿಯ ಪತನವಾಗುವವರೆಗೆ ಇದ್ದು ನಿಕೊಲ್ಸನ್ನನು ಸತ್ತನು. ಆ ದಿನ ಮಾತ್ರ ಕಾಬೂಲಗೇಟಿನ ಮುಂದೆ ಒಂದು ಹೆಜ್ಜೆಯನ್ನಿಡುವದು ಸಹ ಇಂಗ್ಲೀಷರಿಗೆ ಸಾಧ್ಯವಾಗಲಿಲ್ಲ. ನಾಲ್ಕೂಕಡೆಗೆ ಪ್ರವೇಶವನ್ನು ಪಡೆಯಲು ನಡೆದ ಪ್ರಯತ್ನ ಕೇವಲ ಅಂಶತಃ ಯಶಸ್ವಿಯಾಯಿತು. ಒಂದು ದಳವು ಜುಮ್ಮಾಮಸೀದಿಯನ್ನು ಮುಟ್ಟಿ ಮರಳಿ ಬಂದಿತು. ಕಿಲ್ಲೆ ಮತ್ತು ಶಸ್ತ್ರಾಗಾರದ ಸಮೀಪಕ್ಕೆ ಸಹ ಅಂದು ಇಂಗ್ಲೀಷರಿಗೆ ಹೋಗುವದಾಗಲಿಲ್ಲ. ಜನರಲ್ ವಿಲ್ಸನ್ನನು ಮೊದಲನೆಯ ದಿನದ ಫಜೀತಿಯನ್ನು ನೋಡಿ ಬೇರೆಯವರ ಮಾತು ಕೇಳಿ ದಾಳಿಯನ್ನು ಪ್ರಾರಂಭಮಾಡಿದ್ದು ಹುಚ್ಚುತನವಾಯಿತೆಂದು ಹೇಳಿದುಕೊಂಡನು. ಆವರೆ ಇಂಜನಿಯರ್ ಬೆಯರ್ಡ್‌ಸ್ಮಿಥ್ ಮತ್ತು ಸಾಯುತ್ತಿರುವ ನಿಕೊಲ್ಸನ್ ಈರ್ವರೂ ಹೋರಾಡಲೇಬೇಕೆಂದೂ, ಸಾಹಸಕ್ಕೇ ಈಗ ಮಹತ್ವವಿದೆ ಎಂದೂ ಹಟಹಿಡಿದರು.

ವಿಲ್ಸನ್ ಒಪ್ಪಿದ; ಅವನೂ ಧೈರ್ಯಶಾಲಿಯಾಗಿದ್ದ; ಆದರೆ ಸಿಪಾಯಿಗಳ ಆರ್ಭಟವನ್ನು ನೋಡಿ ಏನಾದರೂ ಕಾರಣದಿಂದ ಸೋಲಾದರೆ ಸಾಮ್ರಾಜ್ಯದ ಸತ್ಯಾನಾಶವಾದೀತಲ್ಲ, ಎಂದು ಅವನು ಹೆದರಿದ್ದನು. ಅಂತಿಮ ನಿರ್ಣಯದ ಜವಾಬ್ದಾರಿ ಅವನ ಮೇಲೆಯೇ ಇತ್ತು. ಸಪ್ಟಂಬರ ೧೫ನೆಯ ದಿನ ಸೂರ್ಯೋದಯವಾಯಿತು. ಮುಂಚಿನ ದಿನ ಸಿಪಾಯಿಗಳೊಡನೆ ಹೋರಾಡಿ ವಿಲ್ಸನ್ನನ

ಸೈನ್ಯ ಸವಿಯುಂಡಿತ್ತು. ಆದರೂ ಇಂದು ಮುನ್ನುಗ್ಗ ತಕ್ಕದ್ದೆಂದೊಡನೆ ಸೈನಿಕರು ಮರಳಿ ಶಿಬಿರಕ್ಕೆ ಬರುವ ಆಶೆಯನ್ನೆ ಬಿಟ್ಟುಬಿಟ್ಟರು. ಮದ್ಯದ ಕೊಠಡಿಯಲ್ಲಿ ಮುರಿದು ಎಲ್ಲರೂ ಮೈಮೇಲಿನ ಎಚ್ಚರವಿಲ್ಲದೆ ಕುಡಿದರು. ವಿಲ್ಸನ್ನನಿಗೆ ಹೆದರಿಕೆ ಬಂದಿತು. ಸೀಖರನ್ನು ಹಚ್ಚಿ ಎಲ್ಲ ಮದ್ಯವನ್ನೂ ಗಟಾರಗಳಿಗೆ ಸುರುವಿಸಿದನು. ಇಂಗ್ಲೀಷರ ಈ ನಿರಾಶೆಯ ಅಂತರಂಗ ಅಂದು ಸಿಪಾಯಿಗಳಿಗೆ ಗೊತ್ತೇ ಆಗಲಿಲ್ಲ. ಸಪ್ಟಂಬರ ೧೬ಕ್ಕೆ ಶಸ್ತ್ರಾಗಾರವು ಸಿಪಾಯಿಗಳ ಕೈ ಬಿಟ್ಟಿತು. ಮುಂದೆ ೨೦ನೆಯ ತಾರೀಖಿಗೆ ಇಂಗ್ಲೀಷರು ಕೆಂಪುಕೋಟೆಯ ಬಾಗಿಲಿಗೆ ಬಂದರು. ಒಳಗೆ ಯಾರೂ ಇರಲಿಲ್ಲ. ಅಲ್ಲಲ್ಲಿ ಶಿಸ್ತಿನಿಂದ ನಿಂತಿದ್ದ ಸಿಪಾಯರು ಇಂಗ್ಲೀಷರ ಗುಂಡು ಬಡಿಯುವ ವರೆಗೆ ಹಾಗೆಯೇ ನಿಂತಿದ್ದರು. ಧರ್ಮದ ಸಲುವಾಗಿ ಜೀವಕೊಟ್ಟರು. ಒಬ್ಬನೂ ಆಶ್ರಯ ಕೇಳಲಿಲ್ಲ.

ಮನೆಮನೆಗೂ ಓಣಿಓಣಿಗೂ ಭಯಂಕರ ಹೋರಾಟವು ನಡೆಯಿತು. ಒಮ್ಮೆಯಂತು ಚಾಂದಣಿಚೌಕದಲ್ಲಿ ಬಂದುಗಾರರು ಇಂಗ್ಲೀಷ ಸೈನ್ಯವನ್ನು ದೊಡ್ಡ ತೋಫಿನಿಂದ ಎದುರಿಸಿ ಓಡಿಸಿಬಿಟ್ಟರು. ಸಪ್ಟಂಬರ ೨೦ನೆಯ ತಾರೀಖಿನ ವರೆಗೆ ವಿಲ್ಸನ್ನನ ಜೀವದಲ್ಲಿ ಜೀವವಿರಲಿಲ್ಲ. ಅರಮನೆಯು ವಶವಾಗುವ ಮುಂಚಿನ ದಿನ ವಿಲ್ಸನ್ ಇನ್ನೂ ನಿರಾಶನಾಗಿದ್ದ. "ಬೀದಿಗುಂಟ ಯುದ್ಧ ಮಾಡಲು ನಮ್ಮ ಸೈನಿಕರು ಹೆದರುತ್ತಾರೆ. ಮನೆಯೊಳಗಿಂದ ಗುಂಡು ಬರ-ಹತ್ತಲು ಅವರಲ್ಲಿ ಶಿಸ್ತು ಉಳಿಯುವದಿಲ್ಲ. ಹೆಚ್ಚಿನ ಸಹಾಯವು ಬರುವ ವರೆಗೆ ಇದ್ದಲ್ಲಿಯೇ ಉಳಿಯಬೇಕೆಂದು ಮಾಡಿರುವೆನು" ಎಂದು ಸರಕಾರಕ್ಕೆ ಬರೆದು ತಿಳಿಸಿದ್ದನು. ಸಪ್ಟಂಬರ ೧೪ರ ಹೋರಾಟದಲ್ಲಿ ವಿಲ್ಸನ್ನನು ೧೧೦೪ ಸೈನಿಕರನ್ನೂ ಅರವತ್ತಾರು ಆಫೀಸರರನ್ನೂ ಕಳೆದುಕೊಂಡಿದ್ದನು. ಮುಂದೆ ಇನ್ನೂ ಎಷ್ಟು ಉಗ್ರ ಹೋರಾಟವಾಗಬಲ್ಲದೊ ಎಂಬ ಬಗ್ಗೆ ಅವನಿಗೆ ಕಲ್ಪನೆಯಿರಲಿಲ್ಲ. ಇಂಗ್ಲೀಷರ ದೈವ ಚೆನ್ನಾಗಿತ್ತು. ಬಂದುಗಾರರು ಹಿಂದೆ ಸರಿಯಹತ್ತಿದರು. ಅವರಿಗೆ ಒಮ್ಮೆಲೆ ಏಕೆ ನಿರಾಶೆಯಾಯಿತೊ ದೇವರೆ ಬಲ್ಲ. ಇಂಗ್ಲೀಷರ ಶಿಸ್ತಿನ ದಾಳಿಯನ್ನು ನೋಡಿ ಅವರ ಹಿಂದೆ ಇನ್ನೂ ಪ್ರಚಂಡ ಶಕ್ತಿಯಿರಬೇಕೆಂದು ಅವರ ಕಲ್ಪನೆಯಾಗಿರಬೇಕು. ಅಥವಾ ಒಳಜಗಳಗಳಿಂದ ಸಿಪಾಯಿಪಡೆಗಳು ಅಶಕ್ತವಾಗಿರಬೇಕು. ಸಪ್ಟಂಬರ ೨೦ನೆಯ ತಾರೀಖು ಮಧ್ಯಾಹ್ನ ಇಂಗ್ಲೀಷರು ಅರಮನೆಯನ್ನು ಪ್ರವೇಶಿಸಿ ಬಿಟ್ಟಾಗ ಅರಮನೆಯಲ್ಲಿ ಯಾರೂ ಇರಲಿಲ್ಲ. ಅಲ್ಲಲ್ಲಿ ಸಿಕ್ಕವರನ್ನು ಗುಂಡಿಕ್ಕಿ ಕೊಲ್ಲಲಾಯಿತು. ದಿಲ್ಲೀ

ವಿಜಯದ ಗೌರವಾರ್ಥವಾಗಿ ಜನರಲ್ ವಿಲ್ಸನ್ ಅಂದು ರಾತ್ರಿ ಅರಮನೆ ಯಲ್ಲಿ ಭಾರಿ ಊಟದ ವ್ಯವಸ್ಥೆ ಮಾಡಿಸಿದನು.

ಹೀಗೆ ಮೊಗಲರ ದಿಲ್ಲಿ ಮಣ್ಣುಪಾಲಾಗಿಹೋಯಿತು. ಬಹಾದ್ದೂರಶಹ ನನ್ನು ಗುಪ್ತಚಾರರ ನೆರವಿನಿಂದ ಹುಮಾಯೂನನ ಗೋರಿಯಲ್ಲಿ ಪತ್ತೆಹಚ್ಚ ಲಾಯಿತು. ಬಂಡುಗಾರರ ಸೇನಾಪತಿ ಬಖ್ತಖಾನನು ಎರಡು ದಿನ ಮುಂಚೆ ಸಿಕ್ಕಷ್ಟು ಸೈನ್ಯದೊಂದಿಗೆ ಓಡಿ ಹೋಗಿದ್ದನು. ಹೋಗುವಾಗ ಬಾದಶಹನಿಗೂ ಅವನ ಮನೆಯವರಿಗೂ ನೀವೂ ನಡೆಯಿರಿ, ಇಲ್ಲಿರುವದು ಬೇಡ, ಎಂದು ಆಗ್ರಹಮಾಡಿದನು. ಇಂಗ್ಲೀಷರ ಕೈಯಲ್ಲಿ ಯಾವ ಸನ್ಮಾನದ ಆಶೆಯಿತ್ತೋ ಅವನಿಗೆ; ಬಾದಶಹನು ಒಲ್ಲೆನೆಂದು ಹೇಳಿ ತನ್ನ ಹಿರಿಯರ ಗೋರಿಯಲ್ಲಿ ಅಡಗಿ ಕುಳಿತನು. ಅವನ ಕೂಡ ಜಿನ್ನತಮಹಾಲ ಮತ್ತು ಜವಾನಬಖ್ತರಿದ್ದರು. ಹಾಡ್ಸನ್ ಸಾಹೇಬನು ಜೀವದ ಆಶ್ವಾಸನಕೊಟ್ಟು ಅವರನ್ನು ಕೈದು ಮಾಡಿ ತಂದನು. ಇದಾದುದು ೨೧ ನೆಯ ತಾರೀಖಿಗೆ.

ಮರುದಿನ ಹಾಡ್ಸನ್ ಸಾಹೇಬನಿಗೆ ಮತ್ತೆ ಹೊಸ ಸುದ್ದಿ ಬಂದಿತು. ಅಲ್ಲಿಯೇ ಮಿರ್ಝಾ ಮೊಗಲ, ಮಿರ್ಝಾ ಖಿಜರಖಾನ ಮತ್ತು ಮಿರ್ಝಾ ಅಬುಬಕರ ಈ ಮೂರು ಮೊಗಲ ರಾಜಕುಮಾರರು ಅಡಗಿದ್ದರು. ಹಾಡ್ಸನ್ನನ ರಕ್ತವು ಸೇಡಿಗಾಗಿ ಸಳಮಳ ಕುದಿಯಹತ್ತಿತು. ಆಂಗ್ಲರ ಕೊಲೆ ಮಾಡಿದರೆ ಏನು ಪರಿಣಾಮವಾಗುವದೆಂಬುದನ್ನು ಅವನು ಬಹಿರಂಗವಾಗಿ ಜನರಿಗೆ ನಿದರ್ಶನಕ್ಕೆ ತಂದುಕೊಡಬೇಕೆಂದು ಹಂಬಲಿಸುತ್ತಿದ್ದನು. ಅವರಿಗೆ ಜೀವದಾನ ಮಾಡಲು ನಿರಾಕರಿಸಿದರೂ ರಾಜಕುಮಾರರು ದಾರಿಗಾಣದೆ ಹಾಡ್ಸನ್ನನಿಗೆ ಶರಣಾಗತ ರಾದರು. ಅಷ್ಟಾದರೂ ಆ ಕ್ರೂರನಿಗೆ ದಯೆ ಬರಲಿಲ್ಲ. ದಿಲ್ಲಿಗೇಟಿನ ಹತ್ತರ ಬಂದೊಡನೆ ಅವರನ್ನು ಗಾಡಿಯಿಂದಿಳಿಸಿ, ಸಾಲಾಗಿ ನಿಲ್ಲಿಸಿ, ಬಟ್ಟೆತೆಗೆಯಿಸಿ ಗುಂಡು ಹಾಕಿಬಿಟ್ಟನು! ಮೂವರೂ ಮೊಗಲ ರಾಜಕುಮಾರರು ತಕ್ಷಣ ಸತ್ತು ಮಣ್ಣೊಳಗೆ ಉರುಳಿದರು. ಮುಂದೆ ಮೂರು ದಿನ ಅವರ ಶವಗಳು ಅಲ್ಲಿಯೇ ಬಿದ್ದಿದ್ದವು.

ಬಹದ್ದೂರಶಹನನ್ನು ಓರ್ವ ಸಾಮಾನ್ಯ ಆರೋಪಿಯಂತೆ ಒಂದು ಕೊಠಡಿಯಲ್ಲಿಟ್ಟು ಯುರೋಪಿಯನ್ ನಾಗರಿಕರಿಗೆ ಅವನನ್ನು ನೋಡಲ್ಕು ಅಪ್ಪಣೆಕೊಟ್ಟನು. ಜನರು ಸಾಲುಸಾಲಾಗಿ ನಿಂತು ಪ್ರದರ್ಶನದಲ್ಲಿಯ ಪ್ರಾಣಿಯಂತೆ ಅವನನ್ನು ತಿರಸ್ಕಾರದಿಂದ ನೋಡುತ್ತಿದ್ದರು. ಮುಂಜಾನೆ

ಯಿಂದ ಸಂಜೆಯವರೆಗೆ ಈ ಕಾರ್ಯಕ್ರಮವು ನಡೆದೇ ನಡೆಯುತ್ತಿತ್ತು. ಅವನಿಗೆ ಬಂದವರ ಪೈಕಿ ಯಾರಾದರೂ ದೊಡ್ಡವರೆಂದೆನಿಸಿದರೆ ಎದ್ದು ಸಲಾಂ ಮಾಡುತ್ತಿದ್ದನು. ತನಗೆ ಇಚ್ಛೆಯಾದಾಗ ಕಡ್ಡಿಗಳಿಂದ ಗೋಡೆಯಮೇಲೆ ಕವನಗಳನ್ನು ಬರೆಯುತ್ತಿದ್ದನು! ಜಿನ್ನತಮಹಾಲಳನ್ನು ನೋಡಲು ಕೇವಲ ಹೆಂಗಸರನ್ನು ಬಿಡಲಾಗುತ್ತಿತ್ತು. ಮಹಾರಾಣಿಗೆ ಅನೇಕ ಆಂಗ್ಲಸ್ತ್ರೀಯರು ಅವಮಾನ ಮಾಡಿದರು (ಸೇನ್ ೧೧೧, ೧೧೨, ೧೧೩). ಬಖ್ತಖಾನನೊಡನೆ ಓಡಿಹೋಗಿ ಎಲ್ಲಿಯಾದರೂ ಸತ್ತು ಹೋಗಿದ್ದರೆ ಬಾದಶಹನು ಇನ್ನೂ ಹೆಚ್ಚು ಪ್ರೇಮಾದರಗಳಿಗೆ ಪಾತ್ರನಾಗುತ್ತಿದ್ದನು. ಇಂಗ್ಲೀಷರು ಅವನಿಗೆ ಮಾಡಿದ ಅವಮಾನ ಇಡಿಯ ಭಾರತಕ್ಕೆ ಅವಮಾನವೆಂಬುದು ಆಗ ಬಾದಶಹನಿಗೆ ಹೊಳೆಯಲಿಲ್ಲ. ಮುಂದೆ ಬ್ರಹ್ಮದೇಶದಲ್ಲಿ ಒಂದು ದಿನ ಮುದುಕ ಪ್ರಾಣ ಬಿಟ್ಟುಬಿಟ್ಟ.

ಬಹಾದ್ದೂರಶಹನ ಗತಿ ಹಾಗೆ ಆದಂತೆ ಇತ್ತ ಝಾಂಸೀ ರಾಣಿಯ ಸ್ಥಿತಿ ಏನಾಯಿತು ನೋಡುವ.

ಮಹಾರಾಣಿ ಲಕ್ಷ್ಮೀಬಾಯಿಯು ಝಾಂಸಿಯನ್ನು ಬಿಟ್ಟಾಗ ಮಧ್ಯರಾತ್ರಿಯಾಗಿತ್ತು. ಮರುದಿನ ಮಧ್ಯಾಹ್ನ ಝಾಂಸಿಯ ಹಳ್ಳಿಯೊಂದರಲ್ಲಿ ದಾಮೋದರನ ಫಲಾಹಾರದ ಸಲುವಾಗಿ ಓರ್ವ ಮಹಾಲಕರಿಯ ಮನೆಯಲ್ಲಿ ನಿಂತಳು. ತಾನು ಏನೂ ಊಟಮಾಡಲಿಲ್ಲ. ಮತ್ತೆ ಕೂಡಲೆ ಹೊರಟು ಮರುದಿನ ರಾತ್ರಿ ಕಾಲ್ಪಿಗೆ ಬಂದಳು. ಝಾಂಸಿಯಿಂದ ಕಾಲ್ಪಿಯು ೧೦೨ ಮೈಲು ದೂರದಲ್ಲಿದ್ದು ಅಲ್ಲಿಗೆ ಬಂದುಮುಟ್ಟಿದ ಕೂಡಲೆ ದಣುವಿನಿಂದ ಅವಳ ಅತ್ಯಂತ ಪ್ರೀತಿಯ ಕುದುರೆಯು ಸತ್ತುಹೋಯಿತು. ಕಾಲ್ಪಿಯಲ್ಲಿ ನಾನಾಸಾಹೇಬ, ರಾವಸಾಹೇಬ ಮತ್ತು ತಾತ್ಯಾ ಟೋಪಿ ಇದ್ದರು. ಬಾಂದಾದ ನವಾಬನೂ ಅಲ್ಲಿ ಅವರನ್ನು ಕೂಡಿದನು. ಝಾಂಸಿಯ ಮೇಲೆ ದಂಡೆತ್ತಿ ಹೋಗಲು ಸೈನ್ಯಬೇಕೆಂದು ಲಕ್ಷ್ಮೀಬಾಯಿ ಕೇಳಿದಳು. ಆದರೆ ಕಾಲ್ಪಿಯು ಬಹಳ ದಿನ ಬಂಡುಗಾರರ ಕೈಯಲ್ಲಿ ಉಳಿಯಲಿಲ್ಲ. ೨೩-೫-೫೮ ಕ್ಕೆ ಕಾಲ್ಪಿಯು ಇಂಗ್ಲೀಷರ ಕೈವಶವಾಯಿತು.

ಮತ್ತೆ ತಾತ್ಯಾ, ಲಕ್ಷ್ಮೀಬಾಯಿ ಹಾಗು ರಾವಸಾಹೇಬರು ವಿಚಾರವಿನಿಮಯ ಮಾಡಿ ಗ್ವಾಲೇರದ ಮೇಲೆ ದಂಡೆತ್ತಿಹೋದರು. ಗ್ವಾಲೇರದ ಸಿಂದೆ ಅರಸನು ಮೊದಲಿನಿಂದಲೂ ಇಂಗ್ಲೀಷರ ಭಕ್ತನಾಗಿದ್ದನು. ಇಂಗ್ಲೀಷರು ಮೊದಲಿನಿಂದಲೂ ಅವನ ಬಗ್ಗೆ ವಿಶ್ವಾಸ ತೋರಿದ್ದರು. ಅದು ಈಗ ಪ್ರಯೋಜನಹೊಂ

ದಿತು. ಜಯಾಜಿರಾವನು ಗಾದಿಯಮೇಲಿದ್ದ; ದಿನಕರರಾವ ರಾಜವಾಡೆ ದಿವಾಣ ನಾಗಿದ್ದನು. ಗ್ವಾಲೇರ ಮತ್ತು ಮೊರಾರಗಳಲ್ಲಿ ಕಂಪನಿಸೈನ್ಯವೇ ಬಂಡಾಯ ಹೂಡಲು ಆತುರವಿತ್ತು. ಜಯಾಜಿರಾಯನು ಇತ್ತ ಸಿಪಾಯರು ಕೇಳಿದ್ದನ್ನು ಕೊಟ್ಟು ಕೊಟ್ಟು ಅವರನ್ನು ಶಾಂತವಾಗಿಟ್ಟಿದ್ದ. ತಾತ್ಯಾ ಟೋಪಿಗೆ ಈ ಒಳಗಿನ ಸಂಗತಿಗಳೆಲ್ಲ ಚನ್ನಾಗಿ ಗೊತ್ತಿದ್ದವು. ಅವನು ಗುಪ್ತವಾಗಿ ಎರಡು ಮೂರು ಸಲ ಗ್ವಾಲೇರಿಗೆ ಬಂದು ಹೋಗಿದ್ದನು. ತಾತ್ಯಾ ಟೋಪಿಯ ಅಳಿಯ ಗ್ವಾಲೇರದ ಲ್ಲಿಯೇ ಇರುತ್ತಿದ್ದನು. ರಾವಸಾಹೇಬ, ತಾತ್ಯಾ ಮತ್ತು ಲಕ್ಷ್ಮೀಬಾಯಿ ಗ್ವಾಲೇ ರಿಗೆ ಬಂದೊಡನೆ ಸಿಂದೆ ಓಡಿ ಹೋಗಿಬಿಟ್ಟನು. ಅವನ ಸೈನ್ಯ ಬಂಡುಗಾರರನ್ನು ಕೂಡಿಕೊಂಡಿತು. ಆದರೆ ನಗರದ ನಾಶ ಇಲ್ಲವೆ ಲೂಟಿ ಇವುಗಳಲ್ಲಿ ಯಾವ ದನ್ನೂ ಬಂಡುಗಾರರು ಮಾಡಲಿಲ್ಲ. ಅಮರಚಂದ ಭಾಟಿಯಾ ಎಂಬ ಖಜಾನಿ ದಾರನು ಸಿಂದೇನ ಎಲ್ಲ ಹಣವನ್ನು ರಾವಸಾಹೇಬನಿಗೆ ಒಪ್ಪಿಸಿದನು. ತಾತ್ಯಾ ಟೋಪಿಯು ಹೀಗೆ ತನ್ನ ಶಕ್ತಿಯ ಸಂಘಟನೆ ಮಾಡಿಕೊಳ್ಳುತ್ತಿರುವಾಗ ಸ ಹ್ಯೂ ರೋಜನ್ ಇವನ ಇಂಗ್ಲೀಷ ಸೈನ್ಯ ಗ್ವಾಲೇರದ ಮೇಲೆ ದಂಡೆತ್ತಿ ಬಂದಿತು. ಜೂನ ೧ನೆಯ ತಾರೀಖಿಗೆ ತಾತ್ಯಾ ಟೋಪಿ ಮತ್ತು ರಾವಸಾಹೇ ಗ್ವಾಲೇರನ್ನು ಆಕ್ರಮಿಸಿದರು. ಜೂನ ೧೭ ರಿಂದ ಎರಡು ದಿನ ಗ್ವಾಲೇರ ಊ ಹೊರಗೆ ದೊಡ್ಡ ಯುದ್ಧವಾಯಿತು. ಸಿಂದೆ ಇಂಗ್ಲೀಷ ಸೈನ್ಯದೊಡನೆ ಇದ್ದನು.

ಮೊದಲನೆಯ ದಿನವೆ ಲಕ್ಷ್ಮೀಬಾಯಿ ವೈರಿಯ ಖಡ್ಗದಿಂದ ವೀರಸ್ವರ್ಗ ನ್ನೈದಿದಳು. ಕೋಟಕೆಸರಾಯಿಯಿಂದ ಬ್ರಿಗೇಡಿಯರ ಸ್ಮಿಥ್‌ನು ಗ್ವಾಲೇರ ಮೇಲೆ ದಂಡೆತ್ತಿ ಬಂದಾಗ ಲಕ್ಷ್ಮೀಬಾಯಿ ಫೂಲಬಾಗ ಎಂಬಲ್ಲಿ ಕೆಲವು ಸೈನ್ಯ ದೊಡನೆ ಇದ್ದಳು. ಇಂಗ್ಲೀಷ ಸೈನ್ಯ ಬಂದೊಡನೆ ಪಾರಾಗಬೇಕೆಂಬ ಪ್ರಯತ್ನ ದಲ್ಲಿ ಅವಳ ಕುದುರೆ ಅಲ್ಲಿಯ ಒಂದು ಕಾಲುವೆಯನ್ನು ದಾಟದೇ ಹೋಯಿತು ಅವಳ ದೈವಸಂಕಲ್ಪವೇ ಅಡ್ಡ ನಿಂತಿತು. ಕಾಲ್ಪಿಯಲ್ಲಿ ಮರಣಹೊಂದಿದ ಕುದು ಯಿದ್ದರೆ ಲಕ್ಷ್ಮೀಬಾಯಿ ಎಂದೂ ವೈರಿಗಳ ಖಡ್ಗಕ್ಕೆ ಸಿಗುತ್ತಿರಲಿಲ್ಲ. ಅವಳು ಆ ಪುರುಷವೇಷಧಾರಿಯಾಗಿದ್ದಳು ; ಸ್ತ್ರೀಯೆಂಬ ಕಲ್ಪನೆಯಿಲ್ಲದೆ ಓರ್ವ ಸವಾರನ ಖಡ್ಗ ಬೀಸಲು ಅವಳ ತಲೆಯ ಹಿಂಭಾಗಕ್ಕೆ ಬಲವಾದ ಪೆಟ್ಟು ಬಿತ್ತು. ಮುಂ ಸ್ವಲ್ಪೇ ಹೊತ್ತಿನಲ್ಲಿ ಲಕ್ಷ್ಮೀಬಾಯಿ ರಣರಂಗದಲ್ಲಿಯೇ ಮಡಿದಳು. ಅವ ಓರ್ವ ಮುಸಲ್ಮಾನ ದಾಸಿಯೂ ಅವಳೊಡನೆಯೇ ಬಿದ್ದು ಸತ್ತಳು. ಹಿಂದಿನಿಂ ವಿಚಾರಣೆಯನ್ನು ನಡೆಸಿದ ಸರ್ ರಾಬರ್ಟ ಹ್ಯಾಮಿಲ್ಟನ್ನನು ರಾಣಿಯ

ದಾಸಿಯೂ ಗುಂಡಿನಿಂದ ಸತ್ತರೆಂಬ ತೀರ್ಮಾನಕ್ಕೆ ಬಂದಿದ್ದಾನೆ. ಆಗ ಮಾತ್ರ ಲಕ್ಷ್ಮೀಬಾಯಿಯು ತನ್ನ ಕೈಯಿಂದ ಹತಳಾದಳೆಂದು ಇಂಗ್ಲೀಷರಿಗೆ ತಿಳಿಯಲಿಲ್ಲ. ರಾವಸಾಹೇಬ, ತಾತ್ಯಾ ಟೋಪಿ ಎಲ್ಲರೂ ದುಃಖಸಾಗರದಲ್ಲಿ ಮುಳುಗಿದರು. ಕೂಡಲೆ ಮಹಾರಾಣಿಯ ಪಾರ್ಥಿವ ಅವಶೇಷಗಳಿಗೆ ಅಗ್ನಿಸಂಸ್ಕಾರವನ್ನು ಮಾಡಿ ಒಂದು ಉಜ್ವಲ ಇತಿಹಾಸಕ್ಕೆ ಪೂರ್ಣವಿರಾಮ ಕೊಟ್ಟರು.

ಬ್ರಿಟಿಶರ ವಿಶ್ವಾಸಘಾತದ ಮೂಲಕವೆ ರಾಣಿ ಲಕ್ಷ್ಮೀಬಾಯಿಯು ಬಂಡಾಯ ಸೇರಿದಳು. ಅವಳು ಸ್ತ್ರೀಯೆಂದಾಗಲಿ ವಿಧವೆಯೆಂದಾಗಲಿ ಇಂಗ್ಲೀಷರ ಕೈಯಲ್ಲಿ ಯಾವ ಕಾರುಣ್ಯಕ್ಕೂ ಪಾತ್ರಳಾಗಲಿಲ್ಲ. ಇಂಗ್ಲೀಷರಿಗೆ ಅವಳ ರಾಜ್ಯ ಬಿಡುವ ಮನಸ್ಸಿರಲಿಲ್ಲ; ಒಮ್ಮೆ ಯುದ್ಧದಲ್ಲಿ ಭಾಗವಹಿಸಿದ ಬಳಿಕ ಅವಳು ಪ್ರದರ್ಶಿಸಿದ ಶೌರ್ಯ-ಧೈರ್ಯ-ಸಾಹಸಗಳು ಯಾವ ವೀರ ಪುರುಷನೂ ಬೆರಗು ಕಚ್ಚುವಂತಹದಾಗಿವೆ. ಝಾಂಸಿಯಿಂದ ಅವಳು ಪಾರಾಗಿ ಹೋದದ್ದು, ನೂರು ಮೈಲು ಒಂದು ದಿನದಲ್ಲಿ ದಾಮೋದರನೊಡನೆ ಸಾಗಿದ್ದು, ಮತ್ತು ಮುಂದೆ ಗ್ವಾಲೀರದಲ್ಲಿಯ ಅವಳ ಸಾಹಸ ಇವೆಲ್ಲ ಪ್ರತಿಯೊಬ್ಬ ಭಾರತೀಯನು ಹೆಮ್ಮೆ ಪಡುವಂಥ ಉಜ್ವಲ ಕಥೆಯಾಗಿದೆ.[1]

೧೮೮೯ ರಲ್ಲಿ ದಾಮೋದರರಾಯನಿಗೆ ಓರ್ವ ಆಂಗ್ಲ ಗೃಹಸ್ಥನು ಹೀಗೆ ಪತ್ರ ಬರೆದಿದ್ದಾನೆ: "ನಾನು, ನಿಮ್ಮ ತಾಯಿಯನ್ನು ಇಂಗ್ಲೀಷ ಸರಕಾರವು

1. ಮಹಾರಾಣಿಯು ಒಮ್ಮೆ ಗೋಡಸೆ ಭಟಜಿಗೆ ಕಾಲ್ಪಿ ರಸ್ತೆಯಲ್ಲಿ ಭೆಟ್ಟಿಯಾಗಿದ್ದಳು. ಭಟಜಿ ಒಂದು ಬಾವಿಯ ದಂಡೆಯಲ್ಲಿದ್ದ. ಲಕ್ಷ್ಮೀಬಾಯಿಯೂ ಕುದುರೆಯಿಂದ ಇಳಿದು ಬಂದಳು. ಅವಳಿಗೂ ಬಹಳ ದಣಿವು ಆಗಿತ್ತು. ಮೈಯಲ್ಲಿ ಧೂಳ ಮುಸುಕಿತ್ತು. ಮುಖಕಮಲ ಕೆಂಪೇರಿತ್ತು. ಮಹಾರಾಣಿಯನ್ನು ನೋಡಿ ಗೋಡಸೆ ವಂದಿಸಿ ನೀರು ಸೇದಿ ಕೊಡಹೋದ. ಲಕ್ಷ್ಮೀಬಾಯಿಗೆ ಗೋಡಸೆಯ ಗುರುತಿತ್ತು. "ನೀವು ವಿದ್ವಾಂಸ ಬ್ರಾಹ್ಮಣರು; ನನ್ನಂಥವರಿಗೆ ನೀವು ನೀರು ಸೇದಿ ಕೊಡಬಾರದು," ಎಂದು ಅವನನ್ನು ಸರಿಸಿ ತಾನೇ ನೀರು ಸೇದಿಕೊಂಡಳು. ಗೋಡಸೆ ಭಟಜಿಗೆ ಕಣ್ಣೊಳಗೆ ನೀರು ಬಂದವು. ನೀರು ಕುಡಿದು ಮಂದವಾದ ನಿರಾಶೆಯ ಧ್ವನಿಯಲ್ಲಿ ಲಕ್ಷ್ಮೀಬಾಯಿ ನುಡಿದಳು—"ನಾನು ಛಟಾಕ ಅಕ್ಕಿಯವಳು. ವಿಧವೆಗೆ ಇವೆಲ್ಲ ಯಾಕೆ ಬೇಕಾಗಿತ್ತು? ಹಿಂದೂ ಧರ್ಮದ ಮೇಲೆ ಬಂದ ವಿಪತ್ತಿನ ಪರಿಹಾರ ಮಾಡಲು ಶಸ್ತ್ರ ಧರಿಸಿದ್ದೇನೆ. ಸಂಪತ್ತು, ಜೀವ ಯಾವುದರ ಮೇಲೆಯೂ ನನಗೆ ಆಶೆಯು ಉಳಿದಿಲ್ಲ. ನಾವು ಮಾಡಿದ್ದರಿಂದೆ ನಮಗೆ ಯಶ ಸಿಗಲೊಲ್ಲದು. ಅದೃಷ್ಟದಲ್ಲಿ ಇದ್ದದ್ದು ಆಗುತ್ತದೆ."— ಮಾಝಾ ಪ್ರವಾಸ ೯೬–೯೭.

ಅನ್ಯಾಯದಿಂದಲೂ ಕ್ರೂರತನದಿಂದಲೂ ನಡೆಸಿಕೊಂಡಿತು! ನಿಜ ಸಂಗತಿ ನನ್ನಷ್ಟು ಚೆನ್ನಾಗಿ ಯಾರಿಗೂ ಗೊತ್ತಿಲ್ಲ. ಜೂನ ೧೮೫೭ರಲ್ಲಿ ನಡೆದ ಬಿಳಿಯರ ಕೊಲೆಗೆ ಅವಳ ಯಾವ ಸಂಬಂಧವೂ ಇಲ್ಲ. ಅವರಿಗೆ ಮಹಾರಾಣಿ ಎರಡುದಿನ ಆಹಾರ ಕೊಟ್ಟಳು. ಕೆಲವು ಸಶಸ್ತ್ರ ಸಂರಕ್ಷಕರನ್ನು ಕೊಟ್ಟಳು. ಆದರೆ ಅವರನ್ನು ಸಾಯಂಕಾಲ ಹೊರಗೆ ಕಳಿಸಲಾಯಿತು. ನೀವು ಪಾರಾಗಿ ಪಾತಿಯಾ ರಾಜನ ಆಶ್ರಯಪಡೆಯಿರಿ ಎಂದು ಮೇಜರ ಸ್ಕೀನ ಮತ್ತು ಕ್ಯಾಪ್ಟನ್ ಗಾರ್ಡನರಿಗೆ ಆಕೆ ಸಲಹೆಕೊಟ್ಟಳು. ಆದರೆ ಅವರು ಒಪ್ಪದೆ ಕೊನೆಗೆ ಅವರ ಸೈನ್ಯದಿಂದಲೆ ಕೊಲ್ಲಲ್ಪಟ್ಟರು." ಪಾರಸನೀಸರು ಮರಾಠಿಯಲ್ಲಿ ಬರೆದ ಲಕ್ಷ್ಮೀಬಾಯಿಯ ಚರಿತ್ರೆಯಲ್ಲಿ ಈ ಸಂಗತಿಯ ಉಲ್ಲೇಖವಿದೆ.

ಗ್ವಾಲೇರದ ಪತನವಾದೊಡನೆ ತಾತ್ಯಾ ಟೋಪಿ ದೇಶಸಂಚಾರಕ್ಕೇ ಹೊರಟಂತಾಯಿತು. ಯಾವ ಒಂದು ಸ್ಥಳದಲ್ಲಿಯೂ ಅವನು ಉಳಿಯುವದೆ ಸಾಧ್ಯವಿರಲಿಲ್ಲ. ತಾತ್ಯಾ ಇಂಗ್ಲೀಷರಿಗೆ ಮಿಂಚಿನಂತೆ ಕಾಣಿಸಿಕೊಳ್ಳುತ್ತಿದ್ದನು; ಮಿಂಚಿನಂತೆ ಮಾಯವಾಗುತ್ತಿದ್ದನು. ಇವನು ಪೇಶವೆಯ ಆಶ್ರಯದಲ್ಲಿದ್ದ ಓರ್ವ ದೇಶಸ್ಥ ಬ್ರಾಹ್ಮಣ; ಹೆಸರು ರಾಮಚಂದ್ರ ಪಾಂಡುರಂಗ ಉರ್ಫ ತಾತ್ಯಾ ಟೋಪಿ. ಬಂಡಾಯದ ಕಾಲಕ್ಕೆ ಅವನಿಗೆ ೫೦ ವರ್ಷ ಇರಬೇಕು. ತಾತ್ಯಾ ಮೊದಲು ಎಂದೂ ಖಡ್ಗ ಹಿಡಿದವನಲ್ಲ. ಕಾನಪೂರದಲ್ಲಿ ಬಂಡಾಯವಾದಾಗ ಮೊದಲು ತಾತ್ಯಾ ಟೋಪಿಯ ಆಜ್ಞಾಪಾಲನೆ ಮಾಡಲು ಸಿಪಾಯರು ನಿರಾಕರಿಸಿದರು! ಸ್ವಾಮಿಭಕ್ತಿಯೇ ಅವನನ್ನು ಈ ಸಾಹಸಕ್ಕೆ ಹಚ್ಚಿತ್ತು. ಮರಾಠಾ ಕೂಟಯೋಧರ ಎಲ್ಲ ಶ್ರೇಷ್ಠ ಗುಣಗಳೂ ಇವನಲ್ಲಿದ್ದವು. ಆದರೆ ಇವನ ಬೆಂಬಲಕ್ಕೆ ಇತರ ಬಗೆಯ ಯೋಧರೇ ಇರಲಿಲ್ಲ. ಹೀಗಾಗಿ ತಾತ್ಯಾ ಟೋಪಿಯು ಸೋಲಿನ ಮೇಲೆ ಸೋಲನ್ನು ಸಹಿಸುತ್ತ ನಡೆದನು. ಕಾನಪೂರದಲ್ಲಿ ವಿಂಧ್ಯಾಮ್‌ನನ್ನು ಸೋಲಿಸಿದ ಒಂದು ಉದಾಹರಣೆ ಬಿಟ್ಟರೆ ಬಹಿರಂಗ ಯುದ್ಧದಲ್ಲಿ ಒಮ್ಮೆಯೂ ಅವನು ಗೆಲ್ಲಲಿಲ್ಲ. ಅದು ಅವನ ತಪ್ಪಲ್ಲ. ಹೀಗಿದ್ದೂ ಇಂಗ್ಲೀಷರು ತಾತ್ಯಾನಿಗೆ ಹೆದರಿದಷ್ಟು ಯಾರಿಗೂ ಹೆದರಲಿಲ್ಲ. ಸೋಲಾದೊಡನೆ ಒಮ್ಮೆಲೆ ಚದರಿ ಮತ್ತೆ ಬೇರೆಡೆಗೆ ಕೂಡಿ ಶತ್ರುಗಳನ್ನು ಪುನಃ ಯುದ್ಧಕ್ಕೆ ಆಹ್ವಾನಿಸುವ ಕಲೆಯಲ್ಲಿ ತಾತ್ಯಾ ಟೋಪಿ ಪೂರಾ ನಿಷ್ಣಾತನಿದ್ದನು. ಹೆವಲಾಕ್‌ನ ಸೈನ್ಯ ಫತ್ತೇಘರದ ಹತ್ತಿರ ತಾತ್ಯಾನನ್ನು ಸೋಲಿಸಿದಾಗ ತಾತ್ಯಾನ ಸೈನ್ಯಕ್ಕೆ ಸೈನ್ಯವೇ ಮಾಯವಾಯಿತು!! ಹೆವಲಾಕ್‌ನಿಗೆ ಅದು ಎಲ್ಲಿ ಅದೃಶ್ಯವಾಯಿ

ತೆಂಬುವೇ ತಿಳಿಯುತ್ತಿಲ್ಲ! ಇಂಥ ಘೋರ್ತರು ಜಾನಾಕ್ಷರು ಇನ್ನೂ ಹಿಂದೀಯರು ಕೊನೆಗೆ ಯುದ್ಧ ಸಿಗದೆ ನಿರಾಶರಾಗಬೇಕಾಯಿತು.

ರಾಜಪುತಾನಾ, ಮಾಳವಾ, ಮತ್ತು ಮಧ್ಯಭಾರತವನ್ನೆಲ್ಲ ತಿರುಗಾಡಿ ತಾತ್ಯಾಟೋಪಿ ೧೮೫೮ನೆ ವರುಷವನ್ನು ಕಳೆದನು. ನೊವೆಂಬರ ತಿಂಗಳಲ್ಲಿ ವ್ಹಿಕ್ಟೋರಿಯಾ ಮಹಾರಾಣಿ ಘೋಷಣೆ ಹೊರಡಿಸಿ, ಕೊಲೆ ಮಾಡದಿದ್ದ ಎಲ್ಲ ಬಂಡುಗಾರರನ್ನೂ ಕ್ಷಮಿಸಿದಳು. ಆದರೂ ತಾತ್ಯಾಟೋಪಿ ಹೊರಬೀಳಲಿಲ್ಲ. ಅವನು ದಕ್ಷಿಣಕ್ಕೆ ಬಂದು ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಪ್ರವೇಶಮಾಡಬೇಕೆಂದು ಮಾಡಿದ ಪ್ರಯತ್ನಗಳು ಸಾಧಿಸಲಿಲ್ಲ. ಗ್ವಾಲೇರದ ವಿರುದ್ಧ ಬಂಡು ಸಾರಿದ ಓರ್ವ ಮಾನಸಿಂಗನೆಂಬ ರಜಪೂತ ಸರದಾರನು ಇಷ್ಟರಲ್ಲಿ ಅವನನ್ನು ಕೂಡಿದನು. ಸೀಕಾರ ಎಂಬಲ್ಲಿ ತಾತ್ಯಾಟೋಪಿಗೆ ಒಂದು ದೊಡ್ಡ ಸೋಲಾಗಲು ರಾವಸಾಹೇಬ ಮತ್ತು ಮೊಗಲ ನಂದನ ಫಿರೋಜಶಹಾ ಇಬ್ಬರು ತಾತ್ಯಾನನ್ನು ಬಿಟ್ಟು ನೇಪಾಳಕ್ಕೆ ಹೋದರು. ಮಾನಸಿಂಗ, ಓರ್ವ ಚೇಲಾ, ಮತ್ತು ಒಬ್ಬ ಅಡಿಗೆಯವನೊಡನೆ ಈ ಶೂರ ಸೇನಾಪತಿಯು ಪಾರಣ ಎಂಬ ಅರಣ್ಯದಲ್ಲಿ ಅಡಗಿಕುಳಿತನು. ಶತ್ರುಗಳಿಗೆ ಶರಣುಹೋಗುವ ವಿಚಾರ ಇನ್ನೂ ಅವನಿಗೆ ಇರಲಿಲ್ಲ. ಮಾನಸಿಂಗನಿಗೆ ಮಾತ್ರ ಅವನನ್ನು ಮೋಸಮಾಡುವ ವಿಚಾರ ಹೊಳೆಯ ಹತ್ತಿತು. ತಾತ್ಯಾನನ್ನು ಇಂಗ್ಲೀಷರಿಗೆ ಒಪ್ಪಿಸಿ ಗ್ವಾಲೇರ ಮಹಾರಾಜನ ವಿರುದ್ಧ ಬಂಡಾಯ ಹೂಡಿ ಕಳಕೊಂಡ ಜಹಗೀರನ್ನು ಯಾಕೆ ಗಳಿಸಬಾರದು ಎಂದು ಅವನು ವಿಚಾರಮಾಡಿದನು. ತನ್ನ ಮೇಲೆ ನಂಬಿ ಸ್ವಸ್ಥ ಮಲಗಿದ ತಾತ್ಯಾಟೋಪಿಯನ್ನು ಮಾನಸಿಂಗನು ಒಂದು ದಿನ ಜನರಲ್ ನೇಪಿಯರನಿಗೆ ಒಪ್ಪಿಸಿಬಿಟ್ಟನು.

೧೮೫೯ ಎಪ್ರಿಲ ೧೫ಕ್ಕೆ ತಾತ್ಯಾನ ವಿಚಾರಣೆಯಾಯಿತು. "ನಾನು ಇಂಗ್ಲೀಷ ಪ್ರಜೆಯಲ್ಲ. ಇಂಗ್ಲೀಷರಿಗೆ ನಿಷ್ಠೆಯಿಂದ ಇರಲು ನಾನು ಎಂದೂ ಶಪಥ ಮಾಡಿಲ್ಲ. ನಾನು ಪೇಶ್ವೆಯವರ ನೌಕರನು. ಅವರ ಆಜ್ಞೆ ಪಾಲಿಸಿ ಇಂಗ್ಲೀಷರ ವಿರುದ್ಧ ಯುದ್ಧಮಾಡಿದ್ದೇನೆ. ಎಲ್ಲಿಯೂ ನಾನು ಇಂಗ್ಲೀಷ ಸ್ತ್ರೀಯರುಮಕ್ಕಳ ಕೊಲೆ ಮಾಡಿಲ್ಲ. ಧರ್ಮಯುದ್ಧದಲ್ಲಿ ಸೋತ ಸೇನಾಪತಿಯಂತೆ ನೀವು ನನ್ನನ್ನು ನಡೆಸಿಕೊಳ್ಳತಕ್ಕದ್ದು" (ಬೆಹರೆ ೪೮೭) ಎಂದು ತಾತ್ಯಾ ಟೋಪಿ ತನ್ನ ವಿಚಾರಣೆಯ ಕಾಲಕ್ಕೆ ಜವಾಬು ಕೊಟ್ಟನು. ಆದರೂ ಎಪ್ರಿಲ್ ೧೮ನೆಯ ತಾರೀಖಿಗೆ ಈ ರಣಶೂರನಿಗೆ ಫಾಸಿಯಾಯಿತು.

ಬಿಹಾರದಲ್ಲಿ ಜಗದೀಶಪೂರದ ರಜಪೂತ ಜಮೀನದಾರ ಬಾಬೂ ಕುಂವರ-ಸಿಂಗ ಮತ್ತು ಅವನ ಬಂಧು ಅಮರಸಿಂಗರು ತಮ್ಮ ಪ್ರದೇಶದಲ್ಲಿ ವಹಿಸಿದ ವೀರ ಪಾತ್ರದ ಪರಿಚಯಮಾಡಿಕೊಡದೆ ಬಂಡಾಯದ ಕಥೆಯು ಪೂರ್ತಿಯಾಗಲಾರದು. ಬಾಬು ಕುಂವರಸಿಂಗ ೮೦ ವರ್ಷದವನಿದ್ದರೂ ಅತ್ಯಂತ ಜೋರಸಿದ್ದನು. ಅವನ ಜಮೀನದಾರಿಯ ಉತ್ಪನ್ನವು ಸುಮಾರು ಮೂರುಲಕ್ಷ ರೂಪಾಯಿಗಳಷ್ಟಿತ್ತು. ಕುಂವರಸಿಂಗನಿಗೆ ಓದಲು ಬರೆಯಲು ಬರುತ್ತಿದ್ದಿಲ್ಲ. ಕೆಲವರು ಮೋಸ ಮಾಡಿ ಅವನನ್ನು ಹದಿಮೂರುಲಕ್ಷ ರೂಪಾಯಿ ಸಾಲದಲ್ಲಿ ಕೆಡವಿದರು. ಏನಾದರೂ ಉಪಾಯದಿಂದ ಅವನನ್ನು ಋಣಮುಕ್ತ ಮಾಡಬೇಕೆಂದು ಪಾಟಣಾದ ಕಮೀ-ಶನರನು ೧೮೫೭ರ ವರೆಗೆ ಪ್ರಯತ್ನ ಮಾಡಿದರೂ ಸಾಧ್ಯವಾಗಲಿಲ್ಲ. ಕಂಪನಿಯ ಡೈರೆಕ್ಟರ ಮಂಡಳದವರು ಜಮೀನದಾರಿಯನ್ನು ಖಾಲಸಾ ಮಾಡಬೇಕೆಂದೆ ಅಭಿಪ್ರಾಯಪಟ್ಟರು. ೧೮೫೭ರಲ್ಲಿ ಕುಂವರಸಿಂಗ ಪೂರಾ ದಿವಾಳಿ ತೆಗೆದ. ಮೇ ೧೮೫೭ರಲ್ಲಿ ನಣಹಚ್ಚಿದ ಕಾಡತೂಸು ಬಿಹಾರದ ಸಿಪಾಯಿಗಳಲ್ಲಿಯೂ ಉದ್ವೇಗ ವನ್ನುಂಟುಮಾಡಿತ್ತು. ಅವರು ನೇತೃತ್ವಕ್ಕಾಗಿ ಕುಂವರಸಿಂಗನ ಕಡೆಗೆ ನೋಡ ಹತ್ತಿದರು. ಅರ್ರಾ ಎಂಬಲ್ಲಿಗೆ ಬಂಡುಗಾರರು ಬಂದು ಮುಖಂಡತ್ವವನ್ನು ವಹಿಸಿ ಕೊಳ್ಳಲು ಕುಂವರಸಿಂಗನನ್ನು ಆಹ್ವಾನಿಸಿದರು. ಮನಸ್ಸಿನಲ್ಲಿ ಏನಿತ್ತೋ, ಕುಂವರ ಸಿಂಗನು ಬಂಡುಗಾರರನ್ನು ಕೂಡಿಯೇ ಬಿಟ್ಟನು. ಸಿಪಾಯಿಗಳು ಖಜಾನೆ ಲೂಟಿ ಮಾಡಿ ಸೆರೆಮನೆ ಒಡೆದು ಕೈದಿಗಳನ್ನು ಬಿಟ್ಟರು. ಅಲ್ಲಿಯ ಬಿಳಿಯ ಸೈನ್ಯಕ್ಕೆ ಕುಂವರಸಿಂಗನು ಹಾಕಿದ ಮುತ್ತಿಗೆಯನ್ನು ವ್ಹಿನ್ಸೆಂಟ್ ಆಯರ್ ಬಂದು ಬಿಡಿಸಿದನು. ಯುರೋಪಿಯನ್ನರ ಹೆಂಗಸರು, ಮಕ್ಕಳಿಗೆ ಕುಂವರಸಿಂಗ ಎಂದೂ ಏನೂ ಅಪಾಯಮಾಡಲಿಲ್ಲ.

ಕುಂವರಸಿಂಗನು ತನ್ನ ಹಿರಿಯರ ಕಿಲ್ಲೆಯಿದ್ದ ಜಗದೀಶಪುರಕ್ಕೆ ಹೋದನು. ವ್ಹಿನ್ಸೆಂಟ್ ಆಯರ್ ಅವನನ್ನು ಅಲ್ಲಿಗೆ ಬೆನ್ನಟ್ಟಿಬಂದನು. ಕೈಗೆ ಸಿಕ್ಕ ಸಿಪಾಯಿಗಳನ್ನು ಗಲ್ಲಿಗೆ ಹಾಕಿದನು. ಬ್ರಾಹ್ಮಣರು ಬಂಡಾಯವನ್ನೆಬ್ಬಿಸಿರು ವರೆಂದು ಆಪಾದಿಸಿ, ಅಪಾರ ವೆಚ್ಚಮಾಡಿ ಕುಂವರಸಿಂಗನು ಕಟ್ಟಿಸಿದ ಒಂದು ದೇವಸ್ಥಾನವನ್ನೂ ಬ್ರಿಟಿಶ್ ಸೇನಾಪತಿಯು ಕೆಡವಿಸಿಬಿಟ್ಟನು ! ಕುಂವರಸಿಂಗನು ಸೋತು ಅಡವಿಗೆ ಹೋದಬಳಿಕ ಅವನ ಕೋಟೆಯನ್ನು ಹಾಳುಮಾಡಲಾಯಿತು. ಛಮ್ಮೆ ಅಡವಿಪಾಲಾದೊಡನೆ ಕುಂವರಸಿಂಗನು ರೋಹತಕ ರೇವಾಗಳ ಮೇಲೆ ಹಾಯ್ದು ದಿಲ್ಲಿಯ ದಾರಿ ಹಿಡಿದನು. ಗ್ರ್ಯಾಂಟ ಟ್ರಂಕ್ ರಾಯಬೀದಿಯನ್ನು

ಇಂಗ್ಲೀಷರು ಕುಂವರಸಿಂಗನಿಂದ ಕಾಪಾಡಬೇಕಾದರೆ ಅವರಿಗೆ ಬಹಳ ಕಷ್ಟವಾ ಯಿತು. ಅಕ್ಟೋಬರದಲ್ಲಿ ಕುಂವರಸಿಂಗನು ಬಾಂದಾದಲ್ಲಿ ಇದ್ದಾಗ ದಿಲ್ಲಿಯ ಪತನವಾದ ವಾರ್ತೆಯು ಅವನಿಗೆ ತಲುಪಿ ಅವನು ಕಾಲ್ಪಿಗೆ ಹೋದನು. ಅವನೊ ಡನೆ ೧೫೦೦ ಬಾಂದಾ ಬಂಡುಗಾರರಿದ್ದರು. ಕಾನಪೂರದ ಕೊನೆಯ ಕಾಳಗ ವಾದಾಗ ಕುಂವರಸಿಂಗ ಅಲ್ಲಿದ್ದನು. ಮುಂದೆ ಅವನು ಲಖನೌಕ್ಕೆ ಬಂದು ವಾಲಿ ಯಿಂದ ಸನ್ಮಾನ ಪಡೆದನು.

೧೮೫೮ ರ ಪ್ರಾರಂಭದಲ್ಲಿ ಕುಂವರಸಿಂಗನು ಕರ್ನಲ್ ಮಿಲ್ಮನನನ್ನು ಸೋಲಿಸಿ ಅಜಮಘರವನ್ನು ಹಿಡಿದುಕೊಂಡನು. ಮಿಲ್ಮನ್ನನ ಸಹಾಯಕ್ಕೆ ಬಂದ ಕರ್ನಲ್ ಡೇಮ್ಸನ್ನನನ್ನೂ ಕುಂವರಸಿಂಗನು ಓಡಿಸಿದನು. ಅಲಹಾಬಾದದಿಂದ ಲಾರ್ಡ ಮಾರ್ಕರನನ್ನು ಕಳಿಸಲಾಯಿತು. ಮುಂದೆ ಸರ್ ಎಡ್ವರ್ಡ ಲುಗಾ- ರ್ಡನೂ ಸೈನ್ಯ ತಂದು ಸಂಯುಕ್ತ ಹಲ್ಲೆಯನ್ನು ನಡೆಸಿದರು. ಹಿಂದೆ ಸರಿ ಯುತ್ತಹೋದರೂ ಕುಂವರಸಿಂಗನು ಭಯಂಕರ ಶೂರತನದಿಂದ ಕಾದು ತನ್ನ ಸೈನ್ಯವು ಸುವ್ಯವಸ್ಥಿತವಾಗಿ ಸರಿಯುವವರೆಗೆ ಲುಗಾರ್ಡನನ್ನು ಒಂದು ಹೆಜ್ಜೆ ಮುಂದೆ ಬರಗೊಡದೆ ಹಿಂದೆ ಸರಿಯುತ್ತ ಗಂಗಾತೀರಕ್ಕೆ ಬಂದನು. ನದಿಯನ್ನು ದಾಟುವಾಗ ಕುಂವರಸಿಂಗನ ಕೈಗೆ ಗುಂಡಿನೇಟು ಬಿತ್ತು. ಕೂಡಲೆ ಕುಂವರನು ತನ್ನ ಖಡ್ಗದಿಂದ ಆ ಕೈಯನ್ನು ಕಡಿದು ಗಂಗೆಗೆ ಅರ್ಪಿಸಿದನೆಂದು ಹೇಳುತ್ತಾರೆ. ಇಷ್ಟಾದ ಮೇಲೆ ಆರಾದಲ್ಲಿಯ ಕ್ಯಾಪ್ಟನ್ ಲಿ ಗ್ರಾಂಡನು ೧೫೦ ಬಿಳಿಯ ಸೈನ್ಯ ಮತ್ತು ಸೀಖರೊಡನೆ ದಾಳಿಮಾಡಿದರೆ ಕುಂವರಸಿಂಗನ ಮುಂದೆ ಅವರಿಗೆ ನಿಲ್ಲಲಾಗಲಿಲ್ಲ. ಒಂದು ನೂರು ಬ್ರಿಟಿಶ್ ಸೈನಿಕರನ್ನು ಕಳೆದುಕೊಂಡು ಲಿ ಗ್ರಾಂಡ ಇನ್ನಿತರ ಇಬ್ಬರು ಅಧಿಕಾರಿಗಳೊಡನೆ ಸತ್ತು ಹೋದ. ಇದು ಎಪ್ರಿಲ್ ೨೩ ಕ್ಕೆ ನಡೆಯಿತು. ಎಪ್ರಿಲ್ ೨೪ ಕ್ಕೆ ವಿಜಯಲಕ್ಷ್ಮಿಯಿಂದ ಮಾಲೆ ಹಾಕಿಸಿಕೊಂಡು ಕುಂವರಸಿಂಗ ತನ್ನ ಜಗದೀಶಪೂರ ಅರಮನೆಯಲ್ಲಿಯೇ ಮಡಿದ !

೧೮೫೯ ರ ಫೆಬ್ರುವರಿ-ಮಾರ್ಚ ತಿಂಗಳಲ್ಲಿ, ಎಲ್ಲ ಬಂಡಾಯದ ನಾಯಕರೂ ಬ್ರಿಟಿಶರಿಂದ ಉಳಿದುಕೊಳ್ಳುವ ದಾರಿಯನ್ನು ಹುಡುಕಹತ್ತಿದರು. ವಿಕ್ಟೋ ರಿಯಾ ಮಹಾರಾಣಿಯ ಘೋಷಣೆಯ ಮೇರೆಗೆ ಕ್ಷಮೆಯ ಆಶೆಯಿದ್ದ ಬಾಂದಾದ ನವಾಬನಂಥವರು ಹಾಜರಾಗಿ ಬ್ರಿಟಿಶ್ ಸರಕಾರದ ಕ್ಷಮೆಗೆ ಪಾತ್ರರಾದರು. ರಾವಸಾಹೇಬನು ಕಾಶ್ಮೀರದಲ್ಲಿ ತನ್ನ ಮಿತ್ರನೊಬ್ಬನಿಂದ ಸರಕಾರಕ್ಕೆ ಒಪ್ಪಿಸಲ್ಪ

ಟ್ಟನು ; ಅವನನ್ನು ಗಲ್ಲಿಗೇರಿಸಲಾಯಿತು. ನಾನಾಸಾಹೇಬ, ಬಾಳಾಸಾಹೇಬ, ಫಿರೋಜಶಹಾ ಮತ್ತು ಔಧದ ಬೇಗಮ್ ಹಜರತ ಮಹಾಲರು ನೇಪಾಳದ ಅಡವಿಯನ್ನು ಸೇರಿದ್ದರು. ಇವರಲ್ಲದೆ ಎಷ್ಟು ಜನರು ನೇಪಾಳದಲ್ಲಿದ್ದರೆಂಬುದು ಕೊನೆವರೆಗೆ ತಿಳಿಯಲಿಲ್ಲ. ಇಪ್ಪತ್ತೈದು ಸಾವಿರ ಜನರು ಇರಬೇಕೆಂದು ಅಂದಾಜು ಮಾಡಲಾಗಿತ್ತು.

ನಾನಾಸಾಹೇಬ ಮತ್ತು ಬಾಳಾಸಾಹೇಬರು ಬ್ರಿಟಿಶ್ ಸರಕಾರದೊಡನೆ ಪತ್ರವ್ಯವಹಾರ ನಡೆಸಿದರು. ನಾನಾಸಾಹೇಬನನ್ನು ಹಿಡಿದು ಕೊಟ್ಟವರಿಗೆ ಒಂದು ಲಕ್ಷ ರೂಪಾಯಿಗಳ ಇನಾಮನ್ನು ಕೊಡುವದಾಗಿ ಬ್ರಿಟಿಶ್ ಸರಕಾರವು ಸಾರಿತ್ತು. ವ್ಹಿಕ್ಟೋರಿಯಾ ರಾಣಿಯ ಘೋಷಣೆಯನ್ನು ಓದಿ ನಾನಾ ಉದ್ದಾಮತನದಿಂದಲೆ ಸರಕಾರಕ್ಕೆ ಪತ್ರ ಬರೆದ. ಕಾನಪೂರದಲ್ಲಿ ನಡೆದ ಕೊಲೆಯನ್ನು ನಿಮ್ಮ ಸೈನಿಕರೆ ಮಾಡಿರುವರೆಂದೂ ತನಗೆ ಅದರ ಯಾವ ಸಂಬಂಧವೂ ಇಲ್ಲವೆಂದೂ ನಾನಾಸಾ-ಹೇಬನು ಬರೆದಿದ್ದ. ''ಎಲ್ಲರನ್ನೂ ನೀವು ನಿಮ್ಮಕಡೆಗೆ ಎಳೆದುಕೊಂಡಿರಿ. ಆದರೂ ನನ್ನ ಸೈನಿಕರು ಏನು ಮಾಡಬಲ್ಲರೆಂಬುದು ಬೇಗನೆ ನಿಮಗೆ ತಿಳಿಯುವದು." ಎಂದು ನಾನಾಸಾಹೇಬನು ಬರೆದಿದ್ದನು. ಈ ಪತ್ರವು ಮೇಜರ ರಿಚರ್ಡಸನ್ ಎಂಬ ಆಂಗ್ಲ ಅಧಿಕಾರಿಗೆ ಸಿಕ್ಕಲು ಅವನು ಸರಳವಾಗಿ, "ಮಹಾರಾಣಿಯ ಘೋಷಣೆಯು ಎಲ್ಲರಿಗೂ ಸಮನಾಗಿ ಅನ್ವಯಿಸುತ್ತದೆ. ಕೊಲೆಪಾತಕ ನಿನ್ನಿಂದ ಆಗಿರದಿದ್ದರೆ ನಿರ್ಭಯದಿಂದ ಬಯಲಿಗೆ ಬಾ," ಎಂದು ಬರೆದು ನಾನಾನಿಗೆ ತಿಳಿಸಿದನು. ಈ ಅಧಿಕಪ್ರಸಂಗದ ಸಲುವಾಗಿ ಮೇಜರ ರಿಚರ್ಡಸನ್ನನ ಮೇಲೆ ಭಾರತಸರಕಾರವು ತುಂಬಾ ಕೋಪಿಸಿಕೊಂಡು, ಇನ್ನು ಮುಂದೆ ಬಂಡುಗಾರರಎಲ್ಲ ಮನವಿಗಳನ್ನು ನೇರವಾಗಿ ಕಲಕತ್ತೆಗೆ ಕಳಿಸಬೇಕೆಂದು ಆಜ್ಞಾಪಿಸಿತು ! ನಾನಾಸಾಹೇಬನನ್ನು ಭಾರತಸರಕಾರವು ಕ್ಷಮೆಮಾಡುವದು ಶಕ್ಯವೇ ಇರಲಿಲ್ಲ.

ನಾನಾಸಾಹೇಬನೂ ಮೇಜರ ರಿಚರ್ಡಸನ್ನನ ಪತ್ರವನ್ನು ತಿರಸ್ಕರಿಸಿದನು. ವ್ಹಿಕ್ಟೋರಿಯಾ ಮಹಾರಾಣಿಯ ಹಸ್ತಾಕ್ಷರಗಳಲ್ಲಿ ಬರೆದ ಪತ್ರವನ್ನು ಓರ್ವ ಫ್ರೆಂಚ್ ಸೇನಾಪತಿಯು ತಂದು ಮುಟ್ಟಿಸಿದರೆ ತಾನು ಶರಣು ಬರುವದಾಗಿ ಅವನು ಖಂಡತುಂಡ ಉತ್ತರ ಕೊಟ್ಟಿದ್ದಾನೆ. ''ನನಗೆ ಇಂಗ್ಲೀಷರ 'ದಗಾಬಾಜಿ' ಗೊತ್ತಿದೆ. ಜೀವ ಒಂದು ದಿನ ಹೋಗಲೇ ಬೇಕು. ಅವಮಾನವನ್ನು ನಾನೇಕೆ ಸಹಿಸಲಿ? ನಾನೊಬ್ಬನೆ ಇದ್ದರೂ ನಾನಿರುವವರೆಗೆ ನಮ್ಮ ನಿಮ್ಮ ನಡುವೆ ಶಾಶ್ವತ

ಯುದ್ಧ ನಡೆಯಲಿ. ಏನೆ ವ್ಯವಹಾರ ನಡೆದರೂ ಖಡ್ಗದಿಂದಲೆ ನಡೆಯಲಿ "[2]

ಔಧದ ಬೇಗಮ ಹಜರತಮಹಾಲಳೂ ಕೊನೆವರೆಗೆ ನೇಪಾಳದಲ್ಲಿಯೇ ಉಳಿದಳು. ನಾನಾಸಾಹೇಬನಕಿಂತ ಅವಳ ತ್ಯಾಗ ಹೆಚ್ಚಿನದಾಯಿತು. ಯಾಕಂದರೆ ಬ್ರಿಟಿಶ್ ಸರಕಾರವು ಬೇಗಮಳಿಗೆ ತಿಂಗಳಿಗೆ ೪೦೦ ರೂ. ಪೆನಶನ್ನು ಹಾಗೂ ಎಲ್ಲ ಗೌರವಗಳ ಅಭಿವಚನವನ್ನು ಕೊಟ್ಟಿದ್ದರೂ ಹಜರತಮಹಾಲ ಅದನ್ನು ತಿರಸ್ಕರಿಸಿದಳು. ಬ್ರಿಟಿಶರ ಆಶ್ರಯಕ್ಕಿಂತ ನೇಪಾಳದ ಅಡವಿಯೇ ಲೇಸೆಂದಳು ಆ ಮಾನವಂತಿ. ವಿಕ್ಟೋರಿಯಾನ ಘೋಷಣೆಗೆ ಅವಳು ಒಂದು ಖಂಡತುಂಡ ವಾದ ಉತ್ತರವನ್ನು ಹೀಗೆ ಮೊರಡಿಸಿದಳು.

" ಕಂಪನಿಸರಕಾರದ ಯಾವ ಆಡಳಿತವನ್ನೂ ಮಹಾರಾಣಿ ಬದಲಾಯಿಸಿಲ್ಲ. ಅನ್ಯಾಯದಿಂದ ಆಕ್ರಮಣ ಮಾಡಿದ ಯಾವ ರಾಜ್ಯವನ್ನೂ ತಿರುಗಿ ಬಿಡುವ ಸೂಚನೆಯಿಲ್ಲ. ಕ್ರಿಸ್ತ ಧರ್ಮವೇ ನಿಜವಾದ ಧರ್ಮವೆಂದು ರಾಣಿ ಉಲ್ಲೇಖಿಸಿರುವರು ; ಧರ್ಮದ ಗೊಡವೆ ಸರಕಾರಕ್ಕೆ ಯಾಕೆ ಬೇಕು? ದೇವಸ್ಥಾನ ಮಸೀದೆಗಳನ್ನು ರಸ್ತೆ ಮಾಡುವ ನೆವದಿಂದ ನಾಶಗೊಳಿಸಲಾಗಿದೆ. ಧರ್ಮದ ಸಲುವಾಗಿಯೇ ಬಂಡಾಯವಾಯಿತೆಂಬುದನ್ನು ನಾವು ಮರೆಯಬಾರದು. ರಸ್ತೆ

2. ನಾನಾಸಾಹೇಬ ಮತ್ತು ಬಾಳಾಸಾಹೇಬ ಮುಂದೆ ಎಪ್ರಿಲದಲ್ಲಿ ಚಳಿಜ್ವರದಿಂದಲೊ ಹೇಗೊ ಸತ್ತರೆಂದು ನೇಪಾಳಸರಕಾರಕ್ಕೆ ಖಾತ್ರಿಯಾಯಿತು. ಈ ಶೂರನು ಕೊನೆವರೆಗೂ ಶರಣು ಬರಲಿಲ್ಲ. ಬಲಿಷ್ಠ ಮತ್ತು ಕುಪಿತ ಬ್ರಿಟಿಶ್ ಸರಕಾರದ ಕೈಗೆ ನಾನಾ ಹತ್ತದೆ ಇದ್ದುದು ತುಂಬಾ ಆಶ್ಚರ್ಯದ ಸಂಗತಿ. ನಾನಾಸಾಹೇಬನು ಸೌರಾಷ್ಟ್ರಕ್ಕೆ ಬಂದಿದ್ದು ಮುಂದೆ ಎಷ್ಟೊ ವರ್ಷಗಳ ನಂತರ ಸತ್ತನೆಂದೂ ಹೇಳುತ್ತಾರೆ. ಸ್ವಲ್ಪ ದಿನಗಳ ನಂತರ ನಾನಾ ಭಾರತಕ್ಕೆ ಬರುವ ವಿಚಾರ ಮಾಡಿರುವದು ಸಹಜ ಮತ್ತು ಸಂಭವನೀಯವಿದೆ.

೧೮೬೩ರಲ್ಲಿ ಅಜಮೀರದಲ್ಲಿ ಓರ್ವನನ್ನು ನಾನಾಸಾಹೇಬನೆಂದು ಬಂಧಿಸಲಾಗಿತ್ತು. ಅವನು ಯಾರೆಂಬುದು ನಿಶ್ಚಿತವಾಗಿ ಕೊನೆಯವರೆಗೆ ಸರಕಾರಕ್ಕೆ ತಿಳಿಯದಿದ್ದರೂ ಅವನು ನಾನಾ ಅಲ್ಲವೆಂಬ ತೀರ್ಮಾನಕ್ಕೆ ಡಾಕ್ಟರರು ಬಂದ ಮೂಲಕ ಅವನನ್ನು ಬಿಟ್ಟುಬಿಡಲಾಯಿತು. ನಾನಾಸಾಹೇಬನ ಎಡಗಾಲ ಹೆಬ್ಬಟ್ಟಿನ ಮೇಲೆ ಒಂದು ಚಿಕ್ಕ ಶಸ್ತ್ರಚಿಕಿತ್ಸೆಯ ಕಲೆಯಿದ್ದಂತೆ ಈ ಮನುಷ್ಯನ ಹೆಬ್ಬಟ್ಟಿನ ಮೇಲೆಯೂ ಇತ್ತು. ಆದ್ದರಿಂದ ಇವನು ನಾನಾ ಇರಲಿಕ್ಕೇ ಬೇಕೆಂದು ಆಗಿನ ಮುಂಬೈ ಪೋಲೀಸ ಕಮಿಶನರರಾದ ಫೋರ್ಜೆಟರು ಅಭಿಪ್ರಾಯಪಟ್ಟಿದ್ದಾರೆ.—*Our Real Danger in India* by Forjett 190-193.

ಕಾಲುವೆಗಳ ಲೋಕೋಪಯೋಗಿ ಚಟುವಟಿಕೆಗಳನ್ನು ಕೈಕೊಳ್ಳುವದಾಗಿ ಘೋಷಣೆ ಸಾರುತ್ತಿದೆ. ಮೇಲುದರ್ಜೆಯ ನೌಕರಿಗಳ ಮಾತೇ ಅದರಲ್ಲಿಲ್ಲ. ಘೋಷಣೆ ಯಾರನ್ನೂ ಮೋಸಗೊಳಿಸದಿರಲಿ. ಇಂಗ್ಲೀಷರು ಯಾರನ್ನೂ ಎಂದೂ ಕ್ಷಮಿಸಿಲ್ಲ." [3]

ತಾತ್ಯಾ ಟೋಪಿ ಮತ್ತು ರಾವಸಾಹೇಬರೊಡನೆ ಬಹಳದಿನ ಕಾಲ ಕಳೆದ ಫಿರೋಜಶಹಾ ಇವನು ಮೊದಲನೆಯ ಬಹಾದ್ದೂರಶಹನ ವಂಶದವನು. ಫಿರೋಜಶಹಾ ಅತ್ಯಂತ ರಾಷ್ಟ್ರಪ್ರೇಮಿಯೂ ಸಾಹಸಿಯೂ ಆಗಿದ್ದು ಇತರ ಮುಸಲ್ಮಾನ ದೇಶಗಳಲ್ಲಿ ಸಹ ಮೊಗಲ ಬಾದಶಾಹಿಗೆ ಬೆಂಬಲ ಸಂಪಾದಿಸುವ ಪ್ರಯತ್ನವನ್ನು ಮಾಡಿದನು. ೧೮೫೭ರಲ್ಲಿ ಮಕ್ಕಾದಿಂದ ತಿರುಗಿ ಮುಂಬೈಗೆ ಬಂದಾಗ ಇವನಿಗೆ ಇನ್ನೂ ಮೂವತ್ತು ವರ್ಷಗಳಾಗಿರಲಿಲ್ಲ. ಇಂದೂರ, ಔಧ, ರಜಪೂತಾನಾಗಳಲ್ಲಿ ಈ ರಾಜಕುಮಾರನು ಬಹಳ ಶೂರತನದಿಂದ ಹೋರಾಡಿ ಕೊನೆಗೆ ಶರಣುಬರಲು ನಿರಾಕರಿಸಿ ಹಿಂದುಸ್ತಾನದಿಂದ ಹೊರಬಿದ್ದನು. ೧೮೬೦ ರಿಂದ ಕಂದಹಾರ, ಬೊಖಾರಾ, ತೆಹರಾನಗಳಲ್ಲಿ ಅವನನ್ನು ಅನೇಕರು ನೋಡಿದ್ದರು. ೧೮೬೮ರಲ್ಲಿ ಫಿರೋಜಶಹಾ ಕಾಬೂಲದಲ್ಲಿದ್ದನು. ಬ್ರಿಟಿಶರ ಸ್ನೇಹಿತನಾದ ಅಮೀರನಿಗೆ ಇವನ ವಾಸದಿಂದ ವಿಶೇಷ ಗಾಬರಿ ಆಯಿತು. ೧೮೭೯ರಲ್ಲಿ ಈ ಮೊಗಲ ರಾಜಕುಮಾರನು ಕಾನಸ್ಟಾಂಟಿನೋಪಲದಲ್ಲಿ ಕಾಣಿಸಿಕೊಂಡನು. ೧೮೭೫ರಲ್ಲಿ ಚಿಂತೆಥೊಂದರೆಗಳಿಂದ ಅವನು ಮುದುಕನಾದಂತೆ ಕಾಣುತ್ತಿದ್ದನು. ಫಿರೋಜಶಹಾ ೧೮೭೭ರಲ್ಲಿ ಮಕ್ಕಾದಲ್ಲಿ ತೀರಿಕೊಂಡನು. ಫಿರೋಜಶಹಾನ ಪತ್ನಿ ಬ್ರಿಟಿಶ್ ಸರಕಾರದಿಂದ 'ಪೆನ್ಶನ್' ಬೇಡಿದರೆ ಉದಾರ ಸರಕಾರವು ದಿಲ್ಲಿಗೆ ಬರಬಾರದೆಂಬ ಕರಾರ ಹಾಕಿ ಅವಳಿಗೆ ತಿಂಗಳಿಗೆ ೫ ರೂ. ಮಂಜೂರ ಮಾಡಿತು !! ಮುಂದೆ ಲಾರ್ಡ ರಿಪನ್ನನು ಅದನ್ನು ೧೦೦ ರೂಪಾಯಿಗಳಿಗೆ ಏರಿಸಿದನು.! [4]

ಭಾರತದ ರಾಜವೈಭವ ಹೀಗೆ ಒಂದು ಐತಿಹಾಸಿಕ ಅವಶೇಷವಾಯಿತು. ವೈಭವದ ಕುರುಹುಗಳು ವಸ್ತು ಸಂಗ್ರಹಾಲಯಕ್ಕೆ ಸಾಗಿಸಲ್ಪಟ್ಟವು. ರಾಷ್ಟ್ರಾಭಿಮಾನವು ಅಪರಾಧವಾಗಿ ಕುಳಿತಿತು.

---

3. ಪೂರ್ತಿಪಾಠಕ್ಕಾಗಿ, ಸೇನ ಪು. ೩೮೨ ನೋಡಿರಿ.
4. ಅಖಿಲ ಭಾರತೀಯ ಕಥಾಭಾಗದ ಅನೇಕ ಅಧ್ಯಾಯಗಳ ಕಥಾಸರಣಿಯನ್ನು ಸುರೇಂದ್ರನಾಥ ಸೇನರ ಪುಸ್ತಕದಿಂದ ಎತ್ತಿಕೊಳ್ಳಲಾಗಿದೆ.



ಸುರಪುರ ವೆಂಕಟಪ್ಪನಾಯಕ

[ಸೌ: ಬುರ್ಲಿ ಬಿಂದುಮಾಧವ, ಧಾರವಾಡ]

# ಹದಿಮೂರನೆಯ ಅಧ್ಯಾಯ

## ಕರ್ನಾಟಕದಲ್ಲಿ ೧೮೫೭

**ಉ**ತ್ತರಹಿಂದುಸ್ತಾನದಲ್ಲಿ ಬಂಡಾಯದ ಪ್ರಖರ ಜ್ವಾಲೆಯು ಹಬ್ಬಿಕೊಂಡರೂ ದಕ್ಷಿಣಹಿಂದುಸ್ತಾನವು ಶಾಂತವಾಗಿಯೇ ಉಳಿಯಿತು ಎಂದು ವಾಡಿಕೆಯಾಗಿ ಇತಿಹಾಸಕಾರರು ಬರೆಯುತ್ತ ಬಂದಿದ್ದಾರೆ. ದಿಲ್ಲಿ, ಔಧ, ಬುಂದೇಲ ಖಂಡಗಳ ಘಟನೆಗಳನ್ನು ನೋಡಿದರೆ ದಕ್ಷಿಣಹಿಂದುಸ್ತಾನದಲ್ಲಿ ಅಂಥ ಉಗ್ರ ಬಂಡಾಯವಾಗಲಿಲ್ಲ ಎಂಬುದು ನಿಜ. ಆದರೆ ೧೮೦೦ರಿಂದ ೧೮೫೭ ರ ವರೆಗೆ ಬಂಡಾಯ ಅಸಂತೋಷಗಳ ಹುಟ್ಟಿಗೆ ಉತ್ತರ ಮತ್ತು ದಕ್ಷಿಣ ಹಿಂದುಸ್ತಾನಗಳಲ್ಲಿ ಯಾವ ಅಭ್ಯಂತರವೂ ಇರಲಿಲ್ಲ. ಇಷ್ಟೇ ಅಲ್ಲ, ವೆಲ್ಲೂರ, ನಂದಿದುರ್ಗ, ಕಿತ್ತೂರ, ಮಂಗಳೂರು ಕೊಡಗುಗಳಲ್ಲಿ ಜನರು ಬ್ರಿಟಿಶರಿಗೆ ತಮ್ಮ ವಿರೋಧೀ ಅಭಿಪ್ರಾಯವನ್ನು ಚೆನ್ನಾಗಿ ತಿಳಿಸಿಕೊಟ್ಟಿದ್ದರು.

ದಕ್ಷಿಣದಲ್ಲಿ ಹೈದರಾಬಾದದ ನಿಜಾಮನು ಬ್ರಿಟಿಶರಿಗೆ ಕೊನೆಯವರೆಗೆ ನಿಷ್ಠೆಯಿಂದ ಉಳಿದುದರಿಂದ ಇಂಗ್ಲೀಷರ ಮರ್ಯಾದೆಯು ಉಳಿಯಿತು. ನಿಜಾಮನನ್ನೂ ಇಂಗ್ಲೀಷರು ಸಾಕಷ್ಟು ಹಿಂಸಿಸಿದ್ದರೂ ಅವನಿಗೆ ಏನೂ ಪ್ರತೀಕಾರ ಮಾಡುವದು ಸಾಧ್ಯವಾಗಲಿಲ್ಲ. ಹೈದರಾಬಾದದ ಜನರು ಮಾತ್ರ ಸಾಕಷ್ಟು ಸಂತಪ್ತರಾಗಿದ್ದರು. ಮುಖ್ಯ ಮಂತ್ರಿಯಾದ ಸಾಲರಜಂಗನ ಮೇಲೆ ಎರಡು ಸಲ ಹಲ್ಲೆ ಮಾಡಲಾಯಿತು. ೧೮೫೭ ನೆಯ ಇಸ್ವಿ ಜುಲೈ ೩೧ ನೆಯ ತಾರೀಖಿಗೆ ನಗರದಲ್ಲಿಯ ಸುಮಾರು ಐದುನೂರು ಮುಸಲ್ಮಾನರು ಹೈದರಾಬಾದ ರೆಸಿಡೆನ್ಸಿ ಕಚೇರಿಯ ಮೇಲೆ ದಾಳಿ ಇಟ್ಟರು. ಹೈದರಾಬಾದದ ಮೌಲ್ವಿಗಳು ಜನರನ್ನು ಇಂಗ್ಲೀಷ ರಾಜ್ಯದ ವಿರುದ್ಧ ಬಂಡಾಯ ಹೂಡಲು ಪ್ರೇರೇಪಿಸುತ್ತಿದ್ದರು. ಉತ್ತರದಲ್ಲಿಯ ಬಂಡಾಯದ ಜ್ವಾಲೆಯು ಹಬ್ಬಿದಂತೆ ದಕ್ಷಿಣಭಾರತದ ಇಂಗ್ಲೀಷ ಅಧಿಕಾರಿಗಳು ಹೆಚ್ಚಿನ ಜಾಗರೂಕತೆಯನ್ನು ವಹಿಸಿದ್ದರಿಂದ ಬಂಡಾಯದ ಬೇಗೆಯು ಅಲ್ಲಲ್ಲಿ ಭುಗಿಲ್ಲೆಂದರೂ ಕೂಡಲೆ ನಂದಿಹೋಯಿತು.

ಮಂಗಳೂರು, ಅಮರಸೂಳ್ಯ ಮತ್ತು ಕಿತ್ತೂರುಗಳಲ್ಲಿ ೧೮೫೭ರ ಮೊದಲು

ಇಪ್ಪತ್ತು ವರುಷ ಇಂಗ್ಲೀಷರ ವಿರುದ್ಧ ನಡೆದ ಪ್ರಕರಣಗಳನ್ನು ನೋಡಿದರೆ ಕರ್ನಾಟಕಸ್ಥರು ಬಂಡಾಯದ ಭಾಷೆಯನ್ನು ಚೆನ್ನಾಗಿ ಬಲ್ಲವರಾಗಿದ್ದರೆಂಬುದು ಸಿದ್ಧವಾಗುತ್ತದೆ. ಕೊಲ್ಹಾಪೂರದಲ್ಲಿಯಂತೂ ३೧-೭-೧೮೫೭ನೆಯ ದಿನ ೨೭ನೆಯ ನಂಬರಿನ ಹಿಂದೀ ಕಾಲ್ದಳವು ಬಂಡು ಸಾರಿಯೇ ಬಿಟ್ಟಿತು. ಅಂದು ರಾತ್ರಿ ಬಂಡಾಯ ಹೂಡಿದ ಸಿಪಾಯಿಗಳು ಅಧಿಕಾರಿಗಳ ಬಂಗ್ಲೆಗಳಿಗೆ ಕೊಳ್ಳಿಯಿಟ್ಟು ಕೆಲವು ಐರೋಪ್ಯ ಅಧಿಕಾರಿಗಳ ಕೊಲೆ ಮಾಡಿದರು. ಸರಕಾರಿ ಖಜಾನೆ ಮತ್ತು ಪೇಟೆಗಳು ಲೂಟಿ ಮಾಡಲ್ಪಟ್ಟವು. ಬಂಡಾಯ ಹೂಡಿದ ೨೭ ನೆಯ ಕಾಲ್ದಳದಲ್ಲಿ ಎಲ್ಲರೂ ಬಂಡಿನಲ್ಲಿ ಸೇರಲಿಲ್ಲ; ಆದರೆ ಅಧಿಕಾರಿಗಳಿಗೆ ಅವರು ಮನಸುಗೊಟ್ಟು ಸಹಾಯ ಮಾಡಲಿಲ್ಲ. ಸಾತಾರೆಯಲ್ಲಿ ಆಗ ರಂಗೋ ಬಾಪೂಜಿಯು ಫರಾರಿಯಾಗಿದ್ದನು. ಅವನ ಮಗನಿಗೆ ಫಾಸಿ ಶಿಕ್ಷೆಯಾಗಿತ್ತು. ಸಾತಾರೆಯಿಂದ ಕೊಲ್ಹಾಪೂರಕ್ಕೆ ಬಂಡಾಯದ ಪ್ರೋತ್ಸಾಹನವು ಬರುತ್ತಿದೆ ಎಂದು ಇಂಗ್ಲೀಷರಿಗೆ ಬಲವಾದ ಸಂಶಯವಿತ್ತು; ಕೊಲ್ಹಾಪೂರದ ಬಂಡಾಯವಾದ ವಾರ್ತೆಯಿಂದ ಮುಂಬೈ ನಗರದ ಆಂಗ್ಲರು ಸಹ ಗಾಬರಿಯಾಗಿ ತಮ್ಮ ಹೆಂಡರುಮಕ್ಕಳನ್ನು ಸುರಕ್ಷಿತ ಸ್ಥಳಗಳಿಗೆ ಕಳಿಸುವ ಸಿದ್ಧತೆಯನ್ನು ನಡೆಸಿದರು! ಪಶ್ಚಿಮಭಾರತದಲ್ಲಿ ೧೮೫೭ರ ಕಿಡಿ ಹಾರಿದ್ದು ಮೊದಲು ಕೊಲ್ಹಾಪೂರದಲ್ಲಿಯೆ.

ಅಂಥ ಮಳೆಗಾಲದಲ್ಲಿ ಸಹ ಮುಂಬೈಯಿಂದ ಸಮುದ್ರಮಾರ್ಗವಾಗಿ ಸೈನ್ಯ ಬಂದನಂತರ ಪರಿಸ್ಥಿತಿಯು ಶಾಂತವಾಯಿತು. ಬಂಡುಗಾರರನ್ನು ಕರ್ನಲ್ ಮೋಘಾಮನು ಊರೊಳಗೆ ಬರಲು ಕೊಟ್ಟಿರಲಿಲ್ಲವಾದ್ದರಿಂದ ಅವರು ಊರ ಹೊರಗಿನ ಒಂದು ಕುದುರೆ ಲಾಳಿಯನ್ನು ಆಕ್ರಮಿಸಿದ್ದರು. ರತ್ನಾಗಿರಿಗೆ ಹೋಗಲು ಅವರು ಮಾಡಿದ ಪ್ರಯತ್ನಗಳೂ ವಿಫಲವಾದವು. ಅವರು ಕೊನೆವರೆಗೆ ಹೋರಾಡಿ ಮಡಿದರೇ ಹೊರತು ತಮ್ಮ ಸ್ಥಳ ಬಿಡಲಿಲ್ಲ. ೨೭ನೆಯ ದಳವನ್ನು, ಸದರ್ನ ಮರಾಠಾ ಪ್ರದೇಶದ ಕಮಿಶನರನಾದ ಲಿ ಗ್ರಾಂಡ್ ಜೆಕಬ್ ಎಂಬುವವನು ಸಾಹಸದಿಂದ ನಿಃಶಸ್ತ್ರಗೊಳಿಸಿದನು. ಈ ಕಾಲ್ದಳದ ಎಂಟು ಜನರನ್ನು ತೋಫಿನ ಬಾಯಿಗೆ ಕೊಟ್ಟರು. ಇಬ್ಬರಿಗೆ ಗಲ್ಲಾಯಿತು ಮತ್ತು ಹನ್ನೊಂದು ಜನರಿಗೆ ಗುಂಡು ಹಾಕಲಾಯಿತು. ಆದರೂ ಯಾರಿಂದ ಈ ಒಳಸಂಚು ನಡೆಯಿತು ಎಂಬ ಬಗ್ಗೆ ಒಬ್ಬನೂ ಒಂದು ಮಾತು ಉಸಿರಲಿಲ್ಲ. ಗುಂಡು ಹಾಕುವಾಗ ಗಾಯಗೊಂಡನೊರ್ವನಿಗೆ ಕಮಿಶನರನು ಒಳಸಂಚಿನ ಗುಟ್ಟನ್ನು ಹೇಳಿದರೆ ಜೀವದಾನ ಮಾಡುವದಾಗಿ ಭರವಸೆ ಕೊಟ್ಟರೆ ಆ ಸಿಪಾಯಿಯು ಜೇಕಬ್

ಸಾಹೇಬನನ್ನು ತಿರಸ್ಕಾರದಿಂದ ನೋಡಿ, “ಆಗುವದು ಆಗಿ ಹೋಗಿದೆ.” ಎಂದು ಉತ್ತರಿಸಿದನು! ಕೊಲ್ಹಾಪೂರ ರಾಜಮನೆತನದ ಮೇಲೆಯೂ ಬ್ರಿಟಿಶರ ಸಂಶಯವಿತ್ತು. (Jacob's *Western India*, 173)

ಮುಂದೆ ನೊವೆಂಬರ ತಿಂಗಳಲ್ಲಿ ಬಂಡುಗಾರರು ಮತ್ತೊಮ್ಮೆ ಕೊಲ್ಹಾಪೂರವನ್ನು ಆಕ್ರಮಿಸಿಕೊಂಡರು! ಆದರೆ ಅವರ ಸಾಹಸವು ಒಂದೆ ದಿನದಲ್ಲಿ ಕೊನೆಯಾಯಿತು. ಕೊಲ್ಹಾಪೂರ ರಾಜನ ತಮ್ಮ ಚಿಮ್ಮಾ ಸಾಹೇಬ ಎಂಬುವವನು ಬಂಡಾಯದ ಮುಖಂಡನಾಗಿರುವನೆಂದು ಜೇಕಬ ಸಾಹೇಬನಿಗೆ ತುಂಬಾ ಸಂಶಯವಾಗಿತ್ತು. ಆದರೂ ಚಿಮ್ಮಾ ಸಾಹೇಬನ ಮೇಲೆ ಜೇಕಬನಿಗೆ ಏನೂ ಪುರಾವೆಗಳು ಸಿಗಲಿಲ್ಲ. ಸಂಶಯದ ಮೇಲೆಯೇ ಅವನನ್ನು ಸಿಂಧಕ್ಕೆ ಹದ್ದುಪಾರು ಮಾಡಿದನು. ಚಿಮ್ಮಾ ಕೊನೆಗೆ ಅಲ್ಲಿಯೇ ನಿಧನ ಹೊಂದಿದನು. ಇವನು ಧೈರ್ಯಶಾಲಿಯೂಜನಪ್ರಿಯನೂ ಆಗಿದ್ದನೆಂದು ಜೇಕಬನೆ ಒಪ್ಪಿದ್ದಾನೆ. ಕೊಲ್ಹಾಪೂರ ಕೋಟೆಯನ್ನು ಯುದ್ಧಮಾಡಲು ಬಾರದಂತೆ ಕೆಡವಲಾಯಿತು.

ಹೀಗೆ ೧೮೫೭ರ ಅಪರಾರ್ಧದಲ್ಲಿ ಬಂಡಾಯದ ಗಾಳಿಯು ಕೊಲ್ಹಾಪೂರದಲ್ಲಿ ಚೆನ್ನಾಗಿಯೇ ಬೀಸತೊಡಗಿತ್ತು. ನೊವೆಂಬರ ಬಂಡಾಯದಲ್ಲಿ ಮೂವತ್ತಾರು ಬಂಡುಗಾರರನ್ನು ಅರಮನೆಯ ಗೋಡೆಗೆ ನಿಲ್ಲಿಸಿ ಗುಂಡು ಹಾಕಲಾಯಿತು. ಹೊಸ ಕಾಡತೂಸುಗಳನ್ನು ನಿರಾಕರಿಸಿ ಸಿಪಾಯರು ಓಡಿಹೋಗಹತ್ತಿದರು. ಮತ್ತು ಸಿಪಾಯಿ ಪಡೆಗಳು ತಮ್ಮತಮ್ಮೊಳಗೆ ಬಂಡಾಯದ ಬಗ್ಗೆ ಸಾಕಷ್ಟು ಪತ್ರ ವ್ಯವಹಾರವನ್ನೂ ವಿಚಾರವಿನಿಮಯವನ್ನೂ ನಡೆಸಹತ್ತಿದ್ದವು. ಚಿಮ್ಮಾ ಸಾಹೇಬನು ಅರಮನೆಯ ಹಿಂದಿನ ಕಾಲ್ದಾರಿಗಳ ಕೂಡ ಗುಪ್ತ ಕಾರಸ್ಥಾನವನ್ನು ಇಟ್ಟಿದ್ದನೆಂದು ಸಂಶಯಪಡಲಾಗಿತ್ತು. ಮೈಸೂರಿನ ವರೆಗೆ ಸಾಧುವೇಷದಲ್ಲಿ ಬಂದಿದ್ದ ನಾನಾಸಾಹೇಬನ ಗುಪ್ತಚಾರನು ಮುಂದೆ ಕೊಲ್ಹಾಪುರಕ್ಕೂ ಬಂದು ಚಿಮ್ಮಾ ಸಾಹೇಬನನ್ನು ಕಂಡಾಗ ಚಿಮ್ಮಾ ಸಾಹೇಬನು, ಅನೇಕರನ್ನು ಬಂಡಾಯದ ಸಲುವಾಗಿ ತಯಾರು ಮಾಡಿದ್ದೇನೆಂದು, ನಾನಾಸಾಹೇಬನಿಗೆ ಉತ್ತರ ಕೊಟ್ಟಿದ್ದಾನೆ. ಲಖನೌ ದರ್ಬಾರದಿಂದ ಚಿಮ್ಮಾ ಸಾಹೇಬನಿಗೆ ಒಂದು ಅಂದವಾದ ಖಡ್ಗವನ್ನು ಕಾಣಿಕೆಯಾಗಿ ಕಳಿಸಲಾಗಿತ್ತು.

ಪುಣೆಸಾತಾರಗಳಲ್ಲಿ ಪಠಾಣಿ ಜನಾಂಗದ ಮುನಶಿಯೋರ್ವನು ಬ್ರಿಟಿಶ್ ವಿರೋಧಿ ಚಟುವಟಿಕೆಗಳನ್ನು ಬಹಳವಾಗಿ ನಡೆಸುತ್ತಿದ್ದನು. ಗ್ವಾಲೀರದಿಂದ ಕೆಲವು ಸವಾರರು ಪುಣೆಯ ಮೇಲೆ ಹಾಯ್ದು ಕೊಲ್ಹಾಪೂರಕ್ಕೆ ಬಂದರು. ಇದ

ರಲ್ಲಿ ಓರ್ವನು ಆ ಮುನಶಿಯಿಂದ ಸಂದೇಶವನ್ನು ತಂದಿರುವನೆಂದು ಜೇಕಬ್ ಸಾಹೇಬನಿಗೆ ಗೊತ್ತಾಯಿತು ; ಅವನ ಝಡತೀ ಮಾಡುವ ಪೂರ್ವದಲ್ಲಿಯೇ ಅವನು ಆ ಸಂದೇಶವಿದ್ದ ಕಾಗದವನ್ನು ನುಂಗಿಬಿಟ್ಟಿದ್ದನು !

ಹೀಗೆ ಕೊಲ್ಹಾಪೂರ, ಬೆಳಗಾವಿ, ಧಾರವಾಡ ಮತ್ತು ಸಾವಂತವಾಡಿ ಪ್ರದೇಶಗಳಲ್ಲಿ ಬಂಡಾಯದ ಜಾಲವು ತುಂಬಾ ಹಬ್ಬಿಕೊಂಡಿತ್ತು. ೧೮೫೭ನೇ ಆಗಸ್ಟ ತಿಂಗಳಲ್ಲಿ ಬೆಳಗಾವಿಯ ಪರಿಸ್ಥಿತಿಯೂ ಶಾಂತವಿರಲಿಲ್ಲ. ಕೊಲ್ಹಾ-ಪೂರದಲ್ಲಿ ಜುಲೈ ತಿಂಗಳ ಕೊನೆಯದಿನ ಬಂಡಾಯವಾದಾಗ ಬೆಳಗಾವಿಯಲ್ಲಿ ೨೯ನೆಯ ಹಿಂದೀ ಕಾಲ್ದಳವಿದ್ದಿತು. ಸಿಟನ್‌ಕರ್ ಎಂಬ ಕಲೆಕ್ಟರನು ಮತ್ತು ಜನರಲ್ ಲೆಸ್ಟರ್ ಎಂಬ ಸೇನಾಪತಿಯೂ ಅಲ್ಲಿ ಇದ್ದರು. ಆಗ ಬೆಳಗಾವಿ ಯಲ್ಲಿ ಬಿಳಿಯ ಸೈನ್ಯವೇ ಇರಲಿಲ್ಲ; ಎಲ್ಲ ಪಡೆಗಳೂ ಪರ್ಶಿಯಾ ಯುದ್ಧಕ್ಕೆ ಹೋಗಿಬಿಟ್ಟಿದ್ದವು. ಜನರಲ್ ಲೆಸ್ಟರನು ಹೊಸಬನಿದ್ದನು ; ಅದರಂತೆ ೨೯ ನೆಯ ಕಾಲ್ದಳವೂ ಹೊಸ ರಿಕ್ರೂಟರಿಂದಲೇ ತುಂಬಿತ್ತು. ಲೆಸ್ಟರನು ಸಮ-ಯೋಚಿತ ಉಪಕ್ರಮಗಳನ್ನು ಕೈಕೊಳ್ಳದಿದ್ದರೆ ಬಂಡಾಯದಿಂದ ಬೆಳಗಾವಿಯು ಉಳಿಯುತ್ತಿದ್ದಿಲ್ಲ. ಅವನು ತನ್ನ ದಳದ ವಿಷಯದಲ್ಲಿ ವಿಶೇಷ ಜಾಗ್ರತೆಯಿಂದಿ ದ್ದನು. ಬೆಳಗಾವಿ ಕಿಲ್ಲೆಯನ್ನು ದುರಸ್ತ ಮಾಡಿ ಪ್ರಸಂಗ ಬಂದರೆ ಎಲ್ಲ ಐರೋಪ್ಯರೂ ಅಲ್ಲಿ ಆಶ್ರಯಹೊಂದಿ ಬಂಡಾಯಗಾರರೊಂದಿಗೆ ಹೋರಾಡಬೇ-ಕೆಂದು ನಿರ್ಧರಿಸಲಾಗಿತ್ತು. ಬೆಳಗಾವಿಯಲ್ಲಿ ಆಗ ಸುಮಾರು ನಾಲ್ಕು ನೂರು ಆಂಗ್ಲ ಸ್ತ್ರೀಯರು ಮತ್ತು ಮಕ್ಕಳು ಇದ್ದರು. ಸಿಪಾಯಿಗಳ ಕೆಲವು ಪತ್ರಗಳು ಜನರಲ್ ಲೆಸ್ಟರನ ಕೈಗೆ ಬಿದ್ದಿದ್ದವು. ಜೂನ ತಿಂಗಳಲ್ಲಿ ಅಧಿಕಾರಿಗಳು, ಓರ್ವ ಬೆಳ-ಗಾವಿ ಸಿಪಾಯಿಯು ಬಂಗಾಲ ಬಂಧುಗಳಿಗೆ ಬರೆದ ಒಂದು ಪತ್ರವನ್ನು ಮುಂಬೈ ಯಲ್ಲಿ ತಡೆಹಿಡಿದು ಜನರಲ್ ಲೆಸ್ಟರನ ಕಡೆಗೆ ಕಳಿಸಿದರು. ಬಂಗಾಲದ ೭೪ನೆಯ ಹಿಂದೀ ಕಾಲ್ದಳದ ಸಿಪಾಯಿಗಳಿಗೆ ಈ ಪತ್ರವು ಇಲ್ಲಿಯ ಎಷ್ಟೋ ಸಿಪಾಯಿಗಳ ಸಹಿ ಸಹಿತ ಕಳಿಸಲ್ಪಟ್ಟಿತ್ತು. “ ನಾವು ನಿಮ್ಮ ಆಜ್ಞೆಯಂತೆ ನಡೆ ಯಲು ಸಿದ್ಧರಿದ್ದೇವೆ. ನಿಮ್ಮಿಂದ ಸಂದೇಶಬಂದೊಡನೆ ಓಡಿ ಬರುತ್ತೇವೆ. ನೀವೇ ತಾಯಿ ; ನೀವೇ ತಂದೆ, ” ಎಂದು ಅದರಲ್ಲಿ ಅವರು ಬರೆದಿದ್ದರು. ( Jacob's *Western India*, P. 215. )

೨೯ನೆಯ ದಳಕ್ಕೆ ಒಬ್ಬ ಮುಸಲ್ಮಾನ ಮುನಶಿಯಿದ್ದನು. ವಹಾಬಿ ಗುರು ಒಬ್ಬನು ಪುಣೆಯಲ್ಲಿರುತ್ತಿದ್ದು ಇವನು ಅವನ ಶಿಷ್ಯನಾಗಿದ್ದನು. ಕೊಲ್ಹಾಪೂರದ

೨೭ನೆಯ ದಳದ ಮುನಶಿಗೂ ಇವನಿಗೂ ನಡೆದ ಪತ್ರವ್ಯವಹಾರವು ತಿಳಿದು ಈ ಮುನಶಿಯು ದೇಹಾಂತಶಿಕ್ಷೆಗೆ ಗುರಿಯಾದನು ! ಮುತ್ತು ಕುಮಾರನೆಂಬ ಓರ್ವ ಕ್ರಿಸ್ತನಿಂದ ಈ ಒಳಸಂಚು ಹೊರಬಿತ್ತು. ಇದೇ ಸಮಯದಲ್ಲಿ ಮಹಿಪಾಲಸಿಂಗ ಎಂಬ ಓರ್ವ ಗುಪ್ತಚಾರನು ಸುರಪುರದ ವೆಂಕಟಪ್ಪನಾಯಕನಿಂದ ೨೯ನೆಯ ದಳದ ಸಿಪಾಯಿಗಳಿಗೆ ಬಂಡಾಯದ ಸಂದೇಶವನ್ನು ತಂದಿದ್ದನು. ಮಹಿಪಾಲ ಸಿಂಗನು ಅಧಿಕಾರಿಗಳ ಕೈಗೆ ಸಿಕ್ಕಾಗ ಅವನು ಓರ್ವ ಹಿಂದೀ ಅಧಿಕಾರಿಯ ಕೂಡ ಮಾತಾಡುತ್ತಿದ್ದನು ; ಮಹಿಪಾಲಸಿಂಗನಿಗೆ ಫಾಸಿಯಾಯಿತು. ಸುರಪುರ ರಾಜನು ಸಿಪಾಯಿಗಳಿಗೆ ಬಂಡಾಯ ಹೂಡಲು ಪ್ರೇರೇಪಿಸುವ ಸಲುವಾಗಿಯೇ ತನ್ನನ್ನು ಕಳಿಸಿದ್ದನೆಂದು ಮಹಿಪಾಲಸಿಂಗನು ತನ್ನ ಕೊನೆಯ ಜವಾಬಿನಲ್ಲಿ ಹೇಳಿದ್ದಾನೆ. ( *Hyderabad Committee Notes.* )

ಮದ್ದುಗುಂಡಿನ ಸಂಗ್ರಹದ ಹತ್ತಿರವಿದ್ದ ಮಸೀದೆಯೊಂದನ್ನು ಜನಸಮ್ಮರ್ದ ದಿಂದ ಅಪಾಯವಾದೀತೆಂಬ ಭಯದಿಂದ ಮುಚ್ಚಲಾಯಿತು. ಆಗಸ್ಟ ೧೦ನೆಯ ದಿನಾಂಕ ಅಂಥ ಮಳೆಯಲ್ಲಿ ಮುಂಬಯಿಯಿಂದ ಸಮುದ್ರಮಾರ್ಗವಾಗಿ ಕೆಲವು ಬಿಳಿಯ ಸೈನ್ಯ ಬೆಳಗಾವಿಗೆ ಬಂದು ತಲುಪಿದ ಮೇಲೆ ಲೆಸ್ಟರನಿಗೆ ಧೈರ್ಯಬಂದಿತು. ಆಮೇಲೆ ಅವನು ಕೆಲವು ಒಳಸಂಚು ಹೂಡಿದವರನ್ನು ಹಿಡಿದು ಶಿಕ್ಷೆಗೆ ಗುರಿಪಡಿಸಿದನು.

ಬೆಳಗಾವಿಯ ಕಲೆಕ್ಟರನಾಗಿದ್ದ ಸಿಟನ್‌ಕರನು ತುಂಬಾ ಜಾಣನೂ ಶಾಂತ ಸ್ವಭಾವದವನೂ ಆಗಿದ್ದನು. ಅವನು ಕೈಕೊಂಡ ಕೆಲವು ಮುಂಜಾಗ್ರತೆಯ ಕ್ರಮಗಳಿಂದಲೆ ಬೆಳಗಾವಿಯಲ್ಲಿ ಪರಿಸ್ಥಿತಿಯು ಶಾಂತ ಉಳಿಯಿತು. ೨೯ನೆಯ ಹಿಂದೀ ಕಾಲ್ದಳವು ಬಂಡಾಯದ ವಿಚಾರಗಳಿಂದ ತುಂಬಾ ಕಲಂಕಿತವಾಗಿದೆ ಎಂಬುದನ್ನು ಅವನು ಪೂರ್ಣ ಅರಿತಿದ್ದ. ಠಾಕೂರಸಿಂಗನೆಂಬ ಓರ್ವ ಮುಖಂಡನು ಈ ಎಲ್ಲ ಚಟುವಟಿಕೆಗಳಿಗೆ ಅಧ್ವರ್ಯುವಾಗಿರುವನೆಂದೂ ಅವನಿಗೆ ಗೊತ್ತಿತ್ತು. ಅವನಿಗೆ ಠಾಕೂರಸಿಂಗನ ಪರಿಚಯವಿತ್ತು. ಕೊಲ್ಹಾಪೂರದ ಪರಿಸ್ಥಿತಿಯು ವಿಕೋಪಕ್ಕೆ ಹೋಗಿವೆಯೆಂದು ತಿಳಿದೊಡನೆ ಈ ಠಾಕೂರಸಿಂಗನಿದ್ದ ಪಡೆಯನ್ನು ಬಾದಾಮಿಗೆ ಕಳಿಸಿಬಿಟ್ಟನು. ಇದು ಜುಲೈ ೨೯ಕ್ಕೆ; ಜುಲೈ ೩೧ಕ್ಕೆ ಕೊಲ್ಹಾಪೂರದ ಬಂಡಾಯವಾದಾಗ ಬೆಳಗಾವಿಯವರಿಗೆ ಮುಖಂಡನೆ ಇಲ್ಲದಂತಾಯಿತು. ( Malleson Vol. III, p. 32. ) ಕೊಲ್ಹಾಪೂರದ ೨೭ನೆಯ ದಳವು ಎಂದು ಬಂಡಾಯವನ್ನು ಸಾರುವದೊ ಅಂದೆ ಬೆಳಗಾವಿ ಧಾರ

ವಾಡಗಳ ೨೮ನೆಯ ಮತ್ತು ೨೯ನೆಯ ಕಾಲ್ದಳಗಳೂ ಬಂಡಾಯ ಸಾರಬೇಕೆಂಬ ಒಳಸಂಚು ಇತ್ತು. ಸಿಟನ್‌ಕರನ ಸಮಯೋಚಿತ ಉಪಕ್ರಮಗಳಿಂದ ಇದು ಅಯಶಸ್ವಿಯಾಯಿತು.

## ಧಾರವಾಡದಲ್ಲಿ ಗಡಿಬಿಡಿ

ಅಗಸ್ಟ ೧೮೫೭ರ ಸುಮಾರಿಗೆ ಉತ್ತರ ಭಾರತದಲ್ಲಿಯ ಭಯಾನಕ ಘಟನೆಗಳ ವಾರ್ತೆಯು ಧಾರವಾಡಕ್ಕೆ ಬಂದು ಮುಟ್ಟಿದ್ದಿತು. ಧಾರವಾಡದ ಹಿಂದೀ ಕಾಲ್ದಳಗಳು ಬಂಡಾಯವನ್ನೆಬ್ಬಿಸುವ ವಿಚಾರ ನಡೆಸಿದ ಪುರಾವೆಗಳೂ ಇವೆ. ಉತ್ತರ ಭಾರತದಲ್ಲಿ ದಂಗೆಯು ಪ್ರಾರಂಭವಾದ ಮೇಲೆ ಅದರ ವಾರ್ತೆಯು ಇತ್ತ ಬರಬಾರದೆಂದು ಅತ್ತಕಡಿಂದ ಬಂದ ಯಾರಿಗೂ ಮುಂಬೈ ಇಲಾಖೆಯಲ್ಲಿ ಪ್ರವೇಶವಿರಲಿಲ್ಲ.

ಧಾರವಾಡದಲ್ಲಿ ಆಗ ೨೯ನೆಯ ಹಿಂದೀ ಕಾಲ್ದಳವಿದ್ದಿತು. ೧೮೫೭ರ ಮೊಹರಮ ಸಪ್ಟಂಬರ ತಿಂಗಳದಲ್ಲಿದ್ದು ಮೊಹರಮ್ ಸಮಾರಂಭದಲ್ಲಿ ಏನಾದರೂ ಅನಾಹುತವು ಧಾರವಾಡದಲ್ಲಿ ಆಗಬಹುದೆಂದು ಭಯವಿತ್ತು. ೩೧ ಆಗಸ್ಟದ ವರೆಗೆ ಯಾವದೊಂದು ಸಂಶಯವಿಲ್ಲದೆ ಪರಿಸ್ಥಿತಿಯು ಶಾಂತವಾಗಿಯೇ ಇದ್ದಿತು. ಆ ಸುಮಾರಿಗೆ ಎಲ್ಲ ಬಿಳಿಯರ ಕೊಲೆ ಮಾಡಬೇಕೆಂಬ ಅಖಿಲಭಾರತ ಒಳಸಂಚಿನ ಪುರಾವೆಗಳು ಧಾರವಾಡದಲ್ಲಿಯೂ ದೊರೆತವು. ಇದರಿಂದ ಧಾರವಾಡದಲ್ಲಿ ಪರಿಸ್ಥಿತಿಯು ಒಮ್ಮೆಲೆ ಪ್ರಕ್ಷುಬ್ಧವಾಯಿತು. ಆಗಿನ ಕಾಲಕ್ಕೆ ಸೈನ್ಯವೆಲ್ಲ ಧಾರವಾಡ ಕೋಟೆಯೊಳಗೇ ಇರುತ್ತಿತ್ತು. ಈ ಕೋಟೆಯೊಳಗೆ ಬಹಳ ಬ್ರಿಟಿಶ್ ಸೈನ್ಯವಿದೆ ಎಂದು ಜನರಲ್ಲಿದ್ದ ಕಲ್ಪನೆಯೇ ಧಾರವಾಡದಲ್ಲಿ ಬಂಡಾಯವಾಗದೆ ಇರಲು ಕಾರಣವೆಂದು ಆಗಿನ ಕಲೆಕ್ಟರರಾದ ಥಾಮಸ್ ಆಗಿಲ್ವಿ ಎಂಬುವವರು ಅಭಿಪ್ರಾಯಪಟ್ಟಿದ್ದಾರೆ.

ಕೊಲ್ಹಾಪೂರದಲ್ಲಿ ೨೮ನೆಯ ಹಿಂದೀ ಕಾಲ್ದಳಗಳು ಬಂಡಾಯ ಮಾಡಿದ ವಾರ್ತೆಯು ಧಾರವಾಡಕ್ಕೆ ೧-೮-೧೮೫೭ಕ್ಕೆ ತಂತಿ ಮೂಲಕ ಬಂದು ಮುಟ್ಟಿತು. ಅಂದೇ ಸಾಯಂಕಾಲ ಮುಂಡರಗಿ ಭೀಮರಾಯನು ಸೊರಟೂರ ದೇಸಾಯರನ್ನು ಕೂಡಿಕೊಂಡು ಕೆರೆ ಭಾವಿಗಳನ್ನು ಕಡಿಸುವ ನೆವದಿಂದ ಶಸ್ತ್ರಾಸ್ತ್ರಗಳನ್ನೂ ಮೂರು ನಾಲ್ಕು ನೂರು ಜನರನ್ನೂ ಕೂಡಿಸುತ್ತಿರುವನೆಂದು ಬಳ್ಳಾರಿ ಕಲೆಕ್ಟರರಿಂದ ಒಂದು ತಾರು ಸಂದೇಶವು ಬಂದಿತು. ಆದ್ದರಿಂದ ಭೀಮರಾಯನನ್ನೂ

ಸೊರಟೂರ ದೇಸಾಯಿಯನ್ನೂ ಧಾರವಾಡಕ್ಕೆ ಕರೆಸಿ ಕಲೆಕ್ಟರರು ಅವರ ಜವಾಬು ತೆಗೆದುಕೊಂಡರು. ಅವರು ತಮ್ಮ ರಾಜನಿಷ್ಠೆಯನ್ನು ಒಕ್ಕೊರಲಿನಿಂದ ಘೋಷಿಸಿದರು. ಕಲೆಕ್ಟರರಿಗೆ ಆಗ ಇವರ ಬಗ್ಗೆ ಎಳ್ಳಷ್ಟೂ ಸಂಶಯ ಬರಲಿಲ್ಲ! ಆಗಸ್ಟ ೨ನೆಯ ತಾರೀಖಿಗೆ ಸಿಪಾಯರ ಮತ್ತು ಹಿಂದೀಯರ ಎಲ್ಲ ಪತ್ರಗಳನ್ನು ತಪಾಸು ಮಾಡತಕ್ಕದೆಂದು ಸರಕಾರವು ನಿರ್ಣಯ ಮಾಡಿತು. ಆಗಸ್ಟ್ ೭ನೆಯ ತಾರೀಖಿನ ದಿನ ಹಿಂದೀ ಕಾಲ್ದಳಗಳ ಅಧಿಕಾರಿಯೊರ್ವನಿಗೆ ಬಂದ ಅನಾಮಧೇಯ ಪತ್ರದಲ್ಲಿ ತಮ್ಮ ಪಡೆಯು ಸ್ಟೈಪೆಂಡಿಯರಿ ಪೋಲೀಸರನ್ನು ಕೂಡಿಕೊಂಡು ಬಂಡಾಯ ಹೂಡಲು ಸಿದ್ಧವಾಗಿದೆ ಎಂದು ಬರೆದಿದ್ದರು. ಬಿಳಿಯರನ್ನು ಕೊಲೆಮಾಡಬೇಕೆಂದೂ, ಕಿಲ್ಲೆಯನ್ನು ವಶಪಡಿಸಿಕೊಂಡು ಸರಕಾರಿ ಖಜಾನೆಯನ್ನು ಲೂಟಿ ಮಾಡಬೇಕೆಂದೂ ಅವರಲ್ಲಿ ಸೂಚಿಸಲಾಗಿತ್ತು.

ಈ ಪತ್ರವು ಸಿಕ್ಕೊಡನೆ ಸಹಜವಾಗಿ ಅಧಿಕಾರಿ ವರ್ಗದಲ್ಲಿ ಗಡಿಬಿಡಿಯಾಯಿತು. ಇಷ್ಟರಲ್ಲಿ ಸಿಪಾಯರು ಗುಪ್ತ ಸಭೆಗಳನ್ನು ನಡೆಸುತ್ತಿದ್ದುದೂ ಅಧಿಕಾರಿಗಳ ದೃಷ್ಟಿಗೆ ಬಿದ್ದಿತು. ಮೊದಲಿನಂತೆ ಸಿಪಾಯಿಗಳು ಅಧಿಕಾರಿಗಳ ವಿಷಯದಲ್ಲಿ ಗೌರವವನ್ನು ತೋರಿಸುತ್ತಿರಲಿಲ್ಲ. ಆದ್ದರಿಂದ ಎರಡು ಹಿಂದೀ ಕಾಲ್ದಳಗಳನ್ನು ಹುಬ್ಬಳ್ಳಿಗೆ ಕಳಿಸಬೇಕೆಂದು ಮದ್ರಾಸಿಗೆ ಒಂದು ಅವಸರದ ಸಂದೇಶವನ್ನು ಕಳಿಸಲಾಗಿತ್ತು. ಆಗಸ್ಟ್ ೨೭ನೆಯ ತಾರೀಖಿಗೆ ೭ನೆಯ ಯುರೋಪಿಯನ ದಳದ ೫೦ ಸೈನಿಕರು ಮುಂಬಯಿಯಿಂದ ಬಂದು ಧಾರವಾಡವನ್ನು ಪ್ರವೇಶ ಮಾಡುವವರೆಗೆ ಇಡಿಯ ನಗರವೆ ಅಶಾಂತವೂ ಚಿಂತಾಗ್ರಸ್ತವೂ ಆಗಿದ್ದಿತು.

ಗಂಡಾಂತರದ ವೇಳೆಯಲ್ಲಿ ಯುರೋಪಿಯನ್ನರು ಮತ್ತು ಕ್ರಿಶ್ಚಿಯನ್ನರು ಕಿಲ್ಲೆಯಲ್ಲಿ ಬಂದಿರುವಂತೆ ಕಿಲ್ಲೆಯ ದುರಸ್ತಿ ಆಗಿತ್ತು. ಈ ಯುರೋಪಿಯನ್ ಸೈನಿಕರು ಬಂದೊಡನೆ ೭ನೆಯ ಕಾಲ್ದಳಗಳ ಸೈನಿಕರ ವರ್ತನೆಯಲ್ಲಿಯೂ ಸುಧಾರಣೆಯು ಕಂಡು ಬಂದಿತು. ಆಗಸ್ಟ್ ಮೊದಲನೆಯ ಭಾಗದಲ್ಲಿ ಧಾರವಾಡ ಕಲೆಕ್ಟರರು ನರಗುಂದ ಬಾಬಾ ಸಾಹೇಬನನ್ನೂ ಸವಣೂರ ನವಾಬನನ್ನೂ ಕರೆಯಿಸಿ ಅವರ ರಾಜನಿಷ್ಠೆಯ ಬಗ್ಗೆ ತಪಾಸು ತೆಗೆದುಕೊಂಡರು. ಕೊಲ್ಹಾಪೂರದಲ್ಲಿ ನಡೆದ ಘಟನೆಗಳನ್ನು ಕಲೆಕ್ಟರರು ಅವರಿಗೆ ವಿವರಿಸಿ ಚರ್ಚೆ ನಡೆಸಿದಾಗ ಇರ್ವರೂ ಯಾವದೆ ಬಿಕ್ಕಟ್ಟಿನ ಪ್ರಸಂಗದಲ್ಲಿ ಕಲೆಕ್ಟರ ಸಾಹೇಬರು ತಮ್ಮ ಸಹಾಯಸಹಕಾರಗಳ ಬಗ್ಗೆ ಸಂಪೂರ್ಣ ಭರವಸೆ ಪಡೆಯಬಹುದೆಂದು ಆಶ್ವಾಸನ ಕೊಟ್ಟಿದ್ದಾರೆ. ಸಾಹೇಬರು ಎಲ್ಲಿಯೆ ಹೋದರೂ ಬದಿಗೆ ತನ್ನದೊಂದು ಬಿಡಾರ

ವನ್ನು ಹಾಕಿಸಿಬಿಡಿರಿ ಎಂದು ಬಾಬಾಸಾಹೇಬನು ಆಶ್ವಾಸನೆ ಕೊಟ್ಟಿದ್ದನೆಂದು ತಿಳಿಯುತ್ತದೆ. ಮುಸಲ್ಮಾನರ ಬಗ್ಗೆ ಜಾಗರೂಕರಾಗಿರಲು ಕಲೆಕ್ಟರರು ಸವಣೂರ ನವಾಬರಿಗೆ ತಿಳಿಸಿ ಇಬ್ಬರನ್ನೂ ಮರಳಿ ಕಳಿಸಿಕೊಟ್ಟಿದ್ದಾರೆ.

ಗದಗಬೆಟಗೇರಿಯಲ್ಲಿ ಆಗಿನ ಕಾಲಕ್ಕೆ ಒಂದು ಜರ್ಮನ್ ಮಿಶನರಿ ಸಂಸ್ಥೆ ಯಿದ್ದು ಮಿ. ವರ್ಥ ಎಂಬ ಓರ್ವ ಜರ್ಮನ್ ಮಿಶನರಿಯು ಅಲ್ಲಿ ಇರುತ್ತಿದ್ದನು. ಈ ಜರ್ಮನ್ ಮಿಶನರಿಯು ಆಗಸ್ಟ್ ಅಂತ್ಯದ ಸುಮಾರಿಗೆ ಕಲೆಕ್ಟರರಿಗೆ ಪತ್ರ ಬರೆದು ಗದಗಬೆಟಗೇರಿಯ ಮುಸಲ್ಮಾನರು ಮೊಹರಮ್ಮಿನ ದಿವಸ ಬಂಡಾಯ ವನ್ನು ಹೂಡಬೇಕೆಂದು ಸಂಚು ನಡೆಸಿದ್ದಾರೆಂದು ತಿಳಿಸಿದನು. ಧಾರವಾಡ ಡಿ. ಎಸ್. ಪಿ. ಮತ್ತು ರಾಯಚೂರ ದುಆಬದ ಸೈನ್ಯ ಠಾಣ್ಯಗಳು ಕೂಡಲೆ ಜಾಗರೂಕತೆಯನ್ನು ವಹಿಸಿ ಗದಗಬೆಟಗೇರಿ ಮುಸ್ಲಿಂ ನಾಯಕರಿಂದ ಜಾಮೀ ನನ್ನು ತೆಗೆದುಕೊಂಡರು. ಧಾರವಾಡ, ಹುಬ್ಬಳ್ಳಿ ಮುಸಲ್ಮಾನರನ್ನು ಸಾವಕಾಶ ವಾಗಿ ಏನಾದರೊಂದು ನೆವಹೇಳಿ ಪೋಲಿಸರು ನಿಃಶಸ್ತ್ರಗೊಳಿಸಿದರು. ಮೊಹ ರಮ್ ಆಚರಣೆಯ ಅವಧಿಯಲ್ಲಿ ಎಲ್ಲ ಮದ್ಯದ ಅಂಗಡಿಗಳನ್ನು ಬಂದು ಇಡ ಲಾಯಿತು. ಕರ್ಫ್ಯೂ ಹುಕುಮನ್ನು ಜಾರಿಯಲ್ಲಿ ತಂದು ಮೊಹರಮ್ ಮೆರ ವಣಿಗೆಗಳಿಗೆ ನಿಶ್ಚಿತ ಸಮಯವನ್ನು ಗೊತ್ತುಪಡಿಸಲಾಯಿತು. ಅಲ್ಲದೆ ಜನರು ತಮ್ಮಲ್ಲಿಯ ಶಸ್ತ್ರಾಸ್ತ್ರಗಳನ್ನು ಸರಕಾರಕ್ಕೆ ಒಪ್ಪಿಸಬೇಕೆಂದು ಸಾರಲಾಯಿತು.

ಆಗಿನ ಕಾಲಕ್ಕೆ ಧಾರವಾಡದಲ್ಲಿ ಕಾಫ್‌ಮನ್ ಎಂಬ ಜರ್ಮನ್ ಮಿಶನರಿ ಇದ್ದನು. ಇವನೂ ಗದಗಬೆಟಗೇರಿಯ ಮಿ. ವರ್ಥ್‌ನಂತೆ ಧಾರವಾಡ ಕಲೆಕ್ಟರ ರಿಗೆ ಒಂದು ಪತ್ರ ಬರೆದು ದಕ್ಷಿಣ ಭಾರತದ ಬ್ರಾಹ್ಮಣರು ಮತ್ತು ಮುಸಲ್ಮಾನರು ಬ್ರಿಟಿಶರ ವಿರುದ್ಧ ಒಂದು ಕ್ರಾಂತಿಯ ಒಳಸಂಚನ್ನು ಹೂಡಿರುವರೆಂದೂ ಮರಾಠಾ ಪ್ರದೇಶದ ಹಿಂದುಗಳು ಮೊಗಲ ಸಿಂಹಾಸನಕ್ಕೆ ಸಹಾಯ ಮಾಡ ಬೇಕೆಂದೂ ಮುಸಲ್ಮಾನರು ಪೇಶವೆ ರಾಜ್ಯದ ಪುನಃಸ್ಥಾಪನೆಯಾಗುವಂತೆ ಪ್ರಯತ್ನ ಮಾಡಬೇಕೆಂದೂ ಒಡಂಬಡಿಕೆಯಾದ ವಾರ್ತೆಯಿದೆ ಎಂದು ತಿಳಿಸಿ ದನು. ಹಾಗೂ ನಾನಾಸಾಹೇಬ ಪೇಶ್ವೆ ದಸರೆಗೆ ಪುಣೆಗೆ ಸಂದರ್ಶನವನ್ನೀಯುವ ವನೆಂದೂ ಆ ಪತ್ರದಲ್ಲಿ ಉಲ್ಲೇಖಿಸಲಾಗಿತ್ತು.

ಮಿಶನರಿ ಜನರ ಈ ಪತ್ರಗಳಿಂದ ಜನರಲ್ಲಿಯ ಅಶಾಂತಿ-ಉದ್ವೇಗಗಳು ಸಿದ್ಧವಾಗುವವಲ್ಲದೆ ಅಂದಿನ ಮಿಶನರಿಗಳು ಜನರಲ್ಲಿ ಬೆರೆತು ತಮಗೆ ತಿಳಿದ ಗುಪ್ತಸಮಾಚಾರಗಳನ್ನು ಅಧಿಕಾರಿಗಳಿಗೆ ತಿಳಿಸುತ್ತಿದ್ದರೆಂಬುದು ಸ್ಪಷ್ಟವಾಗು

ತ್ರಿಪೆ. (*Political Disturbances Files,* Bombay Archives. 24/57 Letter of Dharwar Collector to Govt. dated 9-9-1857.)

## ಜಮಖಂಡಿ ಅರಸನ ಬಂಧನ

ಜಮಖಂಡಿಯ ರಾಜನು ಬಂಡುಗಾರರನ್ನು ಕೂಡಿರುವನೆಂದು ಬ್ರಿಟಿಶ ಸರಕಾರಕ್ಕೆ ಬಲವಾದ ಸಂಶಯವಿತ್ತು. ಆದ್ದರಿಂದ ಸರಕಾರದವರು ಓರ್ವ ಇಂಗ್ಲೀಷ ಅಧಿಕಾರಿಯನ್ನು ಜಮಖಂಡಿಗೆ ಕಳಿಸಿದರು. ಇವನು ೧೮೫೭ನೆಯ ಇಸ್ವಿ ಫೆಬ್ರುವರಿ ೨೭ನೆಯ ತಾರೀಖಿಗೆ ಜಮಖಂಡಿಗೆ ಬಂದು ಅಬಾ ದೇವಧರನನ್ನು ಕೂಡಲೆ ತನ್ನ ಕೈವಶ ಮಾಡಬೇಕೆಂದು ಹೇಳಿದನು. ಈ ಅಧಿಕಾರಿಯು ಕೂಡಲೆ ಕಿಲ್ಲೆಯ ಪ್ರದೇಶವನ್ನೆಲ್ಲ ಶೋಧಮಾಡಿ ಮದ್ದುಗುಂಡುಗಳನ್ನು ವಶಪಡಿಸಿಕೊಂಡನು. ಈ ಮದ್ದುಗುಂಡುಗಳನ್ನು ಮುಧೋಳಕ್ಕೆ ಸಾಗಿಸಲಾಯಿತು. ಅಂದೇ ಈ ಅಧಿಕಾರಿಯು ಮುಧೋಳಕ್ಕೆ ಬಿಡಾರ ಹಾಕಿದನು.

ಅಪ್ಪಾಸಾಹೇಬ ಜಮಖಂಡಿಕರನು ಸುಲಭವಾಗಿ ಬ್ರಿಟಿಶರಿಗೆ ವಿಧೇಯನಾಗಲಿಕ್ಕಿಲ್ಲವೆಂಬ ಸಂಶಯದಿಂದ ಕೆಲವು ಬ್ರಿಟಿಶ್ ಸೈನಿಕರಿಗೆ ಹೇಳಿಕಳಿಸಲಾಗಿತ್ತು. ಆದರೆ ಇವರು ಸಮಯಕ್ಕೆ ಸರಿಯಾಗಿ ಬರಲಿಲ್ಲ. ಬ್ರಿಟಿಶ್ ಸೈನ್ಯವು ಬರಲಿದೆ ಎಂದು ತಿಳಿದೊಡನೆ ಅಪ್ಪಾಸಾಹೇಬನು ತಿಜೋರಿಗೆ ಮೊಹರುಮಾಡಿ ರಾಮದುರ್ಗಕ್ಕೆ ಹೋದನು. ಅವನ ಬಗ್ಗೆ ಸಂಶಯನಿವಾರಣೆಯಾಗುವ ವರೆಗೆ ರಾಮದುರ್ಗದಲ್ಲಿಯೇ ಅವನು ಇರತಕ್ಕದ್ದೆಂದು ವಿಧಿಸಲಾಗಿತ್ತು. ಸಂಗಡ ನಾಲ್ವರಕಿಂತ ಹೆಚ್ಚು ಪರಿವಾರವನ್ನು ಸಹ ಒಯ್ಯತಕ್ಕದ್ದಲ್ಲವೆಂದು ಸರಕಾರದ ಹುಕುಮು ಆಗಿತ್ತು. ಸೈನ್ಯವು ಬಂದು ಕಿಲ್ಲೆ ಪ್ರದೇಶದಲ್ಲಿ ಬಿಡಾರಹಾಕಿ ಎಲ್ಲ ಅರಮನೆಯನ್ನು ಶೋಧಮಾಡಿತು. ಮ್ಯಾನಸನ್ ಸಾಹೇಬನು ಈ ಸೈನ್ಯದ ಅಧಿಪತಿಯಾಗಿ ಬಂದಿದ್ದನು. ಅವನು ಅಪ್ಪಾಸಾಹೇಬ ಜಮಖಂಡಿಕರನನ್ನು ಕೂಡಲೆ ಕರೆಸಿ ಓರ್ವ ಅಡಿಗೆಯವನನ್ನು ಮಾತ್ರ ಸಂಗಡ ಕರಕೊಂಡು ಕೂಡಲೆ ಬೆಳಗಾವಿಗೆ ಹೊರಡತಕ್ಕದ್ದೆಂದು ವಿಧಿಸಿದನು. ಇದಾದುದು ೧೮೫೭ರ ಮಾರ್ಚ ೨೧ನೆಯ ತಾರೀಖಿನ ದಿನ. ರಾಜನ ವಿನಂತಿ ಪ್ರಕಾರ ಪಾಲಕಿ ಹೊರುವವರನ್ನೊಳಗೊಂಡು ೭೫ ಜನರನ್ನು ಸಂಗಡ ಒಯ್ಯಲು ಅಪ್ಪಣೆ ಕೊಟ್ಟರು. ಮಾರ್ಚ ೨೩ಕ್ಕೆ ಅಪ್ಪಾಸಾಹೇಬನು ಜಮಖಂಡಿಯಿಂದ ಹೊರಟು ಮೂರು ದಿನಗಳ ನಂತರ ಬೆಳಗಾವಿಗೆ ತಲುಪಿದನು. ತನ್ನ ಖರ್ಚಿಗೆಂದು ಅವನು ೬೦೦೦

ರೂಪಾಯಿಗಳನ್ನು ತಂದಿದ್ದನು. ಅವನ ತಂಗಿ "ಮೂನಕ್ಕ" ಅಣ್ಣಾಸಾಹೇಬ ಎಂಬ ಓರ್ವ ವಿಶ್ವಾಸಿ ಆಳಿನ ಹತ್ತಿರ ಉಳಿದಳು.

ಮ್ಯಾನಶನ್ ಸಾಹೇಬನು ಈ ಕಾರ್ಯ ಮುಗಿಸಿ ನರಗುಂದ ಬಂಡಾಯವನ್ನು ಹತ್ತಿಕ್ಕಲು ನರಗುಂದದ ದಿಶೆಯಲ್ಲಿ ಹೊರಟನು. ಮುಂದೆ ಕೆಲವು ತಿಂಗಳು ಜಮಖಂಡಿಯಲ್ಲಿ ಶೋಧ-ಕೈದುಗಳು ನಡೆದೇ ಇದ್ದವು. (*Historical Documents of Karnatak*, Vol. I. Kannada Research Institute, Dharwar.)

ಜಮಖಂಡಿ ರಾಜನ ಬಂಧನವಾಗಲು ಅವನ ಸೇನಾಪತಿಯಾದ ಛನ್ನೂ ಸಿಂಗನು ಕ್ರಾಂತಿಗೆ ತಾನೇ ಕಾರಣನೆಂದೂ ಅರಸರ ಸಂಬಂಧವು ಏನೂ ಇಲ್ಲ ವೆಂದೂ ಹೇಳಿ ಎಲ್ಲ ಹೊಣೆಯನ್ನೂ ತನ್ನ ಮೇಲೆಯೇ ಹೊತ್ತುಕೊಂಡನು. ಆಗ ಅರಸನು ಮುಕ್ತನಾದನು; ಆದರೆ ಛನ್ನೂಸಿಂಗನಿಗೆ ಫಾಸಿಯಾಯಿತು. ಆ ವೀರನ ಸಮಾಧಿಯ ಮುಂದೆ ದಿನಾಲು ಅರಸುಮನೆತನದವರು ದೀಪಹಚ್ಚಿ ದರ್ಶನ ಪಡೆಯುವ ಪರಿಪಾಠ ಉಂಟು. (ಮಿಂಚಿನ ಬಳ್ಳಿಯವರ '೧೮೫೭' ಪುಟ, ೩೨೬).

## ಹಲಗಲಿ ಹರಾಕಿರಿ

೧೮೫೭ರ ಕೊನೆಗೆಂದರೆ ಉತ್ತರಹಿಂದುಸ್ತಾನದ ಅನೇಕ ವಾರ್ತೆಗಳು ಕರ್ನಾಟಕದಲ್ಲಿ ಸಾಕಷ್ಟು ಪ್ರಸಾರ ಹೊಂದಿದ್ದವು. ಉತ್ತರಹಿಂದುಸ್ತಾನದಲ್ಲಿ ಬ್ರಿಟಿಶರ ಆಳಿಕೆಯು ಕೊನೆಗೊಂಡಿದೆಯೆಂದೂ ನಮ್ಮಲ್ಲಿಯಾದರೂ ಸರಕಾರ ವನ್ನು ಯಶಸ್ವಿಯಾಗಿ ವಿರೋಧಿಸುವದು ಅಶಕ್ಯವಿಲ್ಲವೆಂದೂ ಜನರಲ್ಲಿ ಒಂದು ಸಹಜ ಅಭಿಪ್ರಾಯವೇ ಆಗಿತ್ತು. ಇಂಥ ಪರಿಸ್ಥಿತಿಯಿರುವಾಗ ಅಕ್ಟೋಬರ ತಿಂಗಳದಲ್ಲಿ ಮುಂಬೈಸರಕಾರವು ಶಸ್ತ್ರಾಸ್ತ್ರಗಳ ಧಾರಣಕ್ಕೆ ಪ್ರತಿಬಂಧ ಹಾಕಿ ಲೈಸೆನ್ಸ್ ಇಲ್ಲದೆ ಯಾರೂ ಶಸ್ತ್ರಾಸ್ತ್ರ ಧಾರಣಮಾಡಬಾರದೆಂದು ಹುಕುಮು ಹೊರಡಿಸಿತು. ತಮ್ಮ ಶಸ್ತ್ರಾಸ್ತ್ರಗಳ ಬಗ್ಗೆ ಅಭಿಮಾನವಿದ್ದ ಆಗಿನ ಜನ ಒಮ್ಮೆ ಶಸ್ತ್ರಾಸ್ತ್ರಗಳನ್ನು ಒಪ್ಪಿಸಿದ ಮೇಲೆ ತಾವು ಬ್ರಿಟಿಶರಿಗೆ ಸಂಪೂರ್ಣ ವಶವಾದಂ- ತಾಯಿತೆಂದು ಲೆಕ್ಕಹಾಕಿದರು. ಬೇಡರಂಥ ಉದ್ದಾಮರಂತೂ ಶಸ್ತ್ರಗಳನ್ನು ಒಪ್ಪಿಸಲು ನಿರಾಕರಿಸಿಬಿಟ್ಟರು.

ಶಸ್ತ್ರಾಸ್ತ್ರಗಳನ್ನು ಎಂದೂ ಕೊಡುವದಿಲ್ಲವೆಂದು ಹಲಗಲಿಯ ಬೇಡರು

ಕೊನೆಯವರೆಗೂ ಹೋರಾಡಿದರು. ಊರು ಸುಟ್ಟರೂ ಶರಣುಬರಲಿಲ್ಲ; ಆದ್ದರಿಂದ ಹಲಗಲಿ ಬಂಡಾಯವು "ಹಲಗಲಿ ಹರಾಕಿರಿ" ಎಂದು ಪ್ರಸಿದ್ಧಿಯನ್ನು ಪಡೆದಿದೆ. ವೈರಿಗೆ ಶರಣಾಗದೆ ನಡೆಯುವ ಸಾರ್ವತ್ರಿಕ ಆತ್ಮಹತ್ಯೆಗೆ ಜಪಾನದಲ್ಲಿ ಹರಾಕಿರಿ ಎನ್ನುತ್ತಾರೆ.

ಬಾಗಲಕೋಟೆ, ಹುಬ್ಬಳ್ಳಿ ಮೊದಲಾದ ಪ್ರಮುಖ ಊರುಗಳಲ್ಲಿ ಬ್ರಿಟಿಶರು ಜನರಿಂದ ಅಸಂಖ್ಯ ಖಡ್ಗಗಳನ್ನೂ ಬಂದೂಕುಗಳನ್ನೂ, ಭಲ್ಲೆಗಳನ್ನೂ ಮತ್ತು ಮದ್ದುಗುಂಡುಗಳನ್ನೂ ವಶಪಡಿಸಿಕೊಂಡರು. ಬಾದಾಮಿ ಹತ್ತಿರ ಸುರಪುರದ ವೆಂಕಟಪ್ಪನಾಯಕನೂ ಡಂಬಳ ಹತ್ತಿರ ಮುಂಡರಗಿ ಭೀಮರಾಯನೂ ಜಾತ್ರೆ-ಆಟಪಾಟಗಳ ನೆವದಿಂದ ಶಸ್ತ್ರಾಸ್ತ್ರಗಳನ್ನೂ ಜನರನ್ನೂ ಕೂಡಿಸುತ್ತಿರುವರೆಂದು ಸರಕಾರದವರು ತುಂಬಾ ಸಂಶಯಪಟ್ಟುಕೊಂಡಿದ್ದರು. ಆಗಸ್ಟ ತಿಂಗಳ ಕೊನೆಯದಿನ ಮುಸಲ್ಮಾನರು ಬಂಡಾಯ ಹೂಡುವ ಸಿದ್ಧತೆಯನ್ನು ನಡೆಸಿರುವರೆಂದು ಬಾಗಲಕೋಟೆಯ ಸೇನಾಧಿಕಾರಿಯು ವರದಿಮಾಡಿದ್ದನು. ನಾನಾಸಾಹೇಬನು ಸೊಲ್ಲಾಪುರಕ್ಕೆ ಬಂದಿರುವನೆಂದು ೧೮೫೭ರ ಕೊನೆಗೆ ವಿಜಾಪೂರ ಜಿಲ್ಲೆಯಲ್ಲಿ ಗಡಿಬಿಡಿಯೆದ್ದಿದ್ದರೂ ಸುರಪೂರ ವೆಂಕಟಪ್ಪನಾಯಕನ ಸೋಲಿನೊಡನೆ ೧೮೫೮ರ ಪ್ರಾರಂಭದಲ್ಲಿ ಎಲ್ಲವೂ ಶಾಂತವಾಗಿತ್ತು. (*Bijapur District Gazetteer.*)

*   *   *   *

ಹಲಗಲಿಯು ಮುಖ್ಯವಾಗಿ ಬೇಡರ ಊರು. ಮುಧೋಳಕ್ಕೆ ಈ ಊರು ಸಮೀಪವರ್ತಿಯಾಗಿದೆ. ೧೮೫೭ ನವಂಬರ ತಿಂಗಳಲ್ಲಿ ಮುಂಬಯಿ ಸರಕಾರವು ಹೊಸತಾಗಿ ಸ್ವೀಕರಿಸಿದ ಶಸ್ತ್ರಾಸ್ತ್ರ ಕ್ರಮೀಕರಣ ಕಾಯದೆಯ ಪ್ರಕಾರ ಈ ಊರ ಬೇಡರಿಗೂ ತಮ್ಮಲ್ಲಿಯ ಶಸ್ತ್ರಾಸ್ತ್ರಗಳನ್ನು ಸರಕಾರಕ್ಕೆ ಒಪ್ಪಿಸಬೇಕೆಂದು ಹುಕುಮು ಹೊರಟಿತು. ಆದರೆ ಅಲ್ಲಿಯ ಬೇಡರಿಗೆ ನಿಃಶಸ್ತ್ರರಾಗುವ ಮನಸ್ಸಿರಲಿಲ್ಲ. ಎಲ್ಲರೂ ಆತ್ಮರಕ್ಷಣೆಗಾಗಿ ಸ್ವಾವಲಂಬಿಗಳಾಗಿರಬೇಕಾಗಿದ್ದ ದಿವಸಗಳವು. ಅವರಲ್ಲಿ ವಿಶೇಷತಃ ಬೇಡರು ತಮ್ಮ ಶಸ್ತ್ರಾಸ್ತ್ರಗಳಿಂದ ಉಪಜೀವನ ಮಾಡಿಕೊಳ್ಳುತ್ತಿದ್ದು ಅವುಗಳ ಬಗ್ಗೆ ಪೂಜ್ಯಭಾವನೆಯುಳ್ಳವರಾಗಿದ್ದರು. ಇದರಿಂದ ಅವರು ಬ್ರಿಟಿಶ್ ಸರಕಾರದ ಆಜ್ಞೆಯನ್ನು ಯಶಸ್ವಿಯಾಗಿ ವಿರೋಧಿಸಬೇಕು; ಇಲ್ಲವೆ ಪ್ರಯತ್ನದಲ್ಲಿ ಮಡಿಯಬೇಕು ಎಂದು ಸಿದ್ಧರಾದರು. ಕೆಲವು ಬ್ರಿಟಿಶ್ ವಿರೋಧಿ ಪಕ್ಷಪಂಗಡಗಳೂ ಈ ಬೇಡರಿಗೆ ಉದ್ಬೋಧನೆ

ಮಾಡಿದ್ದಾಗಿ ತಿಳಿಯುತ್ತದೆ. ಅಕ್ಟೋಬರ ತಿಂಗಳಲ್ಲಿಯೇ ನೀಟಿಸ್ ಕರನು ಹೊಸ ಕಾಯದೆ ಪ್ರಕಾರ ಶಸ್ತ್ರಾಸ್ತ್ರಗಳನ್ನು ನೋಂದಾಯಿಸಲು ಹಲಗಲಿ ಬೇಡರಿಗೆ ಆಜ್ಞೆ ಮಾಡಿದರೂ ಅವರು ಮಣಿಯಲಿಲ್ಲ. ನೊವೆಂಬರ ೧೧ನೆಯ ತಾರೀಖಿಗೆ ಮುಧೋಳ ಕಾರಭಾರಿಯು ಓರ್ವ ಜಮಾದಾರನನ್ನು ಹಲಗಲಿಗೆ ಕಳಿಸಿ ಕಾಯದೆ ಪ್ರಕಾರ ವರ್ತಿಸಿದವರಿಗೆ ಲಾಯಸೆನ್ಸ ಸಹಿತವಾಗಿ ಅವರವರ ಶಸ್ತ್ರಗಳನ್ನು ಮರಳಿ ಕೊಡಲಾಗುವದೆಂದು ಆಶ್ವಾಸನ ಕೊಟ್ಟು ಹೇಳಿಕಳುಹಿಸಿದನು. ಆದರೂ ಒಬ್ಬ ಬೇಡನೂ ಶಸ್ತ್ರಾಸ್ತ್ರಗಳನ್ನು ತಂದು ಒಪ್ಪಿಸಲಿಲ್ಲ. ನೊವೆಂಬರ ೧೫ನೆಯ ತಾರೀಖಿಗೆ ಮುಧೋಳದ ಕಾರಭಾರಿಯು ರಾಮರಾವ ಭುಜಂಗ ಎಂಬ ತನ್ನ ಕಾರಕೂನನೊಬ್ಬನನ್ನು ಕಳಿಸಿಕೊಟ್ಟನು. ಬೇಡರು ಶಸ್ತ್ರಗಳನ್ನು ಕೊಡಲು ನಿರಾಕರಿಸಿ ಅವನನ್ನು ಬೆದರಿಸಿ ಕಳಿಸಿದರು. ಮುಂದೆ ನಾಲ್ಕೈದು ದಿನಗಳಾದ ಮೇಲೆ ಕಾರಭಾರಿಯು ಆ ಊರಿನ ನಾರಪ್ಪನಾಯ್ಕನೆಂಬುವವನನ್ನು ಕರೆಸಿ ಊರೊಳಗಿನ ಎಲ್ಲ ಬೇಡರೂ ಯುದ್ಧಕ್ಕೆ ಸಿದ್ಧರಾಗಿರುವರೆಂದು ಖಾತ್ರಿ ಮಾಡಿಕೊಂಡನು. ಆನಂತರ ನವಂಬರ ೨೨ಕ್ಕೆ ಮುಧೋಳ ಕಾರಭಾರಿಯು ರಾಜರ ಮಾಮ್ಲೇಕರಿ ಭೀಮರಾವ ಅನಂತ ಘೋರಪುರಿ ಮತ್ತು ನಾರೊ ರಾಮಚಂದ್ರ ಪೋತನೀಸ ಇವರನ್ನು ಇತರ ಈರ್ವರು ಮರಾಠಾ ಜನರೊಡನೆ ಹಲಗಲಿಗೆ ಕಳಿಸಿಕೊಟ್ಟನು. ಇವರು ಬೇಡರ ಹೃದಯಪರಿವರ್ತನೆಯನ್ನು ಮಾಡಲು ವಿಶ್ವ ಪ್ರಯತ್ನ ಮಾಡಿದರೂ ಅದು ಸಫಲವಾಗಲಿಲ್ಲ. ಭೀಮರಾಯನು ಅಂದು ರಾತ್ರಿ ೮ ಗಂಟೆಗೆ ಹಲಗಲಿಗೆ ತಲುಪಿದನು. ಆದರೆ ಅವನಿಗೆ ಊರೊಳಗಿನ ಬೇಡರು ಕುದುರೆಯಿಂದ ಕೆಳಗೆ ಸಹ ಇಳಿಯಗೊಡಲಿಲ್ಲ. ಗುಡಗ್ಯಾ ಜಮಾದಾರ ಮತ್ತು ಬಾಳಾ ಸುಂದರ ಎಂಬ ಈರ್ವರ ನೇತೃತ್ವದಲ್ಲಿ ಐದಾರು ಜನರು ಬಂದು ಅವನಿಗೆ ಕೂಡಲೆ ಹೊರಟು ಹೋಗಲು ಹೇಳಿದರು. ನೂರರಷ್ಟು ಜನರು ಖಡ್ಗ ಹಿಡಿದು ಬಡಿಗೆಗಳನ್ನು ತೋರಿಸಿ ಅವನನ್ನು ಊರಿನಿಂದ ಹೊರಗೆ ದೂಡಿದರು. ಆದರೆ ಅವನಿಗೆ ಏನೂ ಗಾಯ ಮಾಡಲಿಲ್ಲ. ೨೩-೧೨-೧೮೫೭ನೆಯ ದಿನ ಭೀಮರಾಯನು ಅಪ್ಪಾ ಆರಿಕೇರಿ ಎಂಬುವವನನ್ನು ಕಳಿಸಿ ಕೊಟ್ಟನು. ಆದರೆ ಗುಡಗ್ಯಾ ಜಮಾದಾರ ಹಾಗೂ ಇನ್ನಿತರ ೨೦೦ ಜನರು ಮೊದಲಿನಂತೆಯೇ ವಿರೋಧಿಸಿ ವರ್ತಿಸಿದರು. ನೊವೆಂಬರ ೨೪ ಹಾಗೂ ೨೫ನೆಯ ತಾರೀಖುಗಳ ದಿವಸ ಭೀಮರಾವ, ಪೋತನೀಸ ಹಾಗೂ ಕೆಲವರು ಹಲಗಲಿಯ ಹತ್ತಿರವೇ ಉಳಿದು ರಾಜಿ ಮಾಡಲು ಯತ್ನಮಾಡಿದರು. ಆದರೆ ಅದು ಯಾವದೂ ಸಾಧ್ಯವಾಗಲಿಲ್ಲ.

ಹೀಗಾಗಿ ಮುಧೋಳ ಕಾರಭಾರಿಗೆ ಅವರೆಲ್ಲರೂ ಆದ ಸಂಗತಿಯನ್ನು ತಿಳಿಸಿದರು. ಅಲ್ಲಿಯೇ ಹತ್ತಿರದಲ್ಲಿದ್ದ ಬಂಟನೂರ ಬೇಡರ ಮುಖ್ಯಸ್ಥನಿಗೆ ರಾಜಿ ಪ್ರಯತ್ನವನ್ನು ನಡೆಸಲು ಮುಧೋಳದ ಕಾರಭಾರಿಯು ವಿನಂತಿ ಮಾಡಿಕೊಂಡನು. (ಬಂಟನೂರ ಬೇಡರು ಶಾಂತರೀತಿಯಲ್ಲಿ ಶಸ್ತ್ರಾಸ್ತ್ರಗಳನ್ನು ನೋಂದಾಯಿಸಿದ್ದರು.) ಆದರೆ ಹಲಗಲಿಯ ಬೇಡರು ತಮ್ಮ ಊರಲ್ಲಿ ಕಾಲಿಟ್ಟರೆ ಕೊಲೆ ಮಾಡುತ್ತೇವೆಂದು ಬಂಟನೂರ ಬೇಡರಮುಖ್ಯಸ್ಥನಿಗೆ ಬೆದರಿಸಿಬಿಟ್ಟರು. ಶಸ್ತ್ರಾಸ್ತ್ರಗಳನ್ನು ಸರಕಾರಕ್ಕೆ ನೀನು ಹೇಗೆ ತಾನೇ ಕೊಟ್ಟುಬಿಟ್ಟಿ ಎಂದು ಅವನನ್ನೆ ಬೆದರಿಸಿದರು.

ಈ ಎಲ್ಲ ಸುದ್ದಿಯು ದಕ್ಷಿಣ ಮರಾಠಾ ಅಶ್ವದಳಗಳ ಸೇನಾಪತಿ ಮಾಲ್ಕಮ್ ಸಾಹೇಬನಿಗೆ ಮುಟ್ಟಲು ಅವನು ಮುಧೋಳ ಕಾರಭಾರಿಗೆ ನಿಜಸಂಗತಿಯನ್ನು ವರದಿಮಾಡೆಂದು ಕೇಳಿದನು. ಇಷ್ಟರಲ್ಲಿ ಬಡ್ನಿ ಹಾಗೂ ಮಂಟೂರಗಳ ಬೇಡರೂ ಹಲಗಲಿಯಲ್ಲಿ ಬಂದು ಸೇರಿದ್ದರು. ಆಳಗುಂಡಿಯಿಂದಲೂ ಜನರು ಬಂದು ಸೇರ್ಪಡೆಯಾಗಿದ್ದರು. ಮಾಲ್ಕಮ್ ಸಾಹೇಬನಿಗೆ ಎಲ್ಲವನ್ನೂ ತಿಳಿಸಲಾಯಿತು. ಆ ಸುಮಾರಿಗೆ ಹಲಗಲಿಯ ಬೇಡರು ಒಬ್ಬರನ್ನೂ ಊರೊಳಗೆ ಬಿಡದಾದರು. ಊರೊಳಗೆ ಏನು ನಡೆದಿದೆ ಎಂಬುದನ್ನು ತಿಳಿಯುವದೆ ಅಶಕ್ಯವಾಯಿತು.

೨೯-೧೧-೧೮೫೭ನೆಯ ದಿನ ಹಲಗಲಿಯನ್ನು ಮುತ್ತಲು ಮಾಲ್ಕಮ್ ಸಾಹೇಬನು ಲೆಫ್ಟಿನಂಟ್ ಕರ್ ಎಂಬ ಉಪ-ಅಧಿಕಾರಿಗೆ ಹುಕುಮು ಕೊಟ್ಟನು. ಲೆಫ್ಟನಂಟ್ ಕರ್ ಇವನು ಅಂದು ಸಾಯಂಕಾಲ ಐದು ಗಂಟೆಗೆ ದಕ್ಷಿಣ ಮರಾಠಾ ಅಶ್ವದಳಗಳ ವಿಜಾಪುರ ವಿಭಾಗದೊಡನೆ ಹಲಗಲಿಗೆ ಹೊರಟು ಪೂರ್ವ ದಿಸೆಯಿಂದ ಹಲಗಲಿಗೆ ಬಂದು ಮುಟ್ಟಿದನು. ರಾತ್ರಿಯಾಗಿದ್ದರೂ ಸರಕಾರಿ ಸೈನ್ಯವು ದಾಳಿಯನ್ನು ಪ್ರಾರಂಭಿಸಿಯೇ ಬಿಟ್ಟಿತು. ಮೊದಲು ಸಂರಕ್ಷಕ ದಳಗಳು ಗುಂಡು ಹಾರಿಸಿ ಬೇಡರಿಗೆ ಶರಣಾಗತರಾಗಲು ತಿಳಿಸಿದರು. ಅದಕ್ಕೆ ಪ್ರತಿಯಾಗಿ ಬೇಡರು ಹೆಚ್ಚು ಗುಂಡು ಹಾರಿಸಿದರು. ಲೆಫ್ಟನಂಟ ಕರನು ಹೀಗಾದರೆ ಉಪಯೋಗವಾಗುವದಿಲ್ಲವೆಂದು ಕೆಲವು ಸೈನಿಕರೊಡನೆ ಊರ ನಡುವಿನ ಒಂದು ಚೌಕಿಗೆ ತಲುಪಲು ನುಗ್ಗಿದನು. ಆದರೆ ಅವನಿಗೆ ಅದು ಸಾಧಿಸಲಿಲ್ಲ. ಹೆಚ್ಚೆ ಹೆಚ್ಚಿಗೆ ಅವರು ಗುಂಡಿನ ಸುರಿಮಳೆಗಳನ್ನು ಎದುರಿಸಬೇಕಾಯಿತು. ಗಾಢಾಂಧಕಾರದಲ್ಲಿ ಇಡಿಯ ರಾತ್ರಿ ತಿಕ್ಕಾಟಗಳು ಅಯುಬಸ್ಸಿಯಾಗಿ ನಡೆದೇ ನಡೆದವು. ಬೆಳಗಾಗುವ ವರೆಗೆ ಹಲಗಲಿಯ ಯೋಧರು ಸರಕಾರಿ ಸೇನೆಗಳಿಗೆ ಊರೊಳಗೆ ಕಾಲಿಡಗೊಟ್ಟಿರಲಿಲ್ಲ.

೩೦-೧೧-೧೮೫೭ನೆಯ ದಿನ ಪ್ರಾತಃಕಾಲ ಲೆಫ್ಟನಂಟ ಕರನ ಸೈನ್ಯಕ್ಕೆ ಮತ್ತೆ ೧೬೦ರಪೊಂದು ಸೈನ್ಯಪಡೆಯು ಬಂದು ಕೂಡಿತು. ಸರಕಾರಿ ಸೈನ್ಯವು ರಭಸದಿಂದ ದಾಳಿ ಮಾಡಲು ಊರಹೊರಗಿನ ಗುಡ್ಡದಲ್ಲಿ ಅಡಗಿದ ಬೇಡರು ಊರೊಳಗೆ ಬಂದು ಸಿಕ್ಕಿಬಿದ್ದರು. ಇಷ್ಟರಲ್ಲಿ ಕರ್ ಸಾಹೇಬನ ಮೇಲಧಿಕಾರಿಯಾದ ಮಾಲ್ಕಮ್ ಸಾಹೇಬನೂ ಹೆವಲಾಕ್ ಎಂಬ ಮ್ಯಾಜಿಸ್ಟ್ರೇಟರೂ ಅಲ್ಲಿಗೆ ಬರಲು ಮಾಲ್ಕಮ್ ಸಾಹೇಬನ ಆಧಿಪತ್ಯದಲ್ಲಿ ಹೋರಾಟವು ನಡೆಯಿತು. ಮಧ್ಯಾಹ್ನವಾಗುವವರೋಳಗೆ ೨೮ ನಂಬರಿನ ಹಿಂದೀ ಕಾಲ್ದಳವೂ ಅಲ್ಲಿಗೆ ಬಂದಿತು. ಹಳ್ಳಿಯೇನೊ ಮಾಲ್ಕಮ್ ಸಾಹೇಬನ ವಶಕ್ಕೆ ಬಂದಿತು. ಆದರೂ ಬೇಡರು ಅಡಗಿದ ಜಾಗೆಯಿಂದ ಹೊರಗೆ ಬಾರದೆ ಮಾಲ್ಕಮ್ ಸಾಹೇಬನ ಸಂರಕ್ಷಕರ ಮೇಲೆ ಗುಂಡುಹಾರಿಸಿದರು. ಇದರಿಂದ ರೊಚ್ಚಿಗೆದ್ದ ಲೆಫ್ಟನಂಟ ಕರನು ಇಡಿಯ ಊರಿಗೇ ಬೆಂಕಿ ಹಚ್ಚಿದನು! ಹೋರಾಟ ಮತ್ತು ಅಗ್ನಿಪ್ರಳಯದಲ್ಲಿ ನೂರು ಜನರಾದರೂ ಸತ್ತಿರಬೇಕೆಂದು ಮಾಲ್ಕಮ್ ಸಾಹೇಬನೇ ಹೇಳಿದ್ದಾನೆ. ೨೩ ನಿರಪರಾಧಿಗಳು ಹತ್ತಿಕಟ್ಟಿಗೆಗಳಲ್ಲಿ ಅವಿತುಕೊಂಡಾಗ ಅಲ್ಲಿಯೇ ಬೆಂದು ಹೋದರು! ಬೂದಿಯಲ್ಲಿ ೩೦ ದೇಹಗಳು ದೊರೆತವಂತೆ! ಹಲಗಲಿಯಲ್ಲಿ ಹೋರಾಟದ ಸಮಯಕ್ಕೆ ೫೦೦ ಸಶಸ್ತ್ರ ಬಂಡುಗಾರರಿರಬೇಕೆಂದು ಅಂದಾಜು ಮಾಡಲಾಗಿದೆ. ಬಂಡಾಯದ ೧೯ ನಾಯಕರನ್ನು ೧೧-೧-೧೮೫೮ನೆಯ ದಿನ ಮುಧೋಳದ ಸಂತೆಯಲ್ಲಿ ಬಹಿರಂಗವಾಗಿ ಗಲ್ಲಿಗೇರಿಸಲಾಯಿತು. ಉಳಿದ ಆರು ಜನರನ್ನು ಹಲಗಲಿಯಲ್ಲಿಯೇ ೧೮-೧-೧೮೫೮ಕ್ಕೆ ಬಹಿರಂಗವಾಗಿ ಗಲ್ಲಿಗೆ ಹಾಕಲಾಯಿತು. ಮಾಲ್ಕಮ್ ಸಾಹೇಬನು ೭೦ ಕೈದಿಗಳೊಡನೆ ಕಲಾದಗಿಗೆ ಮರಳಿದನು. ಬಂಡುಗಾರರ ಪ್ರಮುಖನಾದ ನಿಂಬಾಳಕರನೆಂಬ ಮರಾಠನು ಹೋರಾಟದಲ್ಲಿ ಮಡಿದನು. ಬೇಡರು ಶೌರ್ಯದಿಂದ ಹೋರಾಡಿದರೆಂದು ಮಾಲ್ಕಮ್ ಉದ್ಗಾರ ತೆಗೆದಿದ್ದಾನೆ.

ಲೆಫ್ಟನಂಟ ಕರನ ಬದಲು ಮಾಲ್ಕಮ್ನನೆ ಹಲಗಲಿಗೆ ಮೊದಲು ಮುಟ್ಟಿದ್ದರೆ ಈ ಅನಾಹುತವು ತಪ್ಪುತ್ತಿತ್ತು. ಕರ್‌ನ ಉದ್ದಾಮತನದಿಂದ ಒಮ್ಮೆ ದುರ್ಘಟನೆಯಾದ ಮೇಲೆ ಅದರ ಸಮರ್ಥನೆಯನ್ನು ಮಾಡುವದೆ ಅನಿವಾರ್ಯವಾಯಿತು. ಮಾಲ್ಕಮ್‌ನು ಹೊತ್ತಿಗೆ ಬಾರದಿದ್ದರೆ ಲೆಫ್ಟನಂಟ ಕರನೊಬ್ಬನಿಗೇ ಬೇಡರು ಮಣಿಯುತ್ತಿರಲಿಲ್ಲ. ಮಾಲ್ಕಮ್‌ನ ಸೈನ್ಯದ ಕೈಯೊಳಗಿಂದ ಪಾರಾದವರು ಬೇಡರ ದೇಶವಾದ ಸುರಪುರಕ್ಕೆ ಓಡಿಹೋಗಿ ಸೇರಿಕೊಂಡರು.

# ಹದಿನಾಲ್ಕನೆಯ ಅಧ್ಯಾಯ

## ಕಿತ್ತೂರ ಚೆನ್ನಮ್ಮ

### ೧೮೨೪–೩೦

**೧೮೫೭**ರ ಮುಂಚಿತವಾಗಿಯೇ ಬ್ರಿಟಿಶರ ದಬ್ಬಾಳಿಕೆಯ ವಿರುದ್ಧ ಖಡ್ಗ ಹಿರಿದು ಹೋರಾಡಿದವರಲ್ಲಿ ಕಿತ್ತೂರ ಚೆನ್ನಮ್ಮರಾಣಿಯ ಸಾಹಸವು ಅಜರಾಮರವಾಗಿದೆ. ಆಗಿನ ಕಾಲದ ಸ್ತ್ರೀಯರಲ್ಲಿ ಸಹ ಅನ್ಯಾಯವನ್ನು ವಿರೋಧಿಸುವ ಎಂಥ ಅದ್ಭುತಶಕ್ತಿ ಹುದುಗಿರುತ್ತಿತ್ತೆಂಬುದಕ್ಕೆ ಕಿತ್ತೂರ ಚೆನ್ನಮ್ಮನ ಉದಾಹರಣೆಯು ಒಂದು ಉಜ್ವಲ ನಿದರ್ಶನವಾಗಬಲ್ಲದು.

೧೮೧೮ರ ಈಚೆಗೆ ಉತ್ತರಕರ್ನಾಟಕವು ಕಂಪನಿಗೆ ವಶವಾಯಿತು. ಆದರೂ ಪೇಶವೆ ಬಾಜಿರಾಯನ ಸಣ್ಣಪುಟ್ಟ ಸೈನ್ಯ ಅಲ್ಲಲ್ಲಿ ಬ್ರಿಟಿಶರನ್ನು ವಿರೋಧಿಸುತ್ತಲಿತ್ತು. ೧೮೧೮ರಲ್ಲಿ ಕಂಪನಿ ಸೈನ್ಯವು ಬೆಳಗಾವಿಯನ್ನು ಆಕ್ರಮಿಸಿತು. ಆದರೆ ಬೆಳಗಾವಿ ಜಿಲ್ಲೆಯಲ್ಲಿ ನಿಪ್ಪಾಣಿ ದೇಸಾಯಿ, ವಿಜಾಪೂರದಲ್ಲಿ ದಿವಾಕರ ದೀಕ್ಷಿತ ಮೊದಲಾದವರು ಮೊದಲಿನ ರಾಜರಿಗೇ ನಿಷ್ಠರಾಗಿ ಉಳಿದರೆ ಹೊರತು ಕೊನೆವರೆಗೂ ಇಂಗ್ಲೀಷರಿಗೆ ಬಗ್ಗಿ ನಡೆಯಲಿಲ್ಲ.

ವಿಜಾಪೂರಜಿಲ್ಲೆಯ ಸಿಂದಗಿಯನ್ನು ೧೮೨೪ರಲ್ಲಿ ಚಿದಂಬರ ದೀಕ್ಷಿತ ಮತ್ತು ಅವನ ಮಗ ದಿವಾಕರ ದೀಕ್ಷಿತರು, ರಾವಜಿ ರಾಸ್ತೆ, ಬಾಳಪ್ಪ ದೇಶಪಾಂಡೆ ಮೊದಲಾದವರೊಡನೆ ಆಕ್ರಮಿಸಿ ಕಂಪನಿ ಸರಕಾರದ ಎಲ್ಲ ಅಧಿಕಾರಿಗಳನ್ನೂ ಓಡಿಸಿಬಿಟ್ಟರು. ಹಿಪ್ಪರಗಿಯಲ್ಲೂ ಬಂಡಾಯವಾಗಿತ್ತು. ಸುರಪುರದಿಂದ ಎರಡು ಸಾವಿರ ಬೇಡರ ಸೈನ್ಯವು ಬಂದೊಡನೆ ಆಲಮೇಲ ದೇಶಮುಖಿಯನ್ನೆ ಗೆದ್ದುಕೊಳ್ಳಬೇಕೆಂದು ಕ್ರಾಂತಿಕಾರರ ವಿಚಾರವಿತ್ತು. ಕಂಪನಿಸರಕಾರದ ಆಡಳಿತದ ಅಂತ್ಯವಾಗಿದೆ ಎಂದು ಘೋಷಣೆ ಹೊರಡಿಸಿ ಕ್ರಾಂತಿಕಾರರು ಪ್ರತಿಸರಕಾರವನ್ನು ಸ್ಥಾಪಿಸಿ ಆಡಳಿತವನ್ನು ನಡೆಸಿದರು. ತಾತ್ಪೂರ್ತಿಕ ಕಲೆಕ್ಟರನಾದ ಸ್ಟೀವನ್ಸನ್ನನು ಧಾರವಾಡದಿಂದ ಬಂದು ಪ್ರಮುಖರಾದ ಆರು ಕ್ರಾಂತಿಕಾರರನ್ನು ಹಿಡಿದುಕೊಟ್ಟವರಿಗೆ ೩೪೦೦ ರೂ. ಗಳ ಇನಾಮು ಕೊಡುವದಾಗಿ ಪ್ರಕಟಿಸಿದನು. ಕೂಡಲೆ ಸೈನ್ಯವೂ ಬಂದು ಸಿಂದಗಿಯನ್ನೂ ಪುನಃ ಆಕ್ರಮಿಸಿತು; ಕ್ರಾಂತಿಕಾರರು ಶಿಕ್ಷೆಗೆ

ಗುರಿಯಾದರು. [*Bijapur District Gazetteer*, Chapter VIII.]

ಮುಂದೆ ೧೮೫೮ರಲ್ಲಿ ನರಸಿಂಹ ದತ್ತಾತ್ರೇಯ ಎಂಬ ಪಿರ್ಚ ಕುರುಡ ಬ್ರಾಹ್ಮಣನು ೧೨೫ ಅರಬ ಸೈನಿಕರೊಂದಿಗೆ ದಾಳಿಮಾಡಿ ಬಾದಾಮಿಯ ಕಿಲ್ಲೆಯನ್ನು ಆಕ್ರಮಿಸಿ ಕುಳಿತನು. ವಿರೋಧಿಸಲು ಬಂದ ಹನ್ನೆರಡು ಪೇದರ ಗಾರ್ಡರು ಕೋಟೆಯ ಬಾಗಿಲಲ್ಲಿ ಹತರಾದರು. ನರಸಿಂಹನು ಕೂಡಲೆ ನರಸಿಂಹ ಶಾಹೂ ಛತ್ರಪತಿಯ ಧ್ವಜವನ್ನು ಕೋಟೆಯ ಮೇಲೆ ಹಾರಿಸಿದನು. ಸರಕಾರಿ ಖಜಾನೆಯನ್ನು ವಶಪಡಿಸಿಕೊಂಡು ಪೇಟೆಯನ್ನು ಲೂಟಿಮಾಡಿ ಎಲ್ಲ ಹಣವನ್ನೂ ನಿಜಾಮನ ರಾಜ್ಯಕ್ಕೆ ಸ್ಥಳಾಂತರಿಸಿಬಿಟ್ಟನು. ನರಸಿಂಹ ಛತ್ರಪತಿಯು ಒಕ್ಕಲಿಗರಿಗೆ ಭೂಮಿಯನ್ನು ಹಂಚಿ ಬಾದಾಮಿಯ ಸುತ್ತಲೂ ರಾಜ್ಯ ಸ್ಥಾಪಿಸಿದನು. ನರಸಿಂಹನ ರಾಜ್ಯವು ಮಾತ್ರ ಒಂದೇ ವಾರ ಬಾಳಿತು! (*Bijapur District Gazetteer*, Chapter VII)

ನರಸಿಂಹ ದತ್ತಾತ್ರೇಯನು ಸಾತಾರೆಯ ಪ್ರತಾಪಸಿಂಹನ ಪ್ರತಿನಿಧಿಯೆಂದು ಹೇಳಿಕೊಳ್ಳುತ್ತಿದ್ದನು. ಅವನ ಹತ್ತಿರ ಪ್ರತಾಪಸಿಂಹನ ಮುದ್ರೆಯೊಂದಿತ್ತು. ಹಿಂದುಸ್ತಾನದಲ್ಲಿ ಬೇರೆ ಬೇರೆ ಸ್ಥಳಗಳಿಗೆ ಹೋಗಿ ಜನರಲ್ಲಿ ಬ್ರಿಟಿಶ್ ವಿರೋಧಿ ಚಟುವಟಿಕೆಗಳನ್ನು ನಡೆಸಲು ಪ್ರತಾಪಸಿಂಹನು ತನ್ನ ಶಿಷ್ಯರನ್ನು ಕಳಿಸುತ್ತಿದ್ದನೆಂದು ವದಂತಿಯಿತ್ತು. ನರಸಿಂಹನು ಪುಣೆ, ಸಾತಾರಾ, ನಾಸಿಕ, ಅಹಮದನಗರ, ರಾಯಚೂರಗಳಿಗೆ ಭೆಟ್ಟಿಕೊಟ್ಟ ಮೇಲೆ ಮುಂಡರಗಿಗೆ ಬಂದು ಊರ ಹೊರಗಿನ ಹನುಮನ ದೇವಸ್ಥಾನದಲ್ಲಿ ವಾಸಮಾಡಿ ದೇಸಾಯರನ್ನು ಭೆಟ್ಟಿಯಾಗಿರಬೇಕೆಂದು ಊಹಿಸಲಾಗಿದೆ. ಈ ಚಳವಳಿಗೆ ಸುರಪುರದ ವೆಂಕಟಪ್ಪನಾಯಕನ ತಮ್ಮನಾದ ಪೆದ್ದನಾಯಕನ ಬೆಂಬಲವಿತ್ತು.

ಬಾದಾಮಿಯ ಕೋಟೆಯು ವಶವಾದಮೇಲೆ ಖಜಾನೆಯಲ್ಲಿದ್ದ ಬನಶಂಕರಿ ದೇವಸ್ಥಾನದ ಆಭರಣಗಳನ್ನು ನರಸಿಂಹ ಛತ್ರಪತಿಯು ಸಂರಕ್ಷಿಸಿದನು; ಕೋಟೆಯು ಸಾತಾರಾ ಛತ್ರಪತಿಯದೆಂದು ಸಾರಿದನು. ಅದೇ ಕಾಲಕ್ಕೆ ಬದಾ-ಮಿಯ ಗುಪ್ತಚಾರರಲ್ಲಿ ಕೆಲವರು ಕಲಾದಗಿಯಲ್ಲಿ ಕಂಪನಿಸೈನಿಕರಿಗೆ ದುರುಪದೇಶವನ್ನು ಮಾಡುತ್ತಿರುವಾಗ ಹಿಡಿಯಲ್ಪಟ್ಟು ಶಿಕ್ಷೆಗೆ ಗುರಿಯಾದರು.

ಬಾದಾಮಿಯ ಕೋಟೆಯೊಡನೆ ನರಸಿಂಹನೂ ಇಂಗ್ಲೀಷರ ಕೈಗೆ ಸಿಕ್ಕನು. ಧಾರವಾಡದಲ್ಲಿ ಅವನ ವಿಚಾರಣೆಯಾಗಿ ಮೊದಲು ಅವನಿಗೆ ಮರಣದಂಡನೆಯಾಯಿತು. ಮುಂದೆ ಅವನ ಕುರುಡತನವನ್ನು ಅನುಲಕ್ಷಿಸಿ ಆ ದಂಡ ಜೀವಾವಧಿಗೆ

ಇಳಿಸಲಾಯಿತು. (*Bombay Committee Notes*) ಹೈದರಾಬಾದ ಸಮಿತಿಯವರು ತಮ್ಮ ಪ್ರಕಟನೆಯ ಎರಡನೆಯ ಸಂಪುಟದಲ್ಲಿ ಇಂಥದೆ ಒಂದು ಒಳ ಸಂಚು ಬೀದರ ಜಿಲ್ಲೆಯ ಛಾಲಿಕಿಯಲ್ಲಿ ೧೮೫೮ರಲ್ಲಿ ನಡೆದದ್ದನ್ನು ಉದಾಹರಿಸಿ-ರುವರು. ರಾಮರಾವ ಉರ್ಫ ಜಂಗಬಹಾದ್ದೂರ ಎಂಬುವವನು ತಾನು ಸಾತಾರಾ ಛತ್ರಪತಿ ವಂಶಜನೆಂದು ಸಾರಿ ಕೆಲವು ಅನುಯಾಯಿಗಳನ್ನು ಕೂಡಿಸಿಕೊಂಡು ಅಷ್ಟಿ ಎಂಬ ಸ್ಥಳವನ್ನು ಆಕ್ರಮಿಸಿ ತನ್ನ ಭಗವಾ ಝೆಂಡಾ ಊರಿದ್ದನು. ಅವನ ಕಡೆಗೂ ಸಾತಾರಾ ಛತ್ರಪತಿಯ ಮೊಹರು ಇತ್ತು. ತಾತ್ಯಾ ಟೋಪಿ ಇವನನ್ನು ಉತ್ತರದಿಂದ ಕಳಿಸಿರುವನೆಂದು ಜನರು ಆಡುತ್ತಿದ್ದರು. ಇವನ ಹತ್ತಿರ ೫೦೦೦ ರೂ. ಗಳ ಹುಂಡಿಗಳಿದ್ದು ಅದರಿಂದ ಅವನು ಇಂಗ್ಲೀಷರ ವಿರುದ್ಧ ಹೋರಾಡಲು ಜನರನ್ನು ಕೂಡ್ರಿಸಿ ಕೋಟೆ ಕಟ್ಟಿಸುವ ಸಿದ್ಧತೆ ನಡೆಸಿದ್ದನು.

ರಾಮರಾವನನ್ನು ಹಿಡಿದು ವಿಚಾರಣೆಗೆ ಗುರಿಪಡಿಸಿದಾಗ ಸಾತಾರೆಯ ಛತ್ರಪತಿ ಮನೆತನದ ಸಂಬಂಧ ಇವನಿಗೆ ಇದ್ದದ್ದು ನಿಜ ಎಂದು ನ್ಯಾಯಾಧೀಶರು ತಮ್ಮ ತೀರ್ಪಿನಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಒಳಸಂಚು ಬೆಳೆಯದೆ ಉಳಿದು ಹೋಯಿತು. (*History of Freedom Movement in Hyderabad State* Vol. II PP. 228-245.)

## ಕಿತ್ತೂರ ಬಂಡಾಯ

ಕಿತ್ತೂರ ಬಂಡಾಯವು ೧೮೨೪ರಲ್ಲಿ ನಡೆಯಿತು. ಮುಂದೆ ೧೮೩೩ರ ವರೆಗೆ ಅದರ ಪ್ರತಿಕ್ರಿಯೆಗಳು ಬೆಳಗಾಂವಿ ಜಿಲ್ಲೆಯಲ್ಲಿ ನಡೆದೇ ಇದ್ದವು. ೧೮೫೭ರ ವರೆಗೆ ಕಿತ್ತೂರ ದೇಸಾಯರ ವಾರಸದಾರರು ಕಂಪನಿಸರಕಾರದ ವಿರುದ್ಧ ಒಳ ಸಂಚು ನಡೆಸಿಯೇ ಇದ್ದರು.

ಕಿತ್ತೂರ ಚೆನ್ನಮ್ಮನಿಗೆ ಕರ್ನಾಟಕದ ಝಾಂಸಿ ರಾಣಿ ಎಂಬ ಅಮರ ಕೀರ್ತಿಯು ಪ್ರಾಪ್ತವಾದದ್ದು ತುಂಬಾ ಯಥೋಚಿತವಾಗಿದೆ. ಲಕ್ಷ್ಮೀಬಾಯಿಗಿಂತಲೂ ಚೆನ್ನಮ್ಮ ಮೂವತ್ತು ಮೂರು ವರ್ಷ ಮೊದಲು ಕಂಪನಿ ಸರಕಾರದ ಮೇಲೆ ಶಸ್ತ್ರವನ್ನೆತ್ತಿದಳು. ಝಾಂಸಿಯವರಂತೆ ಕಿತ್ತೂರ ದೇಸಾಯಿಯವರೂ ಇಂಗ್ಲೀಷರಿಗೆ ಮೊದಲಿನಿಂದ ವಿರೋಧವಾಡುವವರಲ್ಲ. ಬೆಳಗಾಂವಿ ಕಿಲ್ಲೆಯನ್ನು ೧೮೧೮ರಲ್ಲಿ ಪೇಶವೆಯಿಂದ ವಶಪಡಿಸಿಕೊಳ್ಳುವಾಗ ಕಿತ್ತೂರ ದೇಸಾಯರು ಇಂಗ್ಲೀಷರಿಗೆ ತುಂಬಾ ನೆರವಾಗಿದ್ದರು. ಆದರೆ ೧೮೨೪ರಲ್ಲಿ ಶಿವಲಿಂಗ ರುದ್ರ

ದೇಸಾಯಿಯು ಔರಸಪುತ್ರನಿಲ್ಲದೆ ಮರಣಹೊಂದಲು ಇಂಗ್ಲೀಷರು ಇಂಥ ಸ್ನೇಹಿತನ ರಾಜ್ಯವನ್ನು ಸಹ ನುಂಗಿನೀರುಕುಡಿಯಲು ಸಿದ್ಧರಾದರು. ಈ ಅನ್ಯಾಯ ತಾಳಲಾರದೆ ಚೆನ್ನಮ್ಮ ಇಂಗ್ಲೀಷರೊಡನೆ ಯುದ್ಧ ಮಾಡಿದ್ದಾಳೆ!

ಕಿತ್ತೂರಸಂಸ್ಥಾನದ ಇತಿಹಾಸವು ಸಾಕಷ್ಟು ಪ್ರಾಚೀನವಾಗಿದೆ. ದೇಸಾಯರು ತಮ್ಮ ಶೂರತನದಿಂದಲೆ ದೇಸಗತಿಯನ್ನು ೧೫೮೫ರಲ್ಲಿ ಸಂಪಾದನೆ ಮಾಡಿದ್ದರು. ಹಿರೇಮಲ್ಲಶೆಟ್ಟಿ ಮತ್ತು ಚಿಕ್ಕಮಲ್ಲಶೆಟ್ಟಿ ಎಂಬ ಈರ್ವರು ಮೂಲ ಪುರುಷರು ಕಲಬುರ್ಗಿಯಿಂದ ವಿಜಾಪೂರ ದಂಡಿನೊಡನೆ ಇಲ್ಲಿ ಬಂದರು. ಅವರ ಶೌರ್ಯಸಾಹಸಗಳಿಗೆ ಮೆಚ್ಚಿ ಬಾದಶಹನು ಹಿರೇಮಲ್ಲಶೆಟ್ಟಿಗೆ ಹುಬ್ಬಳ್ಳಿಯ ಸರದೇಶಮುಖಿಯನ್ನು ದಯಪಾಲಿಸಿ "ಸಮಶೇರ ಜಂಗಬಹದ್ದೂರ" ಎಂದು ಬಿರುದು ಕೊಟ್ಟನು.

ಮುಂದೆ ೧೮೨೪ರ ವರೆಗೆ ಹನ್ನೆರಡು ಅರಸರು ಕಿತ್ತೂರ ದೇಸಗತಿಯನ್ನು ಆಳಿದರು. ಕೆಲವು ಕಾಲ ಮೊಗಲರೂ, ಮುಂದೆ ಪೇಶ್ವೆಯರೂ ಆನಂತರ ಸವಣೂರ ನವಾಬನೂ ಹೀಗೆ ಅನೇಕರ ಸಾರ್ವಭೌಮತ್ವಕ್ಕೆ ಕಿತ್ತೂರು ಒಳಪಟ್ಟಿತ್ತು; ಕೆಲವು ಕಾಲ ಸ್ವತಂತ್ರವೂ ಇತ್ತು. ೧೮೧೮ರಲ್ಲಿ ಪೇಶವೆಯರ ವಿರುದ್ಧ ಕಡೆಯ ದೇಸಾಯಿಯು ಇಂಗ್ಲೀಷರಿಗೆ ಸೈನ್ಯಸಾಮಗ್ರಿಗಳಿಂದ ಸಾಕಷ್ಟು ಸಹಾಯ ಮಾಡಿದನು. ಧೋಂಡಜಿ ವಾಘ, ಬಾಪು ಗೋಖಲೆ, ಜನರಲ್ ವೆಲ್ಸ್ಲಿ ಮೊದಲಾದ ಶೂರರು ಮೇಲಿಂದ ಮೇಲೆ ಕಿತ್ತೂರಿನ ಮೇಲೆ ಹಾಯ್ದು ಹೋಗಿ ದೇಸಾಯರಿಂದ ಒಂದಿಲ್ಲೊಂದು ಪ್ರಯೋಜನ ಪಡೆದರು. ಕಿತ್ತೂರ ದೇಸಾಯರು ಸಾಹಸಿಗಳಾಗಿರದಿದ್ದರೆ ಇಂಥ ಧಕ್ಕೆಯಿಂದ ಉಳಿದುಕೊಳ್ಳುವದೇ ಶಕ್ಯವಿರಲಿಲ್ಲ. ಕೊನೆಯ ದೇಸಾಯಿಯ ತಂದೆಯಾದ ಮಲ್ಲಸರ್ಜ ರಾಜೇಂದ್ರನಿಗೆ ಪೇಶ್ವೆಯರು "ಪ್ರತಾಪರಾವ" ಎಂಬ ಬಿರುದು ಕೊಟ್ಟಿದ್ದರು. ಇದರ ಸ್ಮರಣಾರ್ಥ ನಂದಗಡದ ಬಳಿಯಲ್ಲಿ ಅವನು ಪ್ರತಾಪಗಡ ಎಂಬ ಕಿಲ್ಲೆಯನ್ನು ಕಟ್ಟಿಸಿದ್ದಾನೆ. ಮಲ್ಲಸರ್ಜನ ದೇಸಾಯಿಯ ಕಾಲಕ್ಕೆ ಸಂಸ್ಥಾನದ ಉತ್ಪನ್ನ ಐದು ಲಕ್ಷ ರೂಪಾಯಿಗಳಿದ್ದು ಪೇಶ್ವೆಯರಿಗೆ ಎಪ್ಪತ್ತೈದರಿಂದ ತೊಂಭತ್ತು ಸಾವಿರ ರೂಪಾಯಿಗಳವರೆಗೆ ಕಪ್ಪ ಹೋಗುತ್ತಿತ್ತು. ಮುಂದೆ ಕೆಲವು ದಿನ ಇದನ್ನು ೨ನೆಯ ಬಾಜಿರಾಯನು ೧||| ಲಕ್ಷಕ್ಕೆ ಏರಿಸಿದನು.

ಮಲ್ಲಸರ್ಜನ ದೇಸಾಯಿಯು ೧೭೮೨ರಿಂದ ೧೮೧೬ರ ವರೆಗೆ ರಾಜ್ಯಕಾರಭಾರವನ್ನು ಮಾಡಿದನು. ಅವನ ಕಾಲಕ್ಕೆ ಕಿತ್ತೂರ ಸಂಸ್ಥಾನದಲ್ಲಿ ಈಗಿನ

ಸಂಪಗಾವಿ ಖಾನಾಪೂರ ತಾಲೂಕುಗಳು ಪೂರಾ ಮತ್ತು ಬೆಳಗಾವಿ, ಧಾರವಾಡ, ಹಳಿಯಾಳ ಮತ್ತು ಸವದತ್ತಿ ತಾಲೂಕಿನ ಕೆಲವು ಭಾಗಗಳು ಸಮಾವಿಷ್ಟವಾಗಿದ್ದವು. ರಾಜ್ಯದಲ್ಲಿ ನಂದಗಡ, ಖಾನಾಪೂರ, ಬೈಲಹೊಂಗಲ, ಕಿತ್ತೂರು, ಸಂಪಗಾವಿ, ದೇಸನೂರ ಮುಂತಾದ ವ್ಯಾಪಾರಿ ಕೇಂದ್ರಗಳಿದ್ದವು. ನಂದಗಡವು ಕೊಂಕಣದಿಂದ ಹೊರಗೆಹೋಗುವ ಸರಕುಗಳಿಗೆ ಮುಖ್ಯ ಹೆಬ್ಬಾಗಿಲಾಗಿತ್ತು. ಸಂಪಗಾವಿಯಲ್ಲಂತೂ ದೇಸಾಯಿಮನೆತನದ ಮೊದಲಿನ ನಾಲ್ವರು ವಾಸಿಸುತ್ತಿದ್ದರಿಂದ ಸಂಪಗಾವಿಗೂ ಮಹತ್ವವಿತ್ತು. ಬೈಲಹೊ[illegible]ಲ್ಲ [illegible] ನೇಯಿಗೆ ಚೆನ್ನಾಗಿತ್ತು. ಒಕ್ಕಲತನ ಮತ್ತು ಕೈಗಾರಿಕೆಗಳು ರಾಜ್ಯದಲ್ಲಿ ಊರ್ಜಿತಸ್ಥಿತಿಯಲ್ಲಿದ್ದವು.

ಮಲ್ಲಸರ್ಜನನು ೧೮೧೬ರಲ್ಲಿ ಮರಣಹೊಂದಲು ಅವನ ಮಗನಾದ ಶಿವಲಿಂಗ ರುದ್ರ ಸರ್ಜ ದೇಸಾಯಿಯು ರಾಜ್ಯವಾಳಹತ್ತಿದನು. ಪೇಶ್ವೆಯರು ೧೮೧೮ರಲ್ಲಿ ಇಂಗ್ಲೀಷರಿಗೆ ರಾಜ್ಯ ಬಿಟ್ಟುಕೊಡಲು ಶಿವಲಿಂಗ ರುದ್ರ ಸರ್ಜನು ಇಂಗ್ಲೀಷರ ಕೂಡ ಒಂದು ಹೊಸ ಕರಾರನ್ನು ಮಾಡಿಕೊಂಡು ಅವರೊಡನೆ ತುಂಬಾ ಸ್ನೇಹದಿಂದಿದ್ದನು. ಇಂಗ್ಲೀಷರ ಸೇನಾಪತಿಯಾದ ಸರ್ ಥಾಮಸ್ ಮನ್ರೋ ಸಾಹೇಬನ ಕೂಡ ಶಿವಲಿಂಗ ಸರ್ಜನು ಕೆಳಗಿನಂತೆ ಒಪ್ಪಂದ ಮಾಡಿಕೊಂಡನು : (೧) ದೇಸಾಯಿಯು ವಿಜಾಪೂರ ಬಾದಶಹರಿಂದ ಮತ್ತು ಪೇಶ್ವೆಯರಿಂದ ಸಂಪಾದನೆಮಾಡಿದ ಎಲ್ಲ ಭೂಮಿಯನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಳ್ಳತಕ್ಕದ್ದು ; ದೇಸಗತಿಯ ಮಾನಸನ್ಮಾನಗಳು ಮೊದಲಿನಂತೆ ನಡೆಯತಕ್ಕದ್ದು ; ದೇಸಾಯರು ಜಮೀನಾರಿ ಸಂಸ್ಥಾನಿಕರೆಂದು ಇಂಗ್ಲೀಷರು ಒಪ್ಪತಕ್ಕದ್ದು ಮತ್ತು ೫೫೦೦ ರೂಪಾಯಿಗಳ ವಸ್ತ್ರಗಳ ಕಾಣಿಕೆಯನ್ನು ಇಂಗ್ಲೀಷರು ಪ್ರತಿವರ್ಷ ದೇಸಾಯರಿಗೆ ಕೊಡತಕ್ಕದ್ದು. (೨) ಕಿತ್ತೂರ ದೇಸಾಯರು ೪೭೫ ರಾವುತರನ್ನು, ೧೦೦೦ ಕಾಲಾಳುಗಳನ್ನು ಕಂಪನಿಗೆ ಇಡುತ್ತಿದ್ದು ಅವರ ಖರ್ಚಿನ ಸಲುವಾಗಿ ೨೦೦೦೦ ರೂ. ಉತ್ಪನ್ನದ ಖಾನಾಪೂರ ತಾಲೂಕು ದೇಸಾಯರಕಡೆಗೆ ಇತ್ತು. ಈ ಸೈನ್ಯದ ಇನ್ನು ಮುಂದೆ ಅಗತ್ಯವಿಲ್ಲ ; ಆದ್ದರಿಂದ ಖಾನಾಪೂರ ಕಿತ್ತೂರಿಗೆ [illegible]. ( ಕಿತ್ತೂರ [illegible]. ಪುಟ ೧೧೪-[illegible] )

ಹೀಗೆ ಇಂಗ್ಲೀಷರು ಕಿತ್ತೂರಿನಲ್ಲಿ ಬಂದೋಬಸ್ತ ಮಾಡಿದರು. ಶಿವಲಿಂಗ ರುದ್ರ ಸರ್ಜನ ಸ್ವಾತಂತ್ರ್ಯ ಹೋಯಿತು: ಆತನ ಒಂದು ತಾಲೂಕನ್ನು ಇಂಗ್ಲೀಷರು ಬಿಡಿಸಿಕೊಂಡರು. [illegible] ೧೮೨೪ರಲ್ಲಿ ಸಂಸ್ಥಾನವನ್ನು ಜಪ್ತಮಾಡಲು

ಇಂಗ್ಲೀಷರಿಗೆ ತುಂಬಾ ಅನುಕೂಲವಾಯಿತು.

ಶಿವಲಿಂಗ ರುದ್ರ ಸರ್ಜನು ೧೮೨೪ನೆಯ ಇಸ್ವಿ ಅಕ್ಟೋಬರ ೧೧ನೆಯ ತಾರೀಖಿಗೆ ಲಿಂಗೈಕ್ಯನಾದನು. ಕಿತ್ತೂರ ಚೆನ್ನಮ್ಮ ಅವನ ಮಲತಾಯಿ. ಚೆನ್ನಮ್ಮನು ಕಾಗತಿ ದೇಸಾಯರ ಮಗಳು. ಇವಳು ಸುಂದರಿಯೂ ದಿಟ್ಟೆಯೂ ಆದ್ದರಿಂದ ಮಲ್ಲಸರ್ಜನು ತನ್ನ ಇಳಿವಯಸ್ಸಿನಲ್ಲಿ ಚೆನ್ನಮ್ಮನಿಗೆ ಮನಸೋತು ಲಗ್ನವಾಗಿದ್ದನು. ೧೮೨೪ರಲ್ಲಿ ಮೃತಪಟ್ಟ ಶಿವಲಿಂಗ ರುದ್ರಸರ್ಜನು ಹಿರಿಯ ಹೆಂಡತಿ ರುದ್ರಮ್ಮನ ಮಗನಾಗಿದ್ದನು. ರುದ್ರಮ್ಮನು ಬೇಗನೆ ತೀರಿಹೋಗಿದ್ದಳು. ವೀರಮ್ಮ ಎಂಬವಳು ಶಿವಲಿಂಗಸರ್ಜನ ಹೆಂಡತಿ. ವೀರಮ್ಮನಿಗೆ ಮಕ್ಕಳಾಗಿರಲಿಲ್ಲ; ಅವಳು ಇನ್ನೂ ಚಿಕ್ಕವಯಸ್ಸಿನವಳು.

ಹೀಗಾಗಿ ೧೮೨೪ರಲ್ಲಿ ಶಿವಲಿಂಗ ರುದ್ರಸರ್ಜನ ಮರಣ ಕಾಲಕ್ಕೆ ಮಲ ಅತ್ತೆ ಚನ್ನಮ್ಮ ಮತ್ತು ಸೊಸೆ ವೀರಮ್ಮ ಹೀಗೆ ಇಬ್ಬರೆ ಉಳಿದರು. ಸಪ್ಟಂಬರ ೧೧ನೆಯ ತಾರೀಖಿಗೆ ಕಿತ್ತೂರಿನ ಓರ್ವ ಓಲೆಕಾರನು ಧಾರವಾಡದ ಕಲೆಕ್ಟರನಾದ ಥ್ಯಾಕರೆ ಸಾಹೇಬನ ಕಡೆಗೆ ದೇಸಾಯಿಯ ಒಂದು ಪತ್ರವನ್ನು ತೆಗೆದುಕೊಂಡು ಬಂದನು. ದೇಸಾಯಿಯು ಮರಣಶಯ್ಯೆಯ ಮೇಲಿರುವನೆಂದೂ ಅವನು ಒಬ್ಬ ಹುಡುಗನನ್ನು ದತ್ತಕ ತೆಗೆದುಕೊಂಡಿರುವನೆಂದೂ ಥ್ಯಾಕರೆ ಸಾಹೇಬನಿಗೆ ಆ ಪತ್ರದಿಂದ ಗೊತ್ತಾಯಿತು. ದತ್ತಕವನ್ನು ಮಾನ್ಯಮಾಡಿದರೆ ಕೈಗೆ ಬಂದ ಸಂಸ್ಥಾನ ಬಾಯಿಗೆ ಬರಲಿಕ್ಕಿಲ್ಲ ಎಂದು ಥ್ಯಾಕರೆ ಲೆಕ್ಕ ಹಾಕಿದನು. ಧಾರವಾಡ ಸಿವ್ಹಿಲ್ ಸರ್ಜನನು ಮುಂದೆ ಹೋದರೂ ಅವನು ಕಿತ್ತೂರನ್ನು ತಲಪುವದರೊಳಗೆ ಶಿವಲಿಂಗಸರ್ಜನ ಪ್ರಾಣಪಕ್ಷಿಯು ಹಾರಿ ಹೋಗಿತ್ತು. ಸಿವ್ಹಿಲ್ ಸರ್ಜನನು ಹೋದಾಗ ಶಿವಲಿಂಗ ಪ್ರಭು ಜೀವಂತ ಇದ್ದನೆಂದೂ, ಆಸ್ಥಾನ ವೈದ್ಯರನ್ನು ಹಿಂದೆ ಸರಿಸಿ ಸಿವ್ಹಿಲ್ ಸರ್ಜನನು ತನ್ನ ಔಷಧೋಪಚಾರವನ್ನು ಸುರುವುಮಾಡಿದ ಮೇಲೆ ಶಿವಲಿಂಗ ಪ್ರಭು ಮರಣ ಹೊಂದಿದನೆಂದೂ ಒಂದು ಅಭಿಪ್ರಾಯವಿದೆ. ( ಕಿತ್ತೂರ ಬಂಡಾಯ. ೬೭. ) ಆದರೆ ದತ್ತಕದ ಕಥೆಗೂ ಇದಕ್ಕೂ ಹೊಂದುವದಿಲ್ಲ.

ಶಿವಲಿಂಗಸರ್ಜನು ಮರಣ ಹೊಂದಿದ ಮೇಲೆ ಅವನ ಕೈಯಲ್ಲಿ ಲೇಖನಿಯಿಟ್ಟು ದತ್ತಕವಾಗಿರಬೇಕೆಂದು ಸಿವ್ಹಿಲ್ ಸರ್ಜನನು ರಿಪೋರ್ಟ ಮಾಡಿಯೇ ಬಿಟ್ಟನು. ಥ್ಯಾಕರೆ ಸಾಹೇಬನು ಅದೇ ದಾರಿ ಕಾಯುತ್ತಿದ್ದನು. ದತ್ತಕಕ್ಕೆ ಕಂಪನಿ ಸರಕಾರದ ಅಪ್ಪಣೆಯೇ ಇರಲಿಲ್ಲವೆಂದು ಅವನು ನೆವ

ಹೊಡಿದನು. ಪ್ರಕರಣವು ಮೇಲೆ ಹೋಯಿತು. ನೇರದವರು ಥ್ಯಾಕರೆ ಸಾಹೇಬನಿಗೆ ಮನೆತನದ ವಿಷಯದಲ್ಲಿ ಚಾಡಿ ಹೇಳಿದರೆಂದೂ ವರದಿಯಿದೆ. ಇದರ ಲಾಭವನ್ನು ಇಂಗ್ಲೀಷರು ಪಡೆಯದೆ ಬಿಡಲಿಲ್ಲ. ಥ್ಯಾಕರೆ ತನ್ನ ವರದಿಯಲ್ಲಿ ಶಿವಲಿಂಗರುದ್ರಸರ್ಜನು ದತ್ತಕವನ್ನು ಮಾಡಿಕೊಂಡೇ ಇಲ್ಲವೆಂದು ಅಭಿಪ್ರಾಯಪಟ್ಟನು. ದತ್ತಕ ಹೋದ ಹುಡುಗನು ಮಾಸ್ತಮರಡಿ ಬಾಳಪ್ಪಗೌಡನೆಂಬವನ ಮಗನು ; ಇವನ ಹೆಸರು ಶಿವಲಿಂಗ ಎಂದಿದ್ದು ಅವನು ಕಿತ್ತೂರ ದೇಸಾಯರ ಅಣ್ಣತಮ್ಮಂದಿರ ಮನೆತನದವನೆ ಆಗಿದ್ದನು.

ದತ್ತಕವನ್ನು ಕಂಪನಿ ಸರಕಾರವು ಕೂಡಲೆ ಮಾನ್ಯ ಮಾಡಲಿಲ್ಲ. ಹುಡುಗನು ದೇಸಾಯಿಯ ವಂಶದವನೇ ಇದ್ದದ್ದು ಸಿದ್ಧವಾದರೆ ಮಾತ್ರ ದತ್ತಕವು ಮಾನ್ಯವಾದೀತೆಂದು ಸರಕಾರದಿಂದ ಬರೆದು ಬಂದಿತು. ದೇಸಗತಿಯ ವ್ಯವಸ್ಥಾಪಕತ್ವವನ್ನು ಕೂಡಲೆ ವಹಿಸಿಕೊಂಡು ದತ್ತಕದ ಪ್ರಕರಣವನ್ನು ಪೂರ್ಣ ವಿಚಾರಿಸಿ ವರದಿ ಮಾಡಬೇಕೆಂದೂ ಸರಕಾರದಿಂದ ಥ್ಯಾಕರೇನಿಗೆ ಆದೇಶವು ಬಂದಿತು.

ಥ್ಯಾಕರೆ ಹೀಗೆ ವರದಿ ಮಾಡಿದನು: "ಶಿವಲಿಂಗ ರುದ್ರ ಸರ್ಜನು ಸಪ್ಟಂಬರ ಹನ್ನೊಂದು ಅಥವಾ ಹನ್ನೆರಡನೇ ತಾರೀಖಿಗೆ ಸತ್ತಿರಬೇಕು. ಅವನು ಜೀವಂತನಿದ್ದಾಗ ಯಾರನ್ನೂ ದತ್ತಕ ತೆಗೆದುಕೊಂಡಿಲ್ಲ. ದೇಸಾಯರ ಕಾರಭಾರಿಯಾಗಿದ್ದ ಕೋನೂರ ಮಲ್ಲಪ್ಪ ಮತ್ತು ಅವನ ಸಂಗಡಿಗರು ಮಾಸ್ತಮರಡಿ ಬಾಳಪ್ಪಗೌಡರ ಮಗನನ್ನು ದೇಸಾಯರ ಮರಣದ ನಂತರ ದತ್ತಕಮಾಡಿ ಮೃತಪಟ್ಟ ದೇಸಾಯಿಯ ಕೈಯೊಳಗೆ ಲೇಖನಿಯಿಟ್ಟು ಒಂದು ಹಳೆಯ ಪತ್ರಕ್ಕೆ ಹೊಟ್ಟೆ ಸಹಿ ಮಾಡಿದ್ದಾರೆ. ಈ ಪತ್ರಕ್ಕೆ ೧೦ ಜುಲೈ ಎಂಬ ತಾರೀಖು ಇದೆ. ಪತ್ರವು ಮಾತ್ರ ಶಿವಲಿಂಗ ರುದ್ರ ಸರ್ಜನ ಹಸ್ತಾಕ್ಷರದಲ್ಲಿ ಇದೆ. ದತ್ತಕ ಆದ ಹುಡುಗನು ಕಿತ್ತೂರ ದೇಸಾಯಿ ಮನೆತನಕ್ಕೆ ಏನೂ ಸಂಬಂಧ ಪಟ್ಟವನಲ್ಲ."

ದೇಸಾಯಿಯ ಖಜಾನೆಯಿಂದ ಕೋನೂರ ಮಲ್ಲಪ್ಪನು ೧|| ಲಕ್ಷ ರೂಪಾಯಿಗಳನ್ನೂ ಮೂರುಪೆಟ್ಟಿಗೆಗಳ ತುಂಬ ರತ್ನಾಭರಣಗಳನ್ನೂ ಧಾರವಾಡಕ್ಕೆ ಸಾಗಿಸಿರುವನೆಂದು ಥ್ಯಾಕರೇನಿಗೆ ತಿಳಿಯಿತು. ಕೂಡಲೆ ಅವನು ಕಿತ್ತೂರಿಗೆ ಬಂದು ಖಜಾನೆಯಲ್ಲಿಯ ಸಾಮಾನಿನ ಲೆಕ್ಕಮಾಡಿ ತನ್ನ ಬೀಗಮುದ್ರೆಗಳನ್ನು ಹಾಕಿಬಿಟ್ಟನು.

ಸರಕಾರದ ಈ ಪ್ರವೃತ್ತಿಯಿಂದ ಕಿತ್ತೂರಸಂಸ್ಥಾನವು ಇನ್ನು ಬಹಳ ದಿನ ಉಳಿಯಲಾರದೆಂದು ಚೆನ್ನಮ್ಮ ಪ್ರಭೃತಿಗಳಿಗೆ ಪೂರಾ ಮನವರಿಕೆಯಾಯಿತು. ಮೊದಲನೆಯ ಸಲ ಅವಳು ಅಂತಃಪುರದಿಂದ ಹೊರಬಿದ್ದು ತಾನೇ ರಾಜ್ಯ ಕಾರಭಾರ ನಡೆಸಿದಳು. ಚನ್ನಮ್ಮನು ಕುದುರೆ ಹತ್ತುವದು, ಶಸ್ತ್ರಾಸ್ತ್ರಗಳನ್ನು ಉಪಯೋಗಿಸುವದು ಮೊದಲಾದವುಗಳಲ್ಲಿ ಪೂರಾ ಪಾರಂಗತಳಾಗಿದ್ದಳು. ಆವಳ ಕೀರ್ತಿಶೇಷ ಪತಿಯಿಂದ ಅನೇಕ ಶೂರ ವಿಚಾರಗಳನ್ನು ಚೆನ್ನಮ್ಮ ಕಲಿತು ಕೊಂಡಿದ್ದಳು. ಪ್ರಜೆಗಳ ಕಲ್ಯಾಣ ಕಾರ್ಯದಲ್ಲಿ ಯಾವ ಜಾತಿಭೇದಾದಿಗಳನ್ನೂ ಅವಳು ಗಣನೆಗೆ ತಂದುಕೊಳ್ಳುತ್ತಿರಲಿಲ್ಲ. ಚೆನ್ನಮ್ಮನ ಬಗ್ಗೆ ಇಂದಿಗೂ ಕಿತ್ತೂರ ಸುತ್ತಲೂ ಪ್ರಚಾರದಲ್ಲಿರುವ ಅಸಂಖ್ಯ ಲಾವಣಿ ಹಾಡುಗಳು ಅವಳ ಉಜ್ವಲ ವ್ಯಕ್ತಿತ್ವಕ್ಕೆ ಶಾಶ್ವತ ನಿದರ್ಶನವಾಗಿ ನಿಂತಿವೆ.

ಕೋನೂರ ಮಲ್ಲಪ್ಪನ ರೀತಿನೀತಿಗಳು ಚೆನ್ನಮ್ಮನಿಗೆ ಮೊದಲಿನಿಂದಲೂ ಸೇರುತ್ತಿರಲಿಲ್ಲ. ಮಹಾನವಮಿ ಮತ್ತು ವಿಜಯದಶಮಿ ಸೀಮೋಲ್ಲಂಘನದ ಪೂಜೆಯ ನಿಮಿತ್ತ ಚೆನ್ನಮ್ಮನು ಗುಪ್ತಮಾರ್ಗದಿಂದ ಥ್ಯಾಕರೆ ಮೋಹರು ಮಾಡಿಟ್ಟ ಖೋಲಿಗೆ ಹೋಗಿ ರಾಜ್ಯಲಕ್ಷ್ಮಿಯನ್ನೂ ಶಸ್ತ್ರಾಸ್ತ್ರಗಳನ್ನೂ ಹೊರಗೆ ತಂದಿದ್ದಳೆಂದು ಕೊನೂರ ಮಲ್ಲಪ್ಪನೆ ಥಾಕರೆಗೆ ತಿಳಿಸಿದನು. ಈ ಮೋಸಗಾರಿಕೆಗೆ ಸಿಟ್ಟಾಗಿ ಚೆನ್ನಮ್ಮ ಮಲ್ಲಪ್ಪನನ್ನು ಆನೆ ಕಾಲಿಗೆ ಕಟ್ಟಿ ಎಳೆಸಿದಳು. ಮುಂದೆ ದಿಪಾವಳಿಯ ಪ್ರತಿಪದೆಯ ದಿನವೂ ಶಸ್ತ್ರಾಸ್ತ್ರಗಳ ಖೋಲಿಗೆ ಚೆನ್ನಮ್ಮ ಹೋಗುವಳೆಂಬ ಮಾಹಿತಿ ಥ್ಯಾಕರೆ ಸಾಹೇಬನಿಗೆಇತ್ತು. ಅಂತೆಯೆ ಅವತ್ತು ಆವನು ಕಿತ್ತೂರನ್ನು ಮುತ್ತಿದನು. —( "ಕಿತ್ತೂರಚೆನ್ನಮ್ಮ" ವ್ಹಿ. ಜಿ. ಪಾಟೀಲ, ಪುಟ ೧೫–೧೭ ) ಅರಮನೆಯಲ್ಲಿಯ ಒಡಕುಗಳೆನ್ನೆಲ್ಲ ಸರಿಪಡಿಸಿಕೊಂಡು ಒಟ್ಟಾಗಿ ಬ್ರಿಟಿಶರನ್ನು ಹೇಗೆ ಎದುರಿಸಬೇಕೆಂದುಚೆನ್ನಮ್ಮನು ಸಿದ್ಧತೆಯನ್ನು ನಡೆಸಿದಳು. ಚೆನ್ನಮ್ಮನು ದೇಸಾಯರ ಪತಿಯಿಂದ ಸರಕಾರಕ್ಕೆ ಅರ್ಜಿಮಾಡಿ ಕೊಳ್ಳಲು ರಾಚಪ್ಪ ಮತ್ತು ಲಿಂಗಭಟ್ಟ ಎಂಬ ವಕೀಲರನ್ನು ಪುಣೆಗೆ ಕಳಿಸಿ ಕೊಟ್ಟಳು.[1] ಸಂಸ್ಥಾನವನ್ನು ಇಂಗ್ಲೀಷರಿಗೆ ಎಂದೂ ಬಿಡಬಾರದೆಂದು ಚೆನ್ನಮ್ಮ ಹಟತೊಟ್ಟು ಯುದ್ಧಮಾಡುವ ಪ್ರಸಂಗಕ್ಕೂ ಸಿದ್ಧಳಾದಳು.

---

1. ಚೆನ್ನಮ್ಮನ ಈ ಅರ್ಜಿಯು ಮಂಜೂರ ಆಗಿತ್ತೆಂದೂ ಅಷ್ಟರಲ್ಲಿ ಕಿತ್ತೂರಲ್ಲಿ ಅಂಧಾಯವಾಗಿ ಥ್ಯಾಕರೇನ ಕೊಲೆಯಾಗಿತ್ತೆಂದೂ ಆದ್ದರಿಂದ ಎಲ್ಲವೂ ಅಲ್ಲಿಗೇ ನಿಂತು ಹೋಯಿತೆಂದೂ ಒಂದು ಆಖ್ಯಾಯಿಕೆಯಿದೆ.

ಸಂಸ್ಥಾನದ ಓಲಿಕಾರರನ್ನೆಲ್ಲ ಕಿಲ್ಲೆಗೆ ಕರೆಯಿಸಿಕೊಳ್ಳಲಾಯಿತು. ಸೇನಾ-ಪತಿಗಳು ಸಿದ್ಧರಾಗಿ ನಿಂತರು. ಕೊಲ್ಹಾಪೂರ ರಾಜನಿಗೆ ಸಹಾಯ ಸಲ್ಲಿಸಲು ಚೆನ್ನಮ್ಮನು ಒಂದು ಪತ್ರವನ್ನು ಬರೆದು ಕಳಿಸಿದರೆ ಅವನು ಪತ್ರ ವನ್ನು ಇಂಗ್ಲೀಷರಿಗೆ ಒಪ್ಪಿಸಿದನು ! ( Bombay Committee Notes. )

ಸರಕಾರದ ನಿರ್ಣಯವು ಬರುವ ಪೂರ್ವದಲ್ಲಿಯೇ ಥ್ಯಾಕರೆ ಅಕ್ಟೋಬರ ೨೧ನೆಯ ತಾರೀಖಿಗೆ ಕಿತ್ತೂರ ಕೋಟೆಗೆ ಮುತ್ತಿಗೆ ಹಾಕಿದನು. ಇದರಿಂದ ಚೆನ್ನಮ್ಮನಿಗೆ ಮುಖಭಂಗವಾದಂತಾಗಿ ಅವಳು ಬಹಳ ರೇಗಿದಳು. ದೇಸಾಯರ ಖಜಾನೆಯು ಖಾಲಿಯಾಗುವದೆಂಬ ಚಿಂತೆಯು ಥ್ಯಾಕರೆ ಸಾಹೇಬನಿಗೆ ಇತ್ತೀ ಚೆಗೆ ವಿಶೇಷವಾಗಿತ್ತು. ಕಿಲ್ಲೆಯ ಎಲ್ಲ ಹೆಬ್ಬಾಗಿಲುಗಳನ್ನೂ ಥ್ಯಾಕರೇನ ಸೈನ್ಯ ಕಾಯತೊಡಗಿತು. ; ಖಜಾನೆಯ ಬಗ್ಗೆ ಅವನು ಜಾಮೀನು ಕೇಳಹತ್ತಿ ದನು ! ತಮ್ಮ ಹಣದ ಬಗ್ಗೆ ಇವನಿಗೆ ಯಾಕೆ ಜಾಮೀನು ಎಂದು ಚೆನ್ನಮ್ಮ ನಿಗೆ ಸಹಜ ಸಿಟ್ಟುಬಂದಿರಬೇಕು. ಕಿತ್ತೂರ ಚೆನ್ನಮ್ಮನ ಆಜ್ಞೆಯಿಲ್ಲದೆ ತಾವು ಏನೂ ಮಾಡುವದು ಸಾಧ್ಯವಿಲ್ಲವೆಂದು ಕೋಟೆಯೊಳಗಿನ ಅಧಿಕಾರಿಗಳು ಸಾಹೇಬನಿಗೆ ಖಂಡ ತುಂಡ ಉತ್ತರಕೊಟ್ಟರು. ಚೆನ್ನಮ್ಮನೂ ಥ್ಯಾಕರೆನನ್ನು ಕಾಣಲುನಿರಾಕರಿಸಿದಳು. ಕೋಟೆಯೊಳಗೆ ಹೋಗಲಿಕ್ಕೆ ಥ್ಯಾಕರೇನ ಕೂಡ ಬರಲು ಸ್ಥಾನಿಕ ಗೃಹಸ್ಥರು ಯಾರೂ ಒಪ್ಪಲಿಲ್ಲ.

ಥ್ಯಾಕರೆ ಸಾಹೇಬನೂ ಸಂತಪ್ತನಾದನು ; ಕೋಟೆಯ ಹೆಬ್ಬಾಗಿಲಿಗೆ ಎದುರಾಗಿ ಎರಡು ತೋಫುಗಳನ್ನು ತಂದು ನಿಲ್ಲಿಸಲು ಕ್ಯಾಪ್ಟನ್ ಬ್ಲ್ಯಾಕ್ ನಿಗೆ ಹುಕುಮು ಮಾಡಿದನು. ೨೩ನೆಯ ತಾರೀಖಿಗೆ ಕೋಟೆಯ ಎಲ್ಲ ಬಾಗಿಲು ಗಳೂ ಒಳಗಿನಿಂದ ಬಂದಾಗಿದ್ದವು. ಥ್ಯಾಕರೆ ಕೆರಳಿದನು ; ಇಪ್ಪತ್ತು ಮಿನಿಟ ನಲ್ಲಿ ಬಾಗಿಲು ತಗೆಯದಿದ್ದರೆ ತೋಫಿನಿಂದ ಬಾಗಿಲನ್ನು ಹಾರಿಸಿಬಿಡುವದಾಗಿ ಅವನು ಒಳಗಿನವರಿಗೆ ಹೇಳಿಕಳುಹಿಸಿದನು. ಇಪ್ಪತ್ತು ಮಿನಿಟುಗಳೂ ಕಳೆ ದವು. ತೋಫು ಹಾರಿಸುವ ಸಿದ್ಧತೆಯು ನಡೆಯಿತು. ಅಷ್ಟರಲ್ಲಿ ಕೋಟೆಯ ಬಾಗಿಲು ತೆರೆದು ಚೆನ್ನಮ್ಮನ ಸೈನ್ಯ ಹೊರನುಗ್ಗಿತು.[1] ತೋಫುಗಳು ಚೆನ್ನ ಮ್ಮನ ಸೈನ್ಯದ ವಶವಾದವು. ಇಂಗ್ಲೀಷ ಸೇನಾಪತಿಗಳೆಲ್ಲ ಸೈನಿಕರ ಖಡ್ಗಕ್ಕೆ ಬಲಿಯಾದರು. ಇಷ್ಟರಲ್ಲಿ ಥ್ಯಾಕರೆ ಶಾಂತರಾಗಿರೆಂದು ಹೇಳುತ್ತ ಕಿಲ್ಲೆಯ

1· ಕೋಟೆಯ ಬಾಗಿಲನ್ನು ತೋಫಿನಿಂದ ಹಾರಿಸಿ ಬ್ರಿಟಿಶ ಸೈನ್ಯವು ಒಳನುಗ್ಗಿದ ಮೇಲೆ ಯುದ್ಧವು ಪ್ರಾರಂಭವಾಯಿತೆಂದೂ ಒಂದು ಉಲ್ಲೇಖವಿದೆ. –ಕಿತ್ತೂರ ಬಂಡಾಯ. ೩೮.

ಹೆಬ್ಬಾಗಿಲಿಗೆ ಬರಲು ಕಿತ್ತೂರ ಸೇನಾಪತಿಯಾದ ಅಮಟೂರ ಸೈದನವರ ಬಾಳಪ್ಪ ಎಂಬುವವನು ಅವನನ್ನು ಗುಂಡಿಕ್ಕಿಕೊಂದನು.

ಬ್ರಿಟಿಶ್ ಸೈನ್ಯ ದಿಕ್ಕೆಟ್ಟು ಓಡಿತು. ಎಷ್ಟೊ ಜನರು ರಣರಂಗದಲ್ಲಿ ಮಡಿದರು. ಸ್ಟೀವನ್ಸನ (ಅಸಿಸ್ಟಂಟ ಪೊಲಿಟಿಕಲ್ ಏಜಂಟ) ಮತ್ತು ಈಲಿಯಟ್ ಎಂಬ ಈರ್ವರು ಇಂಗ್ಲೀಷರು ಮತ್ತು ಹನ್ನೆರಡು ಆಂಗ್ಲರ ಚಿಕ್ಕಮಕ್ಕಳು ಚೆನ್ನಮ್ಮನ ಸೆರೆಯಾಳಾದರು. ಚಿಕ್ಕಮಕ್ಕಳನ್ನು ಪ್ರೇಮದಿಂದ ನಡೆಸಿಕೊಂಡು ಚೆನ್ನಮ್ಮ ತಿರುಗಿ ಕಳುಹಿಸಿಕೊಟ್ಟುಬಿಟ್ಟಳು. ಥ್ಯಾಕರೇನ ಉದ್ಧಟತನದಿಂದಲೆ ಈ ದುರ್ಘಟನೆಯು ನಡೆಯಿತೆಂಬುದು ಸ್ವಯಂಸಿದ್ಧವಿದೆ. ಬೆಳಗಾವಿಯಲ್ಲಿ ಆಗ ಚಾಪ್ಲಿನ್ ಎಂಬ ಕಮಿಶನರನಿದ್ದನು. ಬೆಳಗಾವಿಯಲ್ಲಿದ್ದ ದೊಡ್ಡ ಫೀಲ್ಡ ಫೋರ್ಸ ಎಂಬ ಒಂದೇ ಪಡೆಯಿಂದ ಕಿತ್ತೂರನ್ನು ಜಯಿಸುವದು ಶಕ್ಯವೇ ಇರಲಿಲ್ಲ. ಕಿತ್ತೂರ ಕಿಲ್ಲೆಯಲ್ಲಿ ಆಗ ೫೦೦೦ ಸಶಸ್ತ್ರ ಜನರಿದ್ದರು. ತಾನೂ ಥ್ಯಾಕರೆನಂತೆ ಉದ್ದಾಮನಾದರೆ ಚೆನ್ನಮ್ಮನು ಆಂಗ್ಲ ಸೆರೆಯಾಳುಗಳಿಗೆ ಅಪಾಯ ಮಾಡಬಹುದೆಂದು ಚ್ಯಾಪ್ಲಿನ್ ಹೆದರಿದ. ಕಿತ್ತೂರ ಸಂಸ್ಥಾನದ ಸ್ವಾತಂತ್ರ್ಯದ ಬಗ್ಗೆ ಅಭಿವಚನವು ದೊರೆಯದ ವಿನಾ ಸೆರೆಯಾಳುಗಳನ್ನು ಬಿಡಬಾರದೆಂದೇ ಚೆನ್ನಮ್ಮ ಹಟಹಿಡಿದಿದ್ದಳು. ಆದ್ದರಿಂದ ಚ್ಯಾಪ್ಲಿನ್ ಸಾಹೇಬನು ಮೊದಲು ಒಂದು ಘೋಷಣೆಯನ್ನು ಹೊರಡಿಸಿ ನಿರ್ದಿಷ್ಟ ಕಾಲಾವಧಿಯೊಳಗೆ ಯಾರೇ ಶರಣುಬಂದರೂ ಅವರನ್ನು ಸಂಪೂರ್ಣ ಕ್ಷಮೆ ಮಾಡಲಾಗುವದೆಂದು ಸಾರಿದನು.

ನೊವೆಂಬರ ೨೦ನೆಯ ತಾರೀಖಿನವರೆಗೆ ಚೆನ್ನಮ್ಮ ಸರಕಾರದ ಘೋಷಣೆಗೆ ಬಾಗಲಿಲ್ಲ. ಆದರೆ ಮುಂದೆ ರಣರಂಗದಲ್ಲಿ ಇಂಗ್ಲೀಷರಿಗೆ ಎದುರಾಗುವದರಲ್ಲಿ ಹುರುಳಿಲ್ಲವೆಂದು ಅವಳು ಪೂರಾ ಮನಗಂಡಳು. ಘೋಷಣೆಯಲ್ಲಿ ಇರುವ ಕಿಂತಲೂ ಕೆಲವು ಹೆಚ್ಚಿನ ಸವಲತ್ತುಗಳನ್ನು ಬಂಡುಗಾರರು ಕೇಳಿದರು. ಕಿತ್ತೂರಿನ ಭವಿಷ್ಯತ್ತಿನ ಬಗ್ಗೆ ಚಾಪ್ಲಿನ್ ಸಾಹೇಬನು ಯಾವದೇ ಅಭಿವಚನವನ್ನು ಕೊಡಲು ನಿರಾಕರಿಸಿದನು. ಆದರೆ ಡಿಸೆಂಬರ ೨ನೆಯ ತಾರೀಖಿಗೆ ಚೆನ್ನಮ್ಮನು ಎಲ್ಲ ಇಂಗ್ಲೀಷ ಸೆರೆಯಾಳುಗಳನ್ನೂ ಬಿಡುಗಡೆ ಮಾಡಿ ಸುರಕ್ಷಿತವಾಗಿ ಅವರನ್ನು ಬ್ರಿಟಿಶ ಶಿಬಿರಕ್ಕೆ ಮುಟ್ಟಿಸಿದಳು. ಆದರೂ ಚಾಪ್ಲಿನ್ನನ ಸೈನ್ಯ ಕಿಲ್ಲೆಯ ಮೇಲೆ ದಾಳೀಮಾಡಿ ಯುದ್ಧವನ್ನು ಪ್ರಾರಂಭಿಸಿಯೇ ಬಿಟ್ಟಿತು. ಚಾಪ್ಲಿನ್ನನು ಮುಂಬೈ, ಸೊಲ್ಲಾಪೂರ ಮತ್ತು ರಾಯಚೂರಗಳಿಂದ ಸೈನ್ಯ

ತರಿಸಿದ್ದನು. ಯುದ್ಧದಲ್ಲಿ ಕಿತ್ತೂರ ಸೈನ್ಯವು ಅತ್ಯಂತ ಶೌರ್ಯದಿಂದ ಹೋರಾಡಿ ಸೋತಿತು. ಸೈನ್ಯವು ಹಿಮ್ಮೆಟ್ಟುತ್ತಿರುವದನ್ನು ನೋಡಿ ಚೆನ್ನಮ್ಮ ತಾನಾಗಿಯೇ ಯುದ್ಧವನ್ನು ನಿಲ್ಲಿಸಿದಳು.[2] ಕೋಟೆಯು ಬ್ರಿಟಿಶರ ಕೈವಶವಾಯಿತು. ಸರ್ ಥಾಮಸ್ ಮನ್ರೋನ ಅಣ್ಣನ ಮಗ ಮನ್ರೋ ಎಂಬ ಸೊಲ್ಲಾಪುರದ ಸಬ್ ಕಲೆಕ್ಟರನು ಯುದ್ಧದಲ್ಲಿ ಹತನಾದನು.

ಚೆನ್ನಮ್ಮ ಮತ್ತು ವೀರಪ್ಪ ಪಾರಾಗಿ ಹೋಗಲು ಮಾಡಿದ ಪ್ರಯತ್ನಗಳು ನಿಷ್ಫಲವಾದವು. ದೇಸಾಯರ ಕುಟುಂಬದ ಎಲ್ಲ ಜನರನ್ನೂ ಬೈಲಹೊಂಗಲದ ಕೋಟೆಯಲ್ಲಿ ಸೆರೆಯಿಡಲಾಯಿತು. ಚೆನ್ನಮ್ಮನಿಗೆ ೧೦,೦೦೦ ರೂ. ಗಳನ್ನೂ ವೀರಪ್ಪನಿಗೆ ೨೦,೦೦೦ ರೂ. ಗಳನ್ನೂ ವರ್ಷಾಶನ ರೂಪದಲ್ಲಿ ಕೊಡಬೇಕೆಂದು ಸರಕಾರವು ಗೊತ್ತುಪಡಿಸಿತು.

ಹೀಗೆ ಬಲವಂತದಿಂದ ಆಕ್ರಮಿಸಿದ ಕಿತ್ತೂರ ಸಂಸ್ಥಾನವನ್ನು ಸಂಪಗಾವಿ, ಕಿತ್ತೂರ, ಮತ್ತು ಬೀಡಿ ಹೀಗೆ ಮೂರು ತಾಲೂಕುಗಳನ್ನು ಮಾಡಿ ಬ್ರಿಟಿಶರು ಆಡಳಿತ ನಡೆಸಿದರು. ಈ ಮೂರು ತಾಲೂಕುಗಳಲ್ಲಿ ೨೮೬ ಹಳ್ಳಿಗಳೂ ೭೨ ಕೊಪ್ಪಗಳೂ ಇದ್ದವು. ೧೮೨೪ರ ಸುಮಾರಿಗೆ ಈ ಮೂರೂ ತಾಲೂಕುಗಳ ಉತ್ಪನ್ನವು ಸುಮಾರು ೩|| ಲಕ್ಷ ರೂಪಾಯಿಗಳಷ್ಟಿತ್ತು. ಕೋಟೆಯ ಪತನ ವಾದ ಮೇಲೆ ಸಂಸ್ಥಾನದ ಆಸ್ತಿಯೆಲ್ಲ ಲೂಟಿಯಾಯಿತು. ಹದಿನಾಲ್ಕು ಲಕ್ಷ ರೂಪಾಯಿಗಳು, ನಾಲ್ಕುಲಕ್ಷ ರೂಪಾಯಿಗಳ ಆಭರಣ ಮತ್ತು ಅಸಂಖ್ಯ ಆನೆ ಕುದುರೆಗಳು ಬ್ರಿಟಿಶರ ಪಾಲಾದವು. (ಕಿತ್ತೂರ ಬಂಡಾಯ, ೭೦)

ಚೆನ್ನಮ್ಮರಾಣಿಯ ಕೊನೆಯ ದಿನಗಳು ಸ್ಥಾನಬದ್ಧತೆಯಲ್ಲಿ ವಿಶೇಷ ಕಷ್ಟದಿಂದ ಸಾಗಿದವು. ಅವಳು ದಿನಾಲು ತನ್ನ ಧಾರ್ಮಿಕ ಅನುಷ್ಠಾನಗಳನ್ನು ನೆರವೇರಿಸುತ್ತ ಈಶ್ವರಚಿಂತನದಲ್ಲಿ ಕಾಲಕಳೆಯುತ್ತಿದ್ದಳು. ಅವಳ ಪೂಜೆ ಪುನಸ್ಕಾರಗಳ ಕಾರ್ಯದಲ್ಲಿ ನೆರವಾಗಲು ದಿನಾಲು ಓರ್ವ ಜಂಗಮನು ಬಂದು ಹೋಗುತ್ತಿದ್ದ. ಕೆಲವು ದಿನ ಬ್ರಿಟಿಶರು ಇವನ ಬಗ್ಗೆ ಸಂಶಯಪಟ್ಟು ಪ್ರತಿ ಬಂಧಿಸಿದ್ದರಿಂದ ಚೆನ್ನಮ್ಮ ನಿರಶನವ್ರತವನ್ನು ಕೈಕೊಳ್ಳಬೇಕಾಯಿತು.

2. ಬ್ರಿಟಿಶರ ಚಿತಾವಣಿಯಿಂದ ಚೆನ್ನಮ್ಮನ ಮದ್ದುಗುಂಡಿನಲ್ಲಿ ಹಿಟ್ಟು ಮುಂತಾದವು ಗಳನ್ನು ಅರಮನೆಯವರೇ ಬೆರೆಸಿದ್ದು ಚೆನ್ನಮ್ಮನಿಗೆ ಗೊತ್ತಾಗಲು ಅವಳಿಗೆ ಯುದ್ಧ ನಿಲ್ಲಿಸುವದು ಅನಿವಾರ್ಯವೇ ಆಯಿತೆಂದೂ ಅದುವರೆಗೆ ಅವಳು ಚ್ಯಾಪ್ಲಿನ್ ಸಾಹೇಬನ ಸೈನ್ಯಕ್ಕೆ ಮಣಿದಿರಲಿಲ್ಲವೆಂದೂ ಹೇಳುತ್ತಾರೆ.

ಮುಂದೆ ೧೮೨೯ರಲ್ಲಿ ಚೆನ್ನಮ್ಮನು ತನ್ನ ಐವತ್ತೊಂದನೆಯ ವಯಸ್ಸಿನಲ್ಲಿ ಶನಿವಾರ ಫೆಬ್ರುವರಿ ೨ನೆಯ ತಾರೀಖಿನ ದಿನ ಲಿಂಗೈಕ್ಯಳಾದಳು. ಚೆನ್ನಮ್ಮನ ಸಮಾಧಿಯು ಬೈಲಹೊಂಗಲ ಕಲ್ಮಠದಲ್ಲಿರುವದು. ಚೆನ್ನಮ್ಮನು ಕೊನೆಯ ವರೆಗೂ ಬ್ರಿಟಿಶರ ವಿರುದ್ಧ ಒಮ್ಮೆಲ್ಲೊಮ್ಮೆ ಬಂಡಾಯ ಹೂಡುವ ಕನಸನ್ನು ಕಾಣುತ್ತಿದ್ದಳು.

ಸಂಗೊಳ್ಳಿ ರಾಯಣ್ಣನ ಬಂಡಾಯವು ನಡೆದಾಗ ವೀರಪ್ಪನನ್ನು ಬೈಲ ಹೊಂಗಲದಲ್ಲಿ ಇಡಬಾರದೆಂದೆನಿಸಿ ಬ್ರಿಟಿಶರು ಅವಳನ್ನು ಧಾರವಾಡಕ್ಕೆ ಸ್ಥಳಾಂತರಿಸಿದರು. ಒಂದು ಸಾವಿರ ಜನರು ಇದರಿಂದ ಅತಿಯಾಗಿ ಪ್ರಕ್ಷೋಭ ಗೊಂಡು ಅನಿಗೋಳ ಎಂಬ ಬೈಲಹೊಂಗಲ ಹತ್ತಿರದಲ್ಲಿದ್ದ ಊರೊಳಗೆ ವೀರವ್ವನನ್ನು ಸ್ಥಳಾಂತರಿಸಗೊಡಬಾರದೆಂದು ಶಸ್ತ್ರಸನ್ನದ್ಧರಾಗಿ ನಿಂತರು. ವೀರವ್ವ ವಿಷಸೇವನೆ ಮಾಡಿ ಧಾರವಾಡ ಸೆರೆಮನೆಯಲ್ಲಿ ಸತ್ತಳೆಂದು ಕೆಲವರ ಅಭಿಪ್ರಾಯವಿದೆ; ಇಂಗ್ಲೀಷರೆ ವಿಷ ಹಾಕಿದರೆಂದೂ ಪ್ರವಾದವಿದೆ; ಚೆನ್ನಮ್ಮ ಮತ್ತು ವೀರವ್ವ ಇಷ್ಟು ಜನಪ್ರಿಯರಾಗಿದ್ದದ್ದು ಇಂಗ್ಲೀಷರಿಗೆ ತುಂಬಾ ಮುಳ್ಳಾಗಿತ್ತು.

ಹೀಗೆ ಕರ್ನಾಟಕದ ಇಬ್ಬರು ವೀರಮಹಿಳೆಯರು ದೇಶದ ಸ್ವಾತಂತ್ರ್ಯ ಕ್ಕಾಗಿ ಜೀವಕೊಟ್ಟರು. ನಿಪುತ್ರಿಕಳಾದ ಚೆನ್ನಮ್ಮನಿಗಂತೂ ಸ್ವಧರ್ಮಸ್ವಾತಂ-ತ್ರ್ಯಗಳ ಹೊರತಾಗಿ ಯಾವ ಬೇರೆ ಸ್ವಾರ್ಥವೂ ಇರಲಿಲ್ಲ. ಚೆನ್ನಮ್ಮನು ನಿಜ ವಾದ ವೀರಮಹಿಳೆ; ಯಾವ ನಿರಪರಾಧಿಗಳ, ಸ್ತ್ರೀಯರ ಇಲ್ಲವೆ ಮಕ್ಕಳ ರಕ್ತ ದಿಂದ ಕೈಕೆಂಪುಮಾಡಿಕೊಳ್ಳದೆ ಚೆನ್ನಮ್ಮನು ಆಶ್ರಿತರನ್ನೂ ಶರಣಾಗತರನ್ನೂ ಔದಾರ್ಯದಿಂದ ಕಂಡು ರಣರಂಗದಲ್ಲಿ ತನ್ನ ಶಕ್ತ್ಯಾನುಸಾರವಾಗಿ ಹೋರಾಡಿ ದಳು.

ಕಿತ್ತೂರಿನ ಇತಿಹಾಸ ಇನ್ನೂ ಸಾಕಷ್ಟು ಬಯಲಿಗೆ ಬಂದಿಲ್ಲ. ಚ್ಯಾಪ್ಲೀ ನನ ಸೈನ್ಯದೊಡನೆ ನಡೆದ ಯುದ್ಧವು ಬಹಳ ರೋಮಾಂಚಕಾರಿಯಾಗಿದ್ದು ಬ್ರಿಟಿಶರ ಶೌರ್ಯದಕಿಂತಲೂ ಅವರ ಭೇದನೀತಿಯು ಗೆಲುವಿಗೆ ಕಾರಣವಾಗಿರ ಬೇಕು. ದತ್ತಕದ ಪ್ರಕರಣದಲ್ಲಿಯೂ ಕಂಪನಿ ಅಧಿಕಾರಿಗಳ ಮೋಸಗಾರಿ ಕೆಯು ಸಾಕಷ್ಟಿದೆ. ಥ್ಯಾಕರೇನ ಅನ್ಯಾಯವೇ ಯುದ್ಧಕ್ಕೆ ಮತ್ತು ಕಿತ್ತೂರ ನಾಶಕ್ಕೆ ಕಾರಣವಾಯಿತು.

**ಸಂಗೊಳ್ಳಿ ರಾಯಣ್ಣ, ೧೮೩೯**

ಸಂಗೊಳ್ಳಿ ರಾಯಣ್ಣನ ಹೆಸರನ್ನು ಕೇಳದಿರುವ ಕನ್ನಡಿಗರೇ ಇಲ್ಲ. ೧೮೩೯ ರಲ್ಲಿ ಸಂಗೊಳ್ಳಿ ರಾಯಣ್ಣ ಬ್ರಿಟಿಶರ ವಿರುದ್ಧ ಉಗ್ರವಾದ ಬಂಡಾಯವನ್ನು ಹೂಡಿದನು. ಕೊನೆಯವರೆಗೂ ರಾಯಣ್ಣನನ್ನು ಹಿಡಿಯುವದು ಇಂಗ್ಲೀಷರಿಗೆ ಸಾಧಿಸಲೇ ಇಲ್ಲ. ಮತ್ತೆ ಅವರ ರೀತಿಯ ಪ್ರಕಾರ ರಾಯಣ್ಣನ ಆಪ್ತ ಸ್ನೇಹಿತನನ್ನು ಒಡೆಸಿಕೊಂಡು ಮೋಸದಿಂದ ರಾಯಣ್ಣನಿಗೆ ಬೇಡಿಹಾಕಿದರು. ರಾಯಣ್ಣನು ಶೂರನೂ ಧೈರ್ಯಶಾಲಿಯೂ ಇದ್ದನಲ್ಲದೆ ಶ್ರೇಷ್ಠ ಕೂಟ ಯೋಧನೂ ಆಗಿದ್ದನು. ಸೋಗು ಹಾಕಿ ವೈರಿಗಳ ಶಿಬಿರ ನೋಡಿ ಬರುವದು, ರಾತ್ರಿ ವಿಕಲ್ಪನೆಯಾಗುವಂಥ ಬೆಳಕು ತೋರಿಸಿ ವೈರಿಗಳ ದಾರಿಯನ್ನು ತಪ್ಪಿಸುವದು ಮೊದಲಾದ ತಂತ್ರಗಳಲ್ಲಿ ಅವನು ತುಂಬಾ ಜಾಣನಿದ್ದನು.

ರಾಯಣ್ಣನ ಪೂರ್ಣ ಹೆಸರು ರಾಯಪ್ಪ ರೋಗಣ್ಣವರ. ಇವನು ಸಂಗೊಳ್ಳಿಯವನೆ ಆಗಿದ್ದು ಕಿತ್ತೂರ ದೇಸಾಯರ ಓಲೆಕಾರನಿದ್ದನು. ಕಿತ್ತೂರಿನ ಯುದ್ಧದಲ್ಲಿ ಹೋರಾಡಿ ಬ್ರಿಟಿಶರ ಸೆರೆಯಲ್ಲಿ ಸಿಕ್ಕು ರಾಯಣ್ಣನು ಧಾರವಾಡದ ಜೇಲಿನಲ್ಲಿ ಇಡಲ್ಪಟ್ಟನು. ಮುಂದೆ ಅವನನ್ನು ಕ್ಷಮಿಸಿ ಬಿಡುಗಡೆ ಮಾಡಲಾಯಿತು. ಊರಿಗೆ ಬಂದ ಮೇಲೆ ಯಾವದೊ ಕಾರಣದಿಂದ ಅವನ ಚಾಕರಿ ಹೊಲವು ಜಪ್ತಾಯಿತು. ಕಿತ್ತೂರ ದುರಂತದಿಂದ ಸಂತಪ್ತನಾದ ರಾಯಣ್ಣನ ತಲೆ ಮತ್ತೆ ತಿರುಗಿತು. ರಾಯಣ್ಣ ಜನರನ್ನು ಕೂಡಿಸಿದನು. ಕಿತ್ತೂರ ದೇಸಾಯಿ ಮನೆತನದ ಪ್ರೇಮಿಗಳೆಲ್ಲ ಪುನಃ ಬಡಿದಾಡಲು ಸಿದ್ಧರಾದರು. ವೀರಪ್ಪನ ದತ್ತಕ ಮಗನಾದ ಮಸ್ತ ಮರಡಿ ಶಿವಲಿಂಗನನ್ನೂ ಬೆನ್ನಿಗೆ ಹಾಕಿಕೊಂಡು ೧೮೩೯ರಲ್ಲಿ ಸಂಗೊಳ್ಳಿ ರಾಯಣ್ಣ ಬಂಡಾಯವನ್ನು ಸಾರಿಯೇ ಬಿಟ್ಟ !

ಮೊದಲು ಸಂಗೊಳ್ಳಿ ರಾಯಣ್ಣ ಬೀಡಿ ತಾಲೂಕ ಕಚೇರಿಯನ್ನು ಸುಟ್ಟನು. ರಾಯಣ್ಣನ ಸೈನ್ಯದಲ್ಲಿ ಸರಾಸರಿ ಒಂದೇ ಸಾವಿರ ಜನರು ಇದ್ದರು. ಇಂಗ್ಲೀಷರು ಅವನ ಈ ಧಾರ್ಷ್ಟ್ಯದಿಂದ ಬೆಚ್ಚಿಬಿದ್ದರು. ಆಗ ಕೃಷ್ಣರಾಯ ಎಂಬುವನೊರ್ವ ಸಂಪಗಾಂವಿ ಮಾಮಲೆದಾರನಾಗಿದ್ದನು. ಅವನು ರಾಯಣ್ಣನನ್ನು ಹಿಡಿಯುವ ಸಾಹಸಕ್ಕೆ ಬಿದ್ದನು. ತಾಲೂಕ ಕಚೇರಿಯಲ್ಲಿದ್ದ ೫೦,೦೦೦ ರೂ. ಶಿಲ್ಕನ್ನು ಒಂದು ಮಸೀದೆಯ ಮಾಳಿಗೆಯ ಮೇಲೆ ಮುಚ್ಚಿಟ್ಟು ಕೃಷ್ಣರಾಯನು ಬೀಡಿಗೆ ಹೊರಟನು. ರಾಯಣ್ಣ ಇವನ

ಹುಚ್ಚನಿರಲಿಲ್ಲ. ಅಡವಿಯಲ್ಲಿ ಅಡಗಿದ ರಾಯಣ್ಣ ಮತ್ತು ಅವನ ಸಂಗಡಿಗರು ಎಲ್ಲಿರುವರೆಂಬುದು ಸಹ ಕೃಷ್ಣರಾಯನಿಗೆ ಪತ್ತೆಹತ್ತಲಿಲ್ಲ. ಮಾಜಿ ಕಿತ್ತೂರ ದೇಸಗತಿಯ ಒಬ್ಬ ಓಲೀಕಾರನೂ ಬ್ರಿಟಿಶ್ ಸರಕಾರದ ಸಹಾಯಕ್ಕೆ ಬರಲಿಲ್ಲ. ಓಲೀಕಾರರಲ್ಲಿ ಸಹ ಆಗ ಇಷ್ಟೊಂದು ಸ್ವಾಭಿಮಾನವಿತ್ತು. ರಾಯಣ್ಣನ ಬಂಡಾಯ ಉಗ್ರವಾಗತೊಡಗಿತು. ಕಂಪನಿಸರಕಾರವು ಇವನ ಹಿಂದೆ ಕೆಲವು ಸೈನ್ಯವನ್ನು ಬಿಟ್ಟಿದ್ದರೂ ರಾಯಣ್ಣನ ಕೂಟಯುದ್ಧದಿಂದ ಅವರು ಬೇಸತ್ತು ಹೋದರು. ಜನರು ಎಂದೂ ರಾಯಣ್ಣನ ವಿರುದ್ಧ ಸರಕಾರಕ್ಕೆ ಮಾಹಿತಿಯನ್ನು ಕೊಡಲಿಲ್ಲ.

ಕೃಷ್ಣರಾಯನು ರಾಯಣ್ಣನ ಬೆನ್ನು ಬಿಟ್ಟಿರಲೇ ಇಲ್ಲ. ರಾಯಣ್ಣ ಇಷ್ಟರಲ್ಲಿ ಸಂಪಗಾಂವಿ ಮಾಮಲೇದಾರ ಕಚೇರಿಯನ್ನೂ ಕಾಗದ ಪತ್ರಗಳನ್ನೂ ಸುಟ್ಟುಹಾಕಿದ್ದ. ಕೃಷ್ಣರಾಯನು ಸಂಪಗಾವಿ ಉತ್ತರ ದಿಶೆಯಲ್ಲಿ ಒಂದು ಕೆರೆಯ ಹತ್ತಿರ ರಾಯಣ್ಣನನ್ನು ಎದುರಿಸಿ ಕಾದಾಡಿದ. ಆದರೆ ರಾಯಣ್ಣನು ಕೃಷ್ಣರಾಯನ ಕೈಗೆ ಸಿಗಲಿಲ್ಲ.

ಸರಳತನದಿಂದ ರಾಯನಾಯಕನು ಸಿಗಲಾರನೆಂದು ಸರಕಾರಕ್ಕೆ ಮನದಟ್ಟಾಯಿತು. ಖುದಾನಪೂರ ಲಿಂಗನಗೌಡ ಎಂಬವನೋರ್ವ ರಾಯಣ್ಣನ ಹಿರಿಯ ಸಂಬಂಧಿಕನಿದ್ದನು. ಇವನ ಮಗನನ್ನು ದತ್ತಕಮಾಡಿಕೊಳ್ಳಲು ಕಿತ್ತೂರ ದೇಸಾಯರು ನಿರಾಕರಿಸಿದ್ದರಿಂದ ಲಿಂಗನಗೌಡನು ದೇಸಾಯರ ಮೇಲೆಯೂ ಅವರ ಅನುಯಾಯಿಗಳ ಮೇಲೆಯೂ ಸಾಕಷ್ಟು ಸಿಟ್ಟಾಗಿದ್ದನು. ಆದರೆ ರಾಯಣ್ಣನಿಗೆ ಈ ಅಂತರಂಗ ಯಾವದೂ ಗೊತ್ತಿರಲಿಲ್ಲ. ಕೃಷ್ಣರಾಯನಿಗೆ ಅದು ಗೊತ್ತಿತ್ತು. ರಾಯಣ್ಣನನ್ನು ಹಿಡಿದುಕೊಡಲು ಕೃಷ್ಣರಾಯನು ಲಿಂಗನಗೌಡನೊಡನೆ ಸಂಧಾನವನ್ನು ನಡೆಸಿದನು. ಲಿಂಗನಗೌಡನನ್ನು ಒಡೆಸಿಕೊಳ್ಳಲು ತಡವಾಗಲಿಲ್ಲ. ಕೆಲವು ಸರಕಾರಿ ಜನರನ್ನು ಬಂಡುಗಾರರ ಸೋಗಿನಲ್ಲಿ ರಾಯಣ್ಣನಿದ್ದಲ್ಲಿಗೆ ಕಳುಹಿಸಿ ಲಿಂಗನಗೌಡನು ಮೂರುನೂರು ಜನರೊಡನೆ ಬಂದು ಬಂಡಾಯಕೂಡಿಕೊಳ್ಳಲು ಸಿದ್ಧನಿರುವದಾಗಿ ತಿಳಿಸಲಾಯಿತು. ರಾಯನಾಯಕನಿಗೆ ಲಿಂಗನಗೌಡನ ಬಗ್ಗೆ ಏನೂ ಸಂಶಯವಿರಲಿಲ್ಲ. ಲಿಂಗನಗೌಡನನ್ನು ಕೂಡಲೆ ಅವನು ಆಮಂತ್ರಿಸಿಬಿಟ್ಟನು. ಲಿಂಗನಗೌಡನಲ್ಲಿ ವಿಶೇಷ ಧೈರ್ಯವಿರಲಿಲ್ಲ. ಅವನ ಜೊತೆಗೆ ನೇಗಿನಹಾಳದ ವೆಂಕನಗೌಡನನ್ನೂ ಕಳಿಸಲಾಯಿತು. ಇವರ ಕೂಡ ಕೆಲವು ಗುಪ್ತಚಾರರೂ ಇದ್ದರು. ಹದಿನೈದು ದಿನ

ಎಲ್ಲರೂ ಕೂಡಿಯೇ ತಮ್ಮ ಬಂಡಾಯದ ಕಾರ್ಯ ಸಾಗಿಸಿದರು. ಒಂದು ದಿನ ರಾಯಣ್ಣ ತನ್ನ ಬಟ್ಟೆಗಳನ್ನೂ ಶಸ್ತ್ರಾಸ್ತ್ರಗಳನ್ನೂ ಬದಿಗಿರಿಸಿ ಜಳಕ ಮಾಡಲು ಹೋದಾಗ ನೇಗಿನಹಾಳದ ಓಲೇಕಾರನಾದ ಲಕ್ಕಪ್ಪನು ಹಿಂದಿನಿಂದ ಹೋಗಿ ರಾಯಣ್ಣನಿಗೆ ತೆಕ್ಕೆ ಹಾಕಿದನು. ಕೂಡಲೆ ಲಿಂಗನಗೌಡ, ವೆಂಕನಗೌಡ, ಮೊದಲಾದವರೆ ಅವನನ್ನು ಹೆಡಮುರಿಗೆ ಬಿಗಿದು ಒಳ್ಳೆ ಬೇಟೆ ಆಡಿದವರಂತೆ ಮೆರವಣಿಗೆಯಲ್ಲಿ ಧಾರವಾಡಕ್ಕೆ ಒಯ್ದರು. ನಾಲ್ಕು ತಿಂಗಳ ಬಂಡಿನ ದೀಪವನ್ನು ರಾಯಣ್ಣ ಉಜ್ವಲವಾಗಿ ಹೊತ್ತಿಸಿದನು. ಒಮ್ಮೆಯಂತೂ ರಾಯಣ್ಣನು ಬೆಳಗಾಂವಿ ಕೋಟೆಯನ್ನು ವಶಪಡಿಸಿಕೊಳ್ಳುವ ಸಿದ್ಧತೆ ಮಾಡಿದ್ದನು ! ಅಂಥ ಸಾಹಸಿ ರಾಯನಾಯಕ ಕೊನೆಗೆ ತಾತ್ಯಾ ಟೋಪಿಯಂತೆ ತಮ್ಮವರ ವಿಶ್ವಾಸ ಘಾತದಿಂದಲೆ ವೈರಿಯ ಕೈಗೆ ಸಿಕ್ಕುಬಿದ್ದ.

ರಾಯಣ್ಣನನ್ನು ನಂದಗಡದಲ್ಲಿ ಗಲ್ಲಿಗೆ ಹಾಕಿದರು. ಅವನ ಇಚ್ಛೆಯಂತೆ ಅಂತ್ಯಸಂಸ್ಕಾರವು ನಡೆದ ಸ್ಥಳದಲ್ಲಿ ಒಂದು ಆಲದಮರವನ್ನು ಬೆಳೆಯಿಸಲಾಗಿದೆ. ರಾಯಣ್ಣನ ಇಚ್ಛೆಯಂತೆ ಮರವು ತಾನಾಗಿಯೆ ಬೆಳೆದಿದೆಎಂದೂ ಜನರು ಹೇಳುತ್ತಾರೆ. ರಾಯನಾಯಕ ಜನರಿಗೆ ಇಂದೂ ಪೂಜ್ಯನಾಗಿದ್ದಾನೆ. ಆಲದ ಮರದ ಪೂಜೆಯನ್ನು ಇಂದಿಗೂ ಮಾಡುವವರಿದ್ದಾರೆ. ಹೆಣ್ಣುಮಕ್ಕಳು ಈ ಗಿಡಕ್ಕೆ ನಡಕೊಂಡು ರಾಯಣ್ಣನಂಥ ಶೂರ ಮಗನನ್ನು ಕೊಡೆಂದು ಹತ್ತಿರವೇ ಇದ್ದ ಗುಡಿಯಲ್ಲಿಯ ರಾಯಣ್ಣನ ಮೂರ್ತಿಗೆ ಪ್ರಾರ್ಥಿಸುತ್ತಾರೆ. ರಾಯನಾಯಕನ ಶೌರ್ಯಸಾಹಸಗಳನ್ನೂ ಸದ್ಗುಣಗಳನ್ನೂ ಸುತ್ತಲಿನ ಹಳ್ಳಿಯ ಜನರು ಇಂದಿಗೂ ಲಾವಣಿ ರೂಪದಲ್ಲಿ ಹಾಡುತ್ತಾರೆ. ರಾಯಣ್ಣನ ಸಮಕಾಲೀನನೇ ಆದ ಮತ್ತು ಪ್ರತ್ಯಕ್ಷದರ್ಶಿಯಾದ ಹೆಬ್ಬಳ್ಳಿಯ ಬಸವಕವಿಯು ರಾಯಣ್ಣನ ಬಗ್ಗೆ ಲಾವಣಿಯೊಂದನ್ನು ಬರೆದಿದ್ದಾನೆ. ರಾಯನಾಯಕನೊಡನೆ ಕಿತ್ತೂರ ಚಳವಳಿಗೂ ಅಳಿಗಾಲವು ಬಂದಿತು. ದತ್ತಕ ಮಗನಾದ ಶಿವಲಿಂಗನು ಸಾಂಗಲಿ ರಾಜನ ಪ್ರಜೆಯಾಗಿದ್ದರಿಂದ ಅವನನ್ನು ಸಾಂಗಲಿ ರಾಜನ ಕಡೆಯಿಂದ ದೊಡ್ಡವಾಡ ಕಿಲ್ಲೆಯಲ್ಲಿ ಬ್ರಿಟಿಶರು ಬಂಧಿಸಿಟ್ಟರು. ಅವನ ಸುತ್ತಲೂ ಮುಂದೆ ಹತ್ತಿಪ್ಪತ್ತು ವರ್ಷ ನಡೆದ ಯಾವ ಒಳಸಂಚುಗಳೂ ಯಶಸ್ವಿಯಾಗಲಿಲ್ಲ. ರಾಯಣ್ಣನನ್ನು ಹಿಡಿದುಕೊಟ್ಟ ಲಿಂಗನಗೌಡನು ಮಾತ್ರ ಗಲಿಬಿಲಿಯಲ್ಲಿ ಕೊಲೆಮಾಡಲ್ಪಟ್ಟನು. ಯಾರೂ ಲಿಂಗನಗೌಡನ ಸಲುವಾಗಿ ಮರುಗಲಿಲ್ಲ.

## ಹದಿನೈದನೆಯ ಅಧ್ಯಾಯ

## ಕೊಡಗು, ಮಂಗಳೂರ ಮತ್ತು ಅಮರಸೂಳ್ಯ

### ೧೮೩೩–೩೭

### ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅಪರಂಪರ ಸ್ವಾಮಿಯ ಬಂಡಾಯ

ದಕ್ಷಿಣಕನ್ನಡ ಜಿಲ್ಲೆಯಲ್ಲಿಯೂ ಕೊಡಗಿನಲ್ಲಿಯೂ ೧೮೩೭ರಲ್ಲಿ ಬ್ರಿಟಿಶರ ವಿರುದ್ಧ ಬಂಡಾಯ ಮೊದಲಾಯಿತು. ಆದರೆ ಅವಕ್ಕೆ ಹೆಚ್ಚಿನ ಬಲ ಮತ್ತು ವ್ಯಾಪ್ತಿಯುಂಟಾದದ್ದು ೧೮೩೬-೩೭ರಲ್ಲಿ. ೧೮೩೧ರಲ್ಲಿ ಮೈಸೂರಿನ ಮುಮ್ಮಡಿ ಕೃಷ್ಣರಾಜಒಡೆಯರು ಪದಚ್ಯುತರಾದರು. ಕೊಡಗಿನ ವೀರರಾಜೇಂದ್ರ ಒಡೆಯರೂ ರಾಜ್ಯವನ್ನು ಕಳೆದುಕೊಂಡು ದೇಶಾಂತರವಾಸಿಗಳಾಗಿದ್ದರು. ಈ ಎರಡೂ ಸಂಸ್ಥಾನಗಳ ಭವಿಷ್ಯನಿರ್ಧಾರದಲ್ಲಿ ಬ್ರಿಟಿಶ್ ಸರಕಾರದವರು ನಿಯುಕ್ತರಾಗಿದ್ದರು. ಆಗಲೆ ಸುಮಾರು ೧೮೩೩ರಲ್ಲಿ ಅಪರಂಪರನು ಮುಂದೆ ಬಂದು ಈ ಎರಡೂ ಸಂಸ್ಥಾನಗಳ ಪುನರುದ್ಧಾರಕ್ಕಾಗಿ ರಾಯಭಾರವನ್ನು ನಡೆಸಿದನು. ಬ್ರಿಟಿಶ್ ಸರಕಾರದ ಉದ್ದೇಶವನ್ನು ಭಂಗಗೊಳಿಸಲು ಸರ್ವ ಪ್ರಯತ್ನವನ್ನು ಮಾಡಿ ಬ್ರಿಟಿಶರ ಬದ್ಧವೈರಿಯಾದನು. ಕೊಡಗಿನಲ್ಲಿ ೧೮೩೪ರ ಯುದ್ಧವಾಗುವ ಪೂರ್ವದಲ್ಲಿಯೇ ಅಪರಂಪರನು ಕೊಡಗನ್ನು ಬಿಟ್ಟಿದ್ದ. ಅದರ ಗಡಿಯ ಸಮೀಪದ ರಾಜಗೋಡು ಗ್ರಾಮವನ್ನು ಸೇರಿದ್ದ. ಪಟೇಲ ಮಲ್ಲಪ್ಪಗೌಡ ಎಂಬುವವನ ಆಶ್ರಯ ಪಡೆದಿದ್ದ. ರಾಜಗೋಡು ಗ್ರಾಮವು ಮಂಗಳೂರ ಜಿಲ್ಲೆಯಲ್ಲಿದೆ. ಉತ್ತರಕೊಡಗಿನ ಗೌಡರಿಗೂ ಮಲ್ಲಪ್ಪನಿಗೂ ಕುಲಬಾಂಧವ್ಯವು ನಿಕಟವಾಗಿದ್ದಿತು. ಅಲ್ಲದೆ ಅಲ್ಲಿಯ ರೈತರಲ್ಲೆಲ್ಲ ಮಲ್ಲಪ್ಪನು ಹೆಸರುವಾಸಿಯಾಗಿದ್ದ. ಮೇಲಾಗಿ ಇವನು ಕೊಡಗಿನ ಅರಸರಾದ ಲಿಂಗರಾಜ, ವೀರರಾಜರ ಆಪ್ತ; ಅವರ ಅಂತರಂಗಕ್ಕೆ ಸೇರಿದವ. ತನ್ನ ಉದ್ದೇಶ ಸಾಧನೆಗೆ ರಾಜಗೋಡು ಹಾಗೂ ಮಲ್ಲಪ್ಪನ ಸಹಾಯ ಇವುಗಳಿಗಿಂತ ಇನ್ನೊಂದು ಅನುಕೂಲ ಕ್ಷೇತ್ರವಿಲ್ಲವೆಂದು ಅಪರಂಪರ ಸ್ವಾಮಿಯು

ಅರಿತುಕೊಂಡ. ಜಂಗಮನಿದ್ದುದರಿಂದ ಅಂಥ ಶ್ರದ್ಧೆಯ ಸಾಮಾನ್ಯ ಜನರನ್ನು ಇವನು ತನ್ನ ಕಡೆಗೆ ಎಳೆದುಕೊಂಡನು; ಅನೇಕ ಪವಾಡಗಳನ್ನು ಮೆರೆಯಿಸಿ ಜನರ ಮೇಲೆ ತನ್ನ ಗುರುಪ್ರಭಾವವನ್ನು ಬೀರಿದನು.

೧೮೩೫ರಲ್ಲಿ ತನ್ನ ಬಲಕ್ಕೆ ಸರಿಯಾದ ಬೆಲೆಯನ್ನು ಕಟ್ಟಿ ತಾನು ಕೊಡಗಿನ ಹಾಲೇರಿ ರಾಜಮನೆತನದ ಪ್ರತಿನಿಧಿಯೆಂದು ಈ ಅಪರಂಪರ ಸ್ವಾಮಿಯು ಸಾರಿಬಿಟ್ಟ. ಆ ರಾಜ್ಯದ ಮೇಲೆ ತನ್ನ ಹಕ್ಕು ಉಂಟೆಂದು ಸ್ಥಾಪಿಸಲು ಆರಂಭ ಮಾಡಿದ. ೧೮೩೬–೩೭ರ ಸುಮಾರಿಗೆ ಅಪರಂಪರ ಸ್ವಾಮಿಯು ಸಾಕಷ್ಟು ಪ್ರಬಲನಾದ. ಆಗ ಒಡೆಯಮನೆತನದವರೆ ಪದಚ್ಯುತಿಯಿಂದ ಮೈಸೂರು ದೇಶವಲ್ಲೆಲ್ಲ ಅಸಾಧ್ಯ ಅತೃಪ್ತಿ, ಅಶಾಂತಿ ತಲೆಯೆತ್ತಿತ್ತು. ಮೈಸೂರು ಅರಮನೆಯ ಹತ್ತಿರವೆ ಫಿತೂರಿಗಾರರ ರಹಸ್ಯಾಲೋಚನೆಗಳ ಕಾರಾಗಾರವು ಏರ್ಪಡಹತ್ತಿತು. ೧೮೩೭ರಲ್ಲಿ ಮೈಸೂರು ರಾಜ್ಯದಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಹಾಗೂ ಕೊಡಗಿನಲ್ಲಿ ಈ ಫಿತೂರಿಗಾರರಿಗೆ ಸಾಕಷ್ಟು ಬೆಂಬಲವು ಸಿಕ್ಕಿತು. ಆದರೂ ಫಿತೂರಿಯು ಜಯಪ್ರದವಾಗಲಿಲ್ಲ. ಮೈಸೂರಿನಲ್ಲಿ ಫಿತೂರಿಗಾರರಿಗೆ ಆಸ್ಥಾನಕ್ಕೆ ಸಂಬಂಧಪಟ್ಟವರಿಂದ ಬೆಂಬಲವು ಸಿಕ್ಕಿತೆಂಬುದನ್ನು ಸ್ಥಾಪಿಸುವದು ಕಷ್ಟವೆಂದು ಆಗಿನ ಬ್ರಿಟಿಶ್ ಅಧಿಕಾರಿಗಳೆ ಅಭಿಪ್ರಾಯಪಟ್ಟಿದ್ದಾರೆ. ೧೮೩೭ನೆಯ ಫಿತೂರಿಯನ್ನು ಕುರಿತು ಒಂದು ವಿಶೇಷವೆಂದರೆ ಫಿತೂರಿಗಾರರೆಲ್ಲ ಕಾರ್ಯಸಾಧನೆಗಾಗಿ ಮೈಸೂರಿನಿಂದ ಹೊರಟರು. ಇವರು ಹೊರಟಿರುವ ಸುದ್ದಿಯನ್ನು ಬ್ರಿಟಿಶರಿಗೆ ಮಹಾರಾಜರೆ ಕೊಟ್ಟರು. ಹೀಗಾಗಿ ಫಿತೂರಿಗಾರರ ರಹಸ್ಯಾಲೋಚನೆಗಳು ಮಣ್ಣುಗೂಡಿದವು.

ಮೂರನೆಯ ಪ್ರಯತ್ನವು ಸಾಕಷ್ಟು ಯಶಸ್ವಿಯಾಯಿತು. ಈ ಪ್ರಸಂಗದ ನಾಯಕ ಮುಖ್ಯರೆಂದರೆ ಅಪರಂಪರ ಸ್ವಾಮಿ ಮತ್ತು ಕೊಡಗಿನ ಅಪ್ಪಾಜಿ ಅರಸ. ಮೊದಲು ಮೊದಲು ಪ್ರೋತ್ಸಾಹಕರೆಲ್ಲ ಈ ನಾಯಕರ ಉದ್ದೇಶ ಸಾಧನೆಗೆ ನೆರವಾದರು. ಮೊದಲಿನ ಎರಡು ಪ್ರಯತ್ನಗಳ ವಿಫಲತೆಯಿಂದ ಫಿತೂರಿಗಾರರು ಪೂರ್ಣ ಲಾಭಹೊಂದಿದರು. ಆ ಪ್ರಯತ್ನಗಳನ್ನೆಲ್ಲ ಮಣ್ಣುಗೂಡಿಸಿದ ಬ್ರಿಟಿಶ ಸರಕಾರದ ಮೇಲೆ ವೈರವೃದ್ಧಿಯಾಯಿತು. ಕೊಡಗಿನ ಜನರ ಮನೋಧರ್ಮವನ್ನು ಚೆನ್ನಾಗಿ ಬಲ್ಲವರಾಗಿದ್ದ ಕಾರಣ ಕೊಡಗಿನ ರಾಜಮನೆತನದವರ ಪುನರುದ್ಧಾರ ಕಾರ್ಯವೆ ಪ್ರಧಾನವೆಂದು ಸಾಮಾನ್ಯಜನರ ಮನಸ್ಸನ್ನು ಸೆಳೆದುಕೊಂಡರು. ಆದರೆ ಅವರ ಪರಮೋದ್ದಿಶ್ಯವು ಬ್ರಿಟಿಶ್

ಪ್ರಭುತ್ವವನ್ನು ಧ್ವಂಸಮಾಡುವದೇ ಆಗಿದ್ದಿತು. ೧೮೩೭ನೆಯ ಮಂಗಳೂರಿನ ಬಂಡಾಯದ ಕಾರಣಗಳನ್ನು ಕುರಿತು ಕಮಿಶನರ ಕಾಟನ್ ಹೀಗೆ ಬರೆದಿದ್ದಾನೆ.

"ಅಂದಿನ ಸಂದರ್ಭ ಮತ್ತು ಪ್ರಸಂಗಗಳಿಗೆ ಅನುಸರಿಸಿ ಬ್ರಿಟಿಶ್ ಪ್ರಭುತ್ವವನ್ನು ನಷ್ಟಪಡಿಸುವದೆ ಬಂಡುಗಾರರ ಉದ್ದೇಶವಾಗಿದ್ದಿತೆಂಬ ಬಗ್ಗೆ ನನಗೆ ಎಳ್ಳಷ್ಟೂ ಸಂಶಯವಿಲ್ಲ. ೧೮೩೪ರಲ್ಲಿ ಅಪರಂಪರ ಸ್ವಾಮಿಯು ಹೊತ್ತಿಸಿದ ಬೇಗೆಯಂತೆ ಈಗಲೂ ಒಂದು ಅರಾಜಕತೆಯು ಉದ್ಭವಿಸುವದೆಂದು ಅವರು ತಿಳಿದಿದ್ದರು........ ಕೊಡಗಿನಲ್ಲಿ ಬ್ರಿಟಿಶ ಪ್ರಭುತ್ವವನ್ನು ನೆಲಕ್ಕುರುಳಿಸಿ ಅಲ್ಲಿಯ ಹಿಂದೂ ರಾಜಮನೆತನವನ್ನು ಪುನಃ ಪಟ್ಟಕಟ್ಟುವ ಹೆಸರಿನಲ್ಲಿ ಇದು ನಡೆದಿತ್ತು ಇಷ್ಟೆ."

ಬಂಡಾಯದ ನಾಯಕ ಅಪರಂಪರ ಸ್ವಾಮಿಯು ಅನೇಕ ನಿರೂಪಣೆಗಳನ್ನು ಹೊರಡಿಸಿ ಅವುಗಳ ಮೂಲಕ ಜನರ ಬೆಂಬಲಪಡೆದು ತಾನು ಸಾಧಿಸಬೇಕಾದುದನ್ನು ಗಳಿಸಿದ. ೧೮೩೭ನೆಯ ಮಾರ್ಚ ತಿಂಗಳ ೩೦ನೆಯ ತಾರೀಖಿಗೆ ಕೊಡಗಿನ ಪ್ರಜೆಗಳನ್ನು ಸಂಬೋಧಿಸಿ ಅವನು ಒಂದು ನಿರೂಪಣೆಯನ್ನು ಹೊರಡಿಸಿದನು. ಹೀಗೆ ಅವನು ಹೊರಡಿಸಿದ ನಿರೂಪಣೆಗಳ ಮಾದರಿ ಇಂತಿದೆ:
"ಇಂಗ್ಲೀಷರೊಡನೆ ಯುದ್ಧವನ್ನು ಮಾಡಲು ಅಪರಂಪರ ಸ್ವಾಮಿಯ ಸೈನ್ಯವು ಇಲ್ಲಿಗೆ ಬಂದಿದೆ. ನೀವು ಅದನ್ನು ಕೂಡಿಕೊಳ್ಳಬೇಕು ; ನಿಮ್ಮ ಹತ್ತಿರವಿದ್ದ ಯಾವದೇ ಶಸ್ತ್ರಗಳೊಡನೆಯಾದರೂ ಸಿದ್ಧರಾಗಿರಿ. ಈ ಪ್ರಕಾರ ನಮ್ಮನ್ನು ನೀವು ಕೂಡಿಕೊಳ್ಳುತ್ತಿಲ್ಲವಾದರೆ ನಿಮ್ಮ ಕುಟುಂಬದ ಜನರೆಲ್ಲರೂ ಪ್ರಾಣಕ್ಕೆ ಎರವಾದಾರು ! ಹನ್ನೆರಡು ಲಕ್ಷ ಸೈನ್ಯವು ಬೇಗನೆ ನಮ್ಮನ್ನು ಕೂಡಿಕೊಳ್ಳಲು ಬರುವದಿದೆ. ಸ್ವಾಮೀಜಿಯವರ ಸೈನ್ಯವನ್ನು ಸೇರುವದಾಗಿ ಕೂಡಲೆ ನಿಮ್ಮ ಪ್ರತಿ ಉತ್ತರವನ್ನು ಕಳಿಸಿಕೊಡತಕ್ಕದು." (ಕಾಟನ್ ಸಾಹೇಬನ ವರದಿ.)

ಈ ಬಗೆಯ ಸಂದೇಶಗಳಿಂದ ಜನರನ್ನು ಹುರಿದುಂಬಿಸುತ್ತ ಶತ್ರುಪಕ್ಷಪಾತಿಗಳಾದರೆ ಸರ್ವನಾಶವು ಸಿದ್ಧವೆಂದು ಅವರನ್ನು ಹೆದರಿಸುತ್ತ ಅಪರಂಪರ ಸ್ವಾಮಿಯು ಸಮಯ ಕಾಯ್ದಿದ್ದನು.

ಬ್ರಿಟಿಶ್ ಸರಕಾರದವರು ಪುತ್ತೂರು, ಅಮರಸೂಳ್ಯ ತಾಲೂಕುಗಳನ್ನು
[illegible]ಡಿ ದಕ್ಷಿಣಕನ್ನಡ ಜಿಲ್ಲೆಗೆ ಸೇರಿಸಿದರು. ಈ ವ[illegible]

ವಣೆಯಿಂದ ಜನರಿಗೆ ಬಹಳೇ ಅಸಮಾಧಾನವಾಯಿತು. ಭೂಮಿರಾಶಿ, ಕಂದಾಯ ಕವಲಿಗೆ ಆಸ್ತಿಪಾಸ್ತಿ ಮುಂತಾದ ವಿಚಾರಗಳಲ್ಲಿ ತಮಗೆ ಅನ್ಯಾಯ ವಾಯಿತೆಂದು ಆ ವ್ಯವಸ್ಥೆಯನ್ನು ಪ್ರತಿಭಟಿಸಿದರು. ಜನರ ಈ ಮನೋಧರ್ಮವು ತನ್ನ ಸದವಕಾಶವೆಂದು ಅಪರಂಪರ ಸ್ವಾಮಿಯು ಅವರನ್ನೊಲಿಸಿಕೊಂಡ. ಪುತ್ತೂರು, ಅಮರಸುಳ್ಯ, ಮಂಗಳೂರು ಮೊದಲಾದ ಕಡೆಗಳಲ್ಲಿ ಬಂಡಾಯದ ಕಿಡಿಗಳನ್ನು ಹೊತ್ತಿಸಿದ. ಅಧಿಕಾರಿಗಳು, ರೈತರು, ವರ್ತಕರು ಹೆಚ್ಚೇನು, ಸಕಲ ಜನತೆಯ ಬೆಂಬಲವನ್ನು ಸಂಪಾದನೆ ಮಾಡಿದ. ೧೮೪೧ರಲ್ಲಿ ಈ ಗಲಭೆಯ ಸಂಬಂಧದಲ್ಲಿ ಮಂಗಳೂರಿನ ಆಗಿನ ಜಿಲ್ಹಾಧಿಕಾರಿಯಾದ ಬ್ಲೆಯರನು ಹೀಗೆ ತನ್ನ ವರದಿಯಲ್ಲಿ ಹೇಳಿದ್ದಾನೆ: "ಅಪರಂಪರ ಸ್ವಾಮಿಗೆ ಬೆಂಬಲವನ್ನು ಕೊಟ್ಟ ರೈತರಲ್ಲಿ ಅನೇಕರು ಅವನ ಹೆದರಿಕೆಯಿಂದ ಹಾಗೆ ಮಾಡಿರಬಹುದು. ಆದರೆ ಬಹಳ ಜನರು ನಮ್ಮ ಪ್ರಭುತ್ವವು ಇನ್ನು ಅಳಿಯಿತೆಂದು ಭಾವಿಸಿ ಮತ್ತು ಅವನ ಉದಾರ ಅಭಿವಚನಗಳಿಗೆ ಮನಸೋತು ಸ್ವಸಂತೋಷದಿಂದ ಅವನನ್ನು ಕೂಡಿಕೊಂಡಿದ್ದರೆಂಬುದು ಸಿದ್ಧ."

ಹುಜೂರು ಶಿರಸ್ತೇದಾರನು ಬೆಳ್ಳಾರಪೇಟೆಗೆ ಜಮಾಬಂದಿಗೆ ಹೋಗಿದ್ದನು. ಬಂಡುಗಾರರು ಅಪರಂಪರನ ನಾಯಕತ್ವದಲ್ಲಿ ಶಿರಸ್ತೇದಾರ ಪ್ರಭೃತಿಗಳನ್ನೆಲ್ಲ ಬಂಧಿಸಿಟ್ಟರು. ಈ ವಾರ್ತೆಯು ೩೧-೩-೧೮೩೭ನೆಯ ದಿನ ಮಂಗಳೂರಿನ ಮ್ಯಾಜಿಸ್ಟ್ರೇಟರಿಗೆ ಮುಟ್ಟಿತು. ಮೊದಲು ಮ್ಯಾಜಿಸ್ಟ್ರೇಟ ಸಾಹೇಬರು ಈ ಸುದ್ದಿಯನ್ನು ನಂಬಲೆ ಇಲ್ಲ! ಆದರೂ ಒಂದು ನೂರು ಐವತ್ತು ಸಿಪಾಯಿಗಳೊಂದಿಗೆ ಅವನು ಬೆಳ್ಳಾರಪೇಟೆಯ ಕಡೆಗೆ ಧಾವಿಸಿದನು. ಅವನು ಪುತ್ತೂರ ಬಳಿಗೆ ಬರುತ್ತಲೆ ಅಪರಂಪರನೂ ತನ್ನ ಗೂಢಚಾರರನ್ನು ದಾರಿಯುದ್ದಕ್ಕೂ ನಿಲ್ಲಿಸಿದ್ದನೆಂದೂ ಮಂಗಳೂರಿನಲ್ಲಿ ಬ್ರಿಟಿಶರ ಬಲ ಏನೆಂಬುದನ್ನು ಅರಿಯಲು ಪ್ರಯತ್ನ ಮಾಡುತ್ತಿದ್ದನೆಂದೂ ಗೊತ್ತಾಯಿತು. ಜಿಲ್ಹಾ ಮ್ಯಾಜಿಸ್ಟ್ರೇಟರಾದ ಲೂವೆನ್ ಅಪರಂಪರ ಪರಿವಾರದವರ ಗೊಡವೆಗೆ ಹೋಗುವ ಧೈರ್ಯ ಮಾಡಲೇ ಇಲ್ಲ. ಶಸ್ತ್ರಧಾರಿಗಳೂ ಬಡಿಗ್ಯೆಯವರೂ ಅನೇಕರು ನಾನಾಕಡೆಗಳಿಂದ ಬಂದು ಅವನ ಬಂಗ್ಲೆಯನ್ನು ಮುತ್ತಿದರು; ಲೂವೆನ್ನನ ಕೈಕಾಲು ಥರಥರನೆ ನಡುಗಿದವು. ಜನರ ಗುಂಪನ್ನು ತಡೆಗಟ್ಟಲು ಸರಕಾರಿ ಅಧಿಕಾರಿಗಳೂ ಸವಾರರೂ ಒಬ್ಬರೂ ಲೂವೆನ್ನನ ನೆರವಿಗಾಗಿ ಧಾವಿಸಿ ಬರಲಿಲ್ಲ. ಗಾಬರಿಯಾದ ಲೂವೆನ್ ತಾನೆದುರಿಸಬೇಕಾದ ಪ್ರಬಲಶಕ್ತಿಯನ್ನು ಮನಗಂಡನು. ಆದರೂ ಮಂಗಳೂ

ರನ್ನು ಕೈಬಿಡಬಾರದು ಎಂದು ಅದರ ಸಂರಕ್ಷಣೆಯ ಬಗ್ಗೆ ಆಲೋಚನೆಯನ್ನು ಮಾಡತೊಡಗಿದ. ಮಂಗಳೂರಕಡೆಗೆ ಮುಖ ಮಾಡಿ ಹದಿನೆಂಟು ಗಂಟೆಗಳಲ್ಲಿ ಮಂಗಳೂರ ಮುಟ್ಟಿದ; ದಾರಿಯು ಸುಗಮವಾಗಿ ಸಾಗಲಿಲ್ಲ. ಹೊಡೆದಾಡುತ್ತಲೆ ನಡೆದ; ಈ ಹೊಡೆದಾಟದಲ್ಲಿ ಅರವತ್ತು ಮಂದಿ ಸತ್ತರು. ಉಳಿದವರು ಪ್ರಯಾಸದಿಂದ ಮಂಗಳೂರು ಸೇರಿದರು.

ಲೂವೆನ್ ಮಂಗಳೂರು ಸೇರಿದೊಡನೆ ಅವನಿಗೆ ಬಂಟವಾಲ-ಕಾಸರಗೋಡುಗಳ ಖಜಾನೆಗಳು ಲೂಟಿಯಾಗಿ ಹದಿನೈದು ಸಾವಿರ ರೂಪಾಯಿಗಳ ಭಂಡಾರವು ಬರಿದಾಯಿತೆಂಬ ವಾರ್ತೆಯು ಮುಟ್ಟಿತು. ಅದಾದಕೂಡಲೆ ಮಂಗಳೂರಿನ ಮುತ್ತಿಗೆಗಾಗಿ ಅಪರಂಪರ ಸ್ವಾಮಿಯ ಸೈನ್ಯವು ಮೂರು ಕಡೆಗಳಿಂದ ಬರುತ್ತಿದೆ, ಎಂಬ ಭಯಸೂಚಕ ವಾರ್ತೆಯೂ ಬಂದಿತು. ಶತ್ರುಸೈನ್ಯ ಬಲವು ಸುಮಾರು ಹನ್ನೆರಡು ಸಾವಿರವಾಗಿದ್ದಿತೆಂದೂ ಲೂವೆನ್‌ನು ಅರಿತಿದ್ದನು. ಬಂಡಾಯವು ಜಿಲ್ಹೆಯಲ್ಲೆಲ್ಲ ಹಬ್ಬಿಕೊಂಡಿವೆಯೆಂದೂ ಮಂಗಳೂರಿನ ಉತ್ತರ ಭಾಗಗಳನ್ನು ಬಿಟ್ಟರೆ ಉಳಿದ ಪ್ರದೇಶವೆಲ್ಲ ದಂಗೆಗಾರರ ವಶವಾಗಿದೆ ಎಂಬುದೂ ಅವನಿಗೆ ಖಚಿತವಾಗಿ ಗೊತ್ತಾಗಿದ್ದಿತು. ಮದ್ರಾಸ, ಕಣ್ಣನೂರುಗಳ ಸಂಪರ್ಕವೂ ತಪ್ಪಿ ಹೋಗಿದ್ದಿತಾದ್ದರಿಂದ ಅತ್ತಕಡೆಯಿಂದ ಸಹಾಯವು ಬರುವದು ಅಸಂಭವವಾಗಿದ್ದಿತು. ಮಂಗಳೂರಿನ ಸಂರಕ್ಷಣೆಗಾಗಿ ಕೇವಲ ೩೮೦ ಸಿಪಾಯಿಗಳು ಮಾತ್ರ ಇದ್ದರು. ಮೇಲಾಗಿ ಮಂಗಳೂರಿನ ಜನರೂ ಭಯದಿಂದ ಊರು ಬಿಟ್ಟಿದ್ದರು. ಹೀಗೆ ಬಿಕ್ಕಟ್ಟಿನಲ್ಲಿ ಸಿಕ್ಕ ಲೂವೆನ್ ಅಧಿಕಾರಿಗಳನ್ನೆಲ್ಲ ಕರೆದು ಮುಂದೇನು ಮಾಡತಕ್ಕದ್ದೆಂದು ಸಮಾಲೋಚಿಸಿದ. ಮಂಗಳೂರನ್ನು ಖಾಲಿ ಮಾಡಬೇಕು; ಅದಕ್ಕೆ ಮುಂಚಿತವಾಗಿ ಭಂಡಾರವನ್ನು ಸರಕಾರಿ ನೌಕರರನ್ನು ಮತ್ತು ಸಿಪಾಯಿಗಳನ್ನೂ ಅವರ ಮನೆಯ ಜನರನ್ನೂ ಡೋಣಿಯ ಮೂಲಕ ಕಣ್ಣನೂರಿಗೆ ಸಾಗಿಸಬೇಕೆಂದು ನಿರ್ಧಾರವಾಯಿತು. ಡೋಣಿಗಳು ಸಾಕಷ್ಟಿರಲಿಲ್ಲ. ಲೂವೆನ್ನನಿಗೆ ಬೇರೆ ದಾರಿಯೇ ತೋರಲಿಲ್ಲ. ಮುಂಬೈಯಿಂದ ಸಹಾಯ ಬರಬೇಕೆಂದು ಮೊರೆಯಿಟ್ಟ; ೪-೪-೧೮೩೭ಕ್ಕೆ ಧಾರವಾಡ ಜಿಲ್ಹೆ ಅಧಿಕಾರಿಗಳಿಗೆ ಪತ್ರ ಬರೆದು ತನ್ನ ಶೋಚನೀಯ ಪರಿಸ್ಥಿತಿಯನ್ನು ಅರಿಕೆ ಮಾಡಿಕೊಂಡ. ತಕ್ಷಣ ಸೈನಿಕರನ್ನು ಕಳಿಸಿ ಕಾಪಾಡಲು ಬೇಡಿದ; ಒಂದೇ ವಾರದಲ್ಲಿ ಮುಂಬೈ ಇಲಾಖೆಯಿಂದ ಸಕಲ ಸಹಾಯವೂ ಬರುವ ವ್ಯವಸ್ಥೆಯಾಯಿತು. ಧಾರವಾಡ, ಬೆಳಗಾಂವಿಗಳಿಂದ ಸೈನ್ಯಗಳು

ವೆಂಗುರ್ಲಾಕ್ಕೆ ಹೊರಟವು. ಇದರ ಮೊದಲು ಹೊನ್ನಾವರದ ಸಬ್‌ಕಲೆಕ್ಟರರು ಮಂಗಳೂರಿನ ವಿಮೋಚನೆಗೆ ಅರವತ್ತು ಜನರನ್ನು ಕಳಿಸಿದ್ದರು.

೧೮೩೭ನೆಯ ಇಸ್ವಿ ಎಪ್ರಿಲ್ ತಿಂಗಳ ೫ನೆಯ ದಿನಾಂಕ ಬಂಡುಗಾರರು ಮಂಗಳೂರ ನಗರವನ್ನು ಪ್ರವೇಶಮಾಡಿದರು. ಅನೇಕ ಸರಕಾರಿ ಕಟ್ಟಡಗಳನ್ನು ಅಗ್ನಿನಾರಾಯಣನಿಗೆ ಸಮರ್ಪಣೆ ಮಾಡಲಾಯಿತು! ಸರಕಾರಿ ಆಸ್ತಿಯನ್ನು ಧ್ವಂಸಗೊಳಿಸಲಾಯಿತು !! ಮಂಗಳೂರು ವಶವಾದ ಕೂಡಲೆ ಅಪರಂಪರಸ್ವಾಮಿಯು ಅದರ ಮೇಲೆ ತನ್ನ ಬಾವುಟವನ್ನು ಹಾರಿಸಿದ. ಇಲ್ಲಿ ಅವನು ಪುಟ್ಟಬಸವಪ್ಪನೆಂಬ ಹೆಸರಿನಿಂದ ಕಾಣಿಸಿಕೊಂಡನೆಂದೂ ಮಂಗಳೂರಿನ ಜನರ ಪ್ರೀತಿ-ವಿಶ್ವಾಸಗಳಿಗೆ ಪಾತ್ರನಾದನೆಂದೂ ಕಬ್ಬನ್ನರ ಟಿಪ್ಪಣಿಗಳಿಂದ ತಿಳಿಯುತ್ತದೆ. ಮಂಗಳೂರಿನ ಆಂಗ್ಲ ಸೈನಿಕರು ಬಂಡಾಯಗಾರರನ್ನು ಎದುರಿಸಲಾರದೆ ಅಲ್ಲಿಯ ಖಜಾನೆಯನ್ನು ಕೆಂಟೋನಮೆಂಟಿಗೆ ಸಾಗಿಸಿದರು. ಸಿಪಾಯಿಗಳು, ನೌಕರರು ಎಲ್ಲರೂ ತಮ್ಮ ಪ್ರಾಣರಕ್ಷಣೆಗಾಗಿ ಅಲ್ಲಿಯೇ ಸೇರಿದರು.

ಹೀಗಾಗಿ ಬಂಡಾಯಗಾರರಿಂದ ಸುತ್ತುವರಿಯಲ್ಪಟ್ಟ ಇಂಗ್ಲೀಷರು ಕಕ್ಕಾವಿಕ್ಕಿಯಾದರು. ಸಮುದ್ರಮಾರ್ಗವಾಗಿಯಾದರೂ ಓಡಿಹೋಗೋಣವೆಂದು ಹವಣಿಸಿ ದೂರ ಹೋಗುವ ಹಡಗಗಳಿಗೆ ಕಾಣುವಂತೆ “ಕಷ್ಟಕ್ಕೆ ಸಿಕ್ಕಿದ್ದೇವೆ,” ಎಂಬ ಸಂಕಟಸೂಚಕ ಬಾವುಟವನ್ನು ಆಂಗ್ಲರು ತಮ್ಮ ಶಿಬಿರದ ಮೇಲೆ ಹಾರಿಸಿದರು. ಮುಂಬೈ ಪ್ರವಾಸಗಳಿಗೆ ಹೋಗುತ್ತಿದ್ದ ಕೆಲವು ಹಡಗುಗಳ ನೌಕಾದಂಡನಾಯಕರು ಈ ಧ್ವಜವನ್ನು ನೋಡಿ ವೇಗದಿಂದ ದಡಕ್ಕೆ ಬಂದು ಸರ್ವನಾಶಕ್ಕೆ ಗುರಿಯಾಗಿದ್ದ ಹೆಂಗಸರು–ಮಕ್ಕಳನ್ನು ಕಾಪಾಡಿ ಕಣ್ಣನೂರಿಗೆ ಸಾಗಿಸಿದರು. ಮಲಬಾರ ಹಾಗೂ ದಕ್ಷಿಣಕನ್ನಡ ಸೇನೆಗಳ ನಾಯಕ ಬ್ರಿಗೇಡಿಯರ ಎಲಿಸ್ ಅಲ್ಲಿದ್ದುದರಿಂದ ಅವನಿಗೆ ಈ ಸಮಾಚಾರವೆಲ್ಲ ತಿಳಿಯಿತು. ಈ ದುರಂತವಾರ್ತೆಯನ್ನು ತಿಳಿಸಿದ ಕೂಡಲೆ ಕುಂಬಳದ ರಾಜಾ ರವಿವರ್ಮನೂ ಕರ್ನಲ್ ಗ್ರೀನನ ನಾಯಕತ್ವದಲ್ಲಿ ಸ್ವಲ್ಪ ಸೈನ್ಯವನ್ನು ಮಂಗಳೂರಿಗೆ ಕಳಿಸಿದನು. ಮುಂಬೈ ಕಡೆಯಿಂದಲೂ ಸೈನ್ಯವು ಬಂದಿತು. ೧೮೩೭ ಎಪ್ರಿಲ್ ೧೬ರ ಸುಮಾರಿಗೆ ಬ್ರಿಟಿಶ್ ಅಧಿಕಾರಿಗಳೆಲ್ಲ ಕಲೆತು ವಿಚಾರ ಮಾಡಿ ೧೫೦ ಸಿಪಾಯಿಗಳ ನಾಯಕತ್ವದಲ್ಲಿ ಬಂಟವಾಳದ ಹತ್ತಿರ ಆಂಗ್ಲರು ಬೀಡುಬಿಟ್ಟರು. ಮೇಜರ ಏವಲೆಸ್ಟ ಎಂಬುವವನು ಮುಂಬೈಯಿಂದ ಅಲ್ಲಿಗೆ

ಬಂದು ಸೇರಿದ. ಎಪ್ರಿಲ್ ೨೯ನೆಯ ದಿನ ಮೇಜರ್ ಗ್ರೀನನ ನಾಯಕತ್ವದಲ್ಲಿ ಈ ಎಲ್ಲ ಸೈನ್ಯವು ಯಾವ ಅಡ್ಡಿ ಆತಂಕಗಳಿಲ್ಲದೆ ಬಕ್ಕಾರಪೇಟೆಗೆ ಬಂದಿತು. ಕೊಡಗಿನ ಜನರು ಬಂಡುಗಾರರಿಗೆ ಕೂಡಿಕೊಳ್ಳಲಿಲ್ಲವಾದ್ದರಿಂದ ಅಪರಂಪರ ಸ್ವಾಮಿಗೆ ಇಲ್ಲಿ ತುಂಬಾ ತೊಂದರೆಯಾಯಿತು. ಅವನ ಬಂಧನದಲ್ಲಿದ್ದ ಹುಜೂರ ಶಿರಸ್ತೆದಾರ ದೇವಪ್ಪನನ್ನೂ ಡಾ. ಪಾಮರ ಹಾಗೂ ಅವರ ಕುಟುಂಬದ ಜನರನ್ನೂ ಕೊಡಗಿನ ದಿವಾಣ ಬೋಪನ್ ಎಂಬುವವನು ಬಿಡುಗಡೆ ಮಾಡಿಸಿದನು. ಅಪರಂಪರಸ್ವಾಮಿಯನ್ನು ಬಂಧಿಸದೆ ತನಗೆ ಯಶಸ್ಸು ಸಾಧ್ಯವಿಲ್ಲವೆಂದು ಅರಿತು ಲೂವೆನ್ ಒಂದು ಪ್ರಕಟನೆಯನ್ನು ಹೊರಡಿಸಿ ಅವನನ್ನೂ ಅವನ ಸಹಾಯಕರನ್ನೂ ಹಿಡಿದುಕೊಟ್ಟವರಿಗೆ ೧೦,೦೦೦ ರೂಪಾಯಿಗಳ ಬಹುಮಾನವನ್ನು ಸಾರಿದನು. ೧೩-೫-೧೮೩೭ನೆಯ ದಿನ ಅಪರಂಪರಸ್ವಾಮಿ ಹಾಗೂ ಅವನ ಸಂಗಡಿಗರು ಬ್ರಿಟಿಶರ ಕೈಗೆ ಸಿಕ್ಕರು. ಈ ಕಾರ್ಯಸಿದ್ಧಿಗೂ ಬಂಡಾಯವನ್ನು ಸಂಪೂರ್ಣ ಸುಟ್ಟು ಹಾಕಲಿಕ್ಕೂ ಕಾರಣನಾದವನು ದಿವಾಣ ಬೋಪಣ್ಣನೆ; ಕೊಡಗಿನ ಸೈನ್ಯವೂ ಕಾರಣವಾಯಿತು. ದಕ್ಷಿಣಕನ್ನಡ ಜಿಲ್ಹೆಯಲ್ಲೆಲ್ಲ ಹಬ್ಬಿ ನೆರೆಹೊರೆಯ ಪ್ರಾಂತಗಳಿಗೂ ಪಸರಿಸಬಹುದಾಗಿದ್ದ ಈ ಭಯಂಕರ ವಿಪ್ಲವವನ್ನು ಆರು ವಾರಗಳಲ್ಲಿ ಹತ್ತಿಕ್ಕಲಾಯಿತು. ದಿವಾಣ ಬೋಪನ್ ಮತ್ತು ಅವನ ಪಕ್ಷದವರಿಗೆ ಬಂಡಾಯಗಾರರಿಂದ ವಶಪಡಿಸಿಕೊಂಡ ಭಂಡಾರವನ್ನೆಲ್ಲ ಬಹುಮಾನವಾಗಿ ಕೊಡಲಾಯಿತು.

ಈ ರೀತಿಯಾಗಿ ಬ್ರಿಟಿಶರ ವಿರುದ್ಧ ಮಂಗಳೂರು ಹಾಗೂ ಕೊಡಗುಗಳಲ್ಲಿ ೧೮೩೭ರಲ್ಲಿ ಪ್ರಜ್ವಲಿಸಿದ ಒಂದು ಭಯಂಕರ ಕ್ರಾಂತಿಯು ನಂದಿಹೋಯಿತು. ಬ್ರಿಟಿಶರ ದಾಸ್ಯದ ನೊಗವನ್ನು ಎತ್ತಿ ಒಗೆಯುವದೆ ಇದರ ಮುಖ್ಯ ಉದ್ದೇಶವಾಗಿದ್ದಿತೆಂದೂ ಸರಕಾರಿ ಹಣದ ಹೊರತಾಗಿ ಈ ಕ್ರಾಂತಿಕಾರರು ಅಂದಿನ ಖಾಸಗಿ ಆಸ್ತಿಪಾಸ್ತಿಗಳ ಲೂಟಿಯನ್ನು ಎಂದೂ ಮಾಡಲಿಲ್ಲವೆಂದೂ ಬ್ರಿಟಿಶ್ ಅಧಿಕಾರಿಗಳೇ ಒಪ್ಪಿದ್ದಾರೆ. ಅಪರಂಪರಸ್ವಾಮಿಗೆ ಜನರು ಕೊಟ್ಟ ಸಹಾಯ ಮತ್ತು ನೀಡಿದ ಬೆಂಬಲವನ್ನು ಕಂಡು ಬ್ರಿಟಿಶರಿಗೆ ಪರಮಾಶ್ಚರ್ಯವಾಯಿತು. ಕಬ್ಬನ್ ಸಾಹೇಬನು ಹೀಗೆ ತನ್ನ ವರದಿಯಲ್ಲಿ ಹೇಳಿದ್ದಾನೆ :—

"ಈ ಒಳಸಂಚನ್ನು ಯಾರು ಮತ್ತು ಹೇಗೆ ನಡೆಸಿದರೆಂಬ ಬಗ್ಗೆ ಹೆಚ್ಚಿನ ಸಂಶೋಧನೆಯನ್ನು ನಡೆಸುವದು ಈಗ ಪ್ರಸ್ತುತವಾಗಲಾರದು. ಆದರೆ ಬ್ರಿಟಿಶ್ ಸರಕಾರದ ವಿರುದ್ಧ ಜಿಲ್ಹೆಯ ಜನರು ಇಷ್ಟು ದೊಡ್ಡ ಪ್ರಮಾಣ

ದಿಂದ ಹೇಗೆ ಒಟ್ಟುಗೂಡಿ ಬಂಡಾಯವನ್ನು ಹೂಡಿದರು ಎಂಬ ಪ್ರಶ್ನೆಗೆ ಈಗ ಮಹತ್ವವು ಬಂದಿದೆ. ಎಷ್ಟೋ ಕಾಲ ಕಂಪನಿಯ ಪ್ರತ್ಯಕ್ಷ ಆಳಿಕೆಗೆ ಒಳಪಟ್ಟ ಈ ಜಿಲ್ಲೆಯಲ್ಲಿ ಶಾಂತಿಯುತ ಜೀವನವನ್ನು ನಡೆಸುತ್ತ ಬಂದಿದ್ದ ಒಕ್ಕಲಿಗರು ಸಹ ಸರಕಾರದ ಮೇಲೆ ಇಷ್ಟೊಂದು ಉತ್ಸುಕತೆಯಿಂದ ಶಸ್ತ್ರವನ್ನೆತ್ತಿದ್ದು ಆಶ್ಚರ್ಯ."

ಈ ಬಂಡಾಯವನ್ನು ಕುರಿತು ೧೮೪೧ರಲ್ಲಿ ವರದಿಮಾಡಿದ ಬ್ಲೆಯರನು ಸಹ ಅಪರಂಪರಸ್ವಾಮಿಗೆ ಜನತೆಯ ಬೆಂಬಲವು ಅಪಾರವಾಗಿದ್ದಿತೆಂದೂ ಜನರು ತಾವಾಗಿಯೇ ಅವನ ಧ್ವಜವಡಿಗೆ ನೆರೆಯುತ್ತಿದ್ದರೆಂದೂ ಹೇಳಿದ್ದಾನೆ.

# ಹದಿನಾರನೆಯ ಅಧ್ಯಾಯ

## ಸುರಪುರದ ವೆಂಕಟಪ್ಪನಾಯಕ

**೧೮೫೭-೫೮**

**ಸು**ರಪುರ ವೆಂಕಟಪ್ಪನಾಯಕನ ಮುಖಂಡತ್ವದಲ್ಲಿ ಇಡಿಯ ಕರ್ನಾಟಕ ಮತ್ತು ದಕ್ಷಿಣ ಹಿಂದುಸ್ತಾನದಲ್ಲಿ ಬ್ರಿಟಿಶರ ವಿರುದ್ಧ ಬಂಡಾಯವನ್ನು ಎಬ್ಬಿಸುವ ಪ್ರಯತ್ನಗಳು ೧೮೫೭ರಲ್ಲಿ ನಡೆದವು. ಉತ್ತರ ಹಿಂದುಸ್ತಾನದಲ್ಲಿ ಇದ್ದಷ್ಟು ಅರಾಜಕತೆಯು ದಕ್ಷಿಣದಲ್ಲಿ ಇರಲಿಲ್ಲ; ಹೈದರಾಬಾದ ನಿಜಾಮನು ಬ್ರಿಟಿಶರಿಗೆ ಅನನ್ಯಭಾವದಿಂದ ಸಹಾಯಮಾಡಿ ತಾನೂ ಕೊನೆಯವರೆಗೆ ಬ್ರಿಟಿಶರಿಗೆ ಏಕನಿಷ್ಠನಾಗಿಯೇ ಉಳಿದನು. ಈ ಕಾರಣಗಳ ಮೂಲಕ ತಮ್ಮ ರಾಜ್ಯವನ್ನು ದಕ್ಷಿಣದಲ್ಲಿ ಕಾಪಾಡಿಕೊಳ್ಳುವದು ಬ್ರಿಟಿಶರಿಗೆ ಸಾಧ್ಯವಾಯಿತು. ನಿಜಾಮನು ಬಂಡಾಯದಲ್ಲಿ ಸೇರುವ ಆಶೆಯೇ ಇರಲಿಲ್ಲ; ಅತ್ತ ಮೈಸೂರ ಅರಸೊತ್ತಿಗೆಯನ್ನೂ ತಾತ್ಕಾಲಿಕವಾಗಿ ಪದಚ್ಯುತಿಗೊಳಿಸಿ ಇಂಗ್ಲೀಷರೇ ರಾಜ್ಯಕಾರಭಾರವನ್ನು ಮಾಡುತ್ತಿದ್ದ ಮೂಲಕ ಮೈಸೂರಿನಲ್ಲಿ ಕೂಡ ಬಂಡಾಯಗಾರರಿಗೆ ಯಾವ ಆಸ್ಪದವೂ ದೊರೆಯಲಿಲ್ಲ.

ಆದ್ದರಿಂದ ಬ್ರಿಟಿಶರ ಅನ್ಯಾಯ ಮತ್ತು ರಾಜ್ಯಲಾಲಸೆಗಳ ವಿರುದ್ಧ ಬಂಡನ್ನೆಬ್ಬಿಸಬೇಕೆನ್ನುವ ಅನೇಕ ರಾಜರು-ಜಮೀನದಾರರಲ್ಲಿ ಸುರಪುರ ವೆಂಕಟಪ್ಪನಾಯಕನೇ ದೊಡ್ಡವನಾಗಿದ್ದನು. ನರಗುಂದ, ಮುಂಡರಗಿ, ಆನೆಗುಂದಿಗಳಲ್ಲಿಯ ಎಲ್ಲ ಭೂ-ಒಡೆಯರೂ ಸುರಪುರವನ್ನು ಬಂಡಾಯದಲ್ಲಿ ನೂಕಿದರೆ ಬಂಡಾಯಕ್ಕೆ ಒಂದು ವ್ಯಾಪಕತೆ ಹಾಗೂ ಪ್ರಖರತೆ ಬರುವದೆಂದು ಕಂಡುಹಿಡಿದಿದ್ದರು. ವೆಂಕಟಪ್ಪನಾಯಕನ ಬೆಂಬಲವಾಗಿ ೧೨,೦೦೦ ಬೇಡರ ಒಂದು ೃವಿದ್ದದ್ದು ಎಲ್ಲರಿಗೂ ಗೊತ್ತಿತ್ತು. ಇದರಿಂದ ಬಂಡುಗಾರರು ವೆಂಕಟಪ್ಪನಾಯಕನನ್ನು ತಮ್ಮ ಕಡೆಗೆ ಒಡೆಸಿಕೊಳ್ಳಲು ವಿಶ್ವಪ್ರಯತ್ನ ಮಾಡಿದರು

ದಕ್ಷಿಣ ಭಾರತದಲ್ಲಿ ಸುರಪುರ ರಾಜ್ಯಕ್ಕೆ ಬಹಳ ಮಹತ್ವವಿದೆ ಎಂಬುದು ನಾನಾ ಸಾಹೇಬನಿಗೆ ಸಹ ಗೊತ್ತಿತ್ತು. ವೆಂಕಟಪ್ಪನಾಯಕನಿಗೆ ನಾನಾಸಾಹೇಬನು ಮೇಲಿಂದ ಮೇಲೆ ಗುಪ್ತಚಾರರ ಮುಖಾಂತರ ಸಂದೇಶವನ್ನು ಕಳಿಸುತ್ತಿದ್ದನೆಂದು ಬ್ರಿಟಿಷರು ತುಂಬಾ ಸಂಶಯಪಟ್ಟುಕೊಂಡಿದ್ದರು.

ಸುರಪುರವು ಬೇಡರ ನಾಡು. ಮುಧೋಳದ ಹತ್ತಿರವಿದ್ದ ಹಲಗಲಿಯವರೆಗೆ ಅನೇಕ ಹಳ್ಳಿಗಳಲ್ಲಿ ಈ ಬೇಡರ ಗುಂಪುಗಳು ನೆಲೆಸಿವೆ. ಸುರಪುರದ ರಾಜರೂ ಬೇಡರೇ. ವೆಂಕಟಪ್ಪನಾಯಕನ ಪೂರ್ವಜರು ಮೂಲತಃ ಮೈಸೂರ ಸಂಸ್ಥಾನದಲ್ಲಿಯ ರತ್ನಗಿರಿಯವರು. ಮೂರುನಾಲ್ಕುನೂರು ವರ್ಷಗಳ ಹಿಂದೆ ವಿಜಯನಗರದ ಅರಸರು ತಮ್ಮ ಗಡಿಗಳ ಭದ್ರತೆಯ ಸಲುವಾಗಿ ರತ್ನಗಿರಿಯ ಬೇಡರಿಗೆ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಪ್ರದೇಶವನ್ನು ಜಹಾಗೀರು ಹಾಕಿ ಕೊಟ್ಟರು. ವೆಂಕಟಪ್ಪನಾಯಕನ ಪೂರ್ವಜರು ಸುರಪುರವನ್ನು ಸ್ಥಾಪಿಸಿ ಸುತ್ತಲಿನ ನಾಡಿನಲ್ಲಿ ತಮಗೆ ಇಷ್ಟವಿದ್ದಂತೆ ಕೋಟೆ ಕೊತ್ತಲಗಳನ್ನು ಕಟ್ಟಿಸಿಕೊಂಡು ರಾಜ್ಯದ ಪ್ರಾರಂಭವನ್ನು ಮಾಡಿದರು. ಶೂರ-ಪುರವೇ ಮುಂದೆ ಸುರಪುರವಾಯಿತು. ಸುರಪುರದ ರಾಜರು ಮತ್ತು ಪ್ರಜರೂ ಅತ್ಯಂತ ಶೂರರಾಗಿದ್ದರು. ಶೂರರಾಗಿದ್ದಷ್ಟು ಅವರು ಸ್ವಾತಂತ್ರ್ಯ ಪ್ರಿಯರೂ ಆಗಿದ್ದರು. ವಿಜಯನಗರದ ಮಾಂಡಲೀಕರಾಗಿದ್ದಾಗ ಸುರಪುರದ ಅರಸರು ಪಶ್ಚಿಮದಲ್ಲಿರುವ ವಾಗನಗೇರಿ ಎಂಬಲ್ಲಿ ಒಂದು ಭದ್ರವಾದ ಕೋಟೆಯನ್ನು ಕಟ್ಟಿಕೊಂಡು ಇರುತ್ತಿದ್ದರು. ವಿಜಯನಗರವು ಅಳಿದ ಮೇಲೆ ಸುರಪುರ ರಾಜರು ಬಹಮನಿ ರಾಜ್ಯದ ಮಾಂಡಲೀಕರಾದರು. ವಿಜಾಪೂರ ಅರಸರು ಸುರಪುರ ವೆಂಕಟಪ್ಪನಾಯಕನ ಪೂರ್ವಜರ ಬಗ್ಗೆ ಪ್ರಸನ್ನರಾಗಿ ತಮ್ಮ ದರ್ಬಾರದಲ್ಲಿ ಅವರನ್ನು ಸರದಾರರ ದರ್ಜೆಗೆ ಏರಿಸಿದರು. ೧೬೮೬ರಲ್ಲಿ ಔರಂಗಜೇಬನು ವಿಜಾಪೂರವನ್ನು ಆಕ್ರಮಿಸಿ ವಾಗನಗೇರಿ ಕೋಟೆಯ ಮೇಲೆ ಉಗ್ರವಾದ ದಾಳಿಯನ್ನು ಮಾಡಿದನು. ಸುರಪುರ ರಾಜರ ಶೌರ್ಯಕ್ಕೆ ಆಲಮಗೀರನು ಮನಸೋತು ಬಿಟ್ಟನು. ದಿಲ್ಲಿದರ್ಬಾರಕ್ಕೆ ನೀನು ಬರಲೇಬೇಕೆಂದು ಔರಂಗಜೇಬ ಬಾದಶಹನು ಸುರಪುರ ಅರಸನನ್ನು ಅತ್ಯಂತ ಆಗ್ರಹದಿಂದ ಕರೆದನು. ಬೇಡರ ರಾಜನು ಹೋಗಲು ನಿರಾಕರಿಸಿದನು. "ನೀನು ಮುಸಲ್ಮಾನನಾಗಿದ್ದರೆ ನಿನ್ನನ್ನು ನಾನು ಒಡಹುಟ್ಟಿದ ತಮ್ಮನಂತೆ ಕಾಣುತ್ತಿದ್ದೆ," ಎಂದು ಔರಂಗಜೇಬನು ಸುರಪುರದ ಅರಸನಿಗೆ ಪತ್ರ ಬರೆದು ಗಂಧದಲ್ಲಿ ತನ್ನ

ಹಸ್ತದ ಮುದ್ರೆಯನ್ನೊತ್ತಿ ಕಳುಹಿಸಿಕೊಟ್ಟಿದ್ದನು.[1] ಈ ಅರಸನ ಹೆಸರು ಪಾಮನಾಯಕನೆಂದಿದ್ದು ಇವನ ಮೇಲೆ ಛತ್ರಪತಿ ಶಿವಾಜಿ ಮಹಾರಾಜರ ಪ್ರಭಾವವು ಬಹಳವಿತ್ತು. ಕೊನೆಗೆ ಔರಂಗಜೇಬನು ಎರಡನೆಯಸಲ ಮುತ್ತಲು ತನ್ನ ಕೋಟೆಯನ್ನು ಖಾಲೀಮಾಡಿ ಪಾಮನಾಯಕನು ಸುರಪುರಕ್ಕೆ ಬಂದು ನಿಂತನು. ಮುಂದೆ ಮೊಗಲ ಸಮ್ರಾಟನಿಗೂ ಪಾಮನಾಯಕನಿಗೂ ವಿಶೇಷ ಸ್ನೇಹವು ಬೆಳೆದು ಪಾಮನಾಯಕನಿಗೆ ಔರಂಗಜೇಬನು ಸೇನಾಪತಿ ಬಿರುದನ್ನು ದಯಪಾಲಿಸಿದನು. ವಿಜಾಪೂರ ಅರಸರು ಕೊಟ್ಟ ಜಹಗೀರುಗಳನ್ನು ಬಿಟ್ಟು ಹೆಚ್ಚಿನ ಮತ್ತೆ ಎಷ್ಟೋ ವಿಶಾಲ ಪ್ರದೇಶಗಳ ಜಹಗೀರನ್ನೂ ಪಾಮನಾಯಕನಿಗೆ ಔರಂಗಜೇಬನು ಹಾಕಿಕೊಟ್ಟನು.

ಮುಂದೆ ಮೊಗಲರಿಗೂ ಅಳಿಗಾಲವು ಬಂದಿತು. ಸುರಪುರದ ಅರಸರು ಪೇಶ್ವೆಯರಿಗೆ ವಿಶೇಷ ಅಧೀನರಾಗಿ ನಡೆಯಲೆ ಇಲ್ಲ. ಇವರ ಶೌರ್ಯದ ಕೀರ್ತಿಯನ್ನು ಕೇಳಿದ ಅವರು ಹೆಚ್ಚಾಗಿ ಈ ಬೇಡನಾಯಕನ ಗೊಡವೆಗೂ ಹೋಗಲಿಲ್ಲ. ಮುಂದೆ ೧೭೭೫ರಲ್ಲಿ ನಿಜಾಮ ಮತ್ತು ಪೇಶ್ವೆಯರು ಯಾತಗಿರಿಯಲ್ಲಿ ಒಪ್ಪಂದ ಮಾಡಿಕೊಂಡಾಗ ನಿಜಾಮನಿಗೆ ೫೦,೦೦೦ ರೂಪಾಯಿ ಕಪ್ಪ ಕೊಡಲು ಸುರಪುರದ ಅರಸರು ಒಪ್ಪಿಕೊಂಡರು. ಆಗಿನ ಕಾಲಕ್ಕೆ ಸುರಪುರ ರಾಜ್ಯದ ಆದಾಯವು ಇಪ್ಪತ್ತರಿಂದ ಮೂವತ್ತು ಲಕ್ಷದಷ್ಟಿತ್ತು. ಯುರೋಪಿಯನ್ ಸೇನಾಪತಿಗಳಿಂದ ತರಬೇತಿ ಹೊಂದಿದ ಎರಡು ಒಳ್ಳೆ ಶಿಸ್ತಿನ ಸಿಪಾಯಿ ಪಡೆಗಳೂ ೧೨,೦೦೦ ಬೇಡರ ಒಂದು ದಲವೂ ಸುರಪುರದಲ್ಲಿದ್ದವು. ಹೈದರ ಅಲಿ ಮತ್ತು ಟಿಪ್ಪೂಸುಲ್ತಾನರು ಸುರಪುರ ನಗರದ ಗೊಡವೆಗೆ ಕೊನೆಯವರೆಗೂ ಬರಲಿಲ್ಲ. ಆಗ ೧೮೫೭ರಲ್ಲಿ ಬಂಡಾಯ ಹೂಡಿದ ವೆಂಕಟಪ್ಪನಾಯಕನ ಅಜ್ಜ ವೆಂಕಟಪ್ಪನಾಯಕನು ಸುರಪುರದ ರಾಜನಾಗಿದ್ದ. ಈ ಮೊದಲನೆಯ ವೆಂಕಟಪ್ಪನಾಯಕನು ಸುರಪುರದಲ್ಲಿ ಒಂದು ಸಂಸ್ಕೃತ ಪಾಠಶಾಲೆಯನ್ನು

1. ಈ ಔರಂಗಜೇಬನ ಹಸ್ತಮುದ್ರೆಯು ೧೮೫೭ರ ಬಂಡಾಯದಲ್ಲಿ ನಡೆದ ವೆಂಕಟಪ್ಪ ನಾಯಕನ ಅರಮನೆಯ ಲೂಟಿಯಲ್ಲಿ ನಷ್ಟವಾಯಿತು. ಔರಂಗಜೇಬನು ಪಾಮ ನಾಯಕನ ಸಹಾಯದಿಂದ ವಿಜಾಪುರದ ಅರಸರನ್ನು ಸೋಲಿಸಿದನೆಂದೂ ಪಾಮ ನಾಯಕನ ಅರಮನೆಗೆ ಔರಂಗಜೇಬನು ಬಂದು ಪ್ರಸನ್ನನಾಗಿ ಸುತ್ತಲಿನ ಪ್ರದೇಶಕ್ಕೆಲ್ಲ ನೀನೆ ಒಡೆಯನೆಂದು ತನ್ನ ಎಡಹಸ್ತದ ಮುದ್ರೆಯನ್ನೊತ್ತಿ ಈ ಸನದನು ಕೊಟ್ಟಿದ್ದನೆಂದೂ ಹೇಳುತ್ತಾರೆ. —ಮಿಂಚಿನ ಬಳ್ಳಿ, ೩೦೯.

ಸ್ಥಾಪಿಸಿ ಹಿಂದು ವೇದ-ಶಾಸ್ತ್ರಗಳ ಅಭ್ಯಾಸಕ್ಕೆ ಸಾಕಷ್ಟು ಪ್ರೋತ್ಸಾಹನ ಕೊಟ್ಟನು. ಇವನ ಸೈನ್ಯ ಮತ್ತು ಆಡಳಿತಗಳ ಶಿಸ್ತೂ ವಿಶೇಷ ಚೆನ್ನಾಗಿತ್ತು.

ಮೊದಲನೆಯ ವೆಂಕಟಪ್ಪನಾಯಕನು ತೀರಿಕೊಂಡ ಕೂಡಲೆ ಅವನ ಮಗ ಕೃಷ್ಣಪ್ಪನಾಯಕನಿಂದ ನಿಜಾಮನು ನಜರಾಣಾ ಬೇಡಹತ್ತಿದನು. ಹದಿನೈದು ಲಕ್ಷರೂಪಾಯಿ ಬಹಳಲ್ಲವೆಂದು ಇಂಗ್ಲೀಷರು ಧ್ವನಿಗೂಡಿಸಿದರು. ಮಾಂಡಲೀಕರಿಂದ ವಸೂಲಾಗುವವರೆಗೆ ನಿಜಾಮನು ಕಂಪನಿಸೈನ್ಯದ ಖರ್ಚು ಕೊಡುತ್ತಿರಲಿಲ್ಲ. ಕೃಷ್ಣಪ್ಪನಾಯಕನು ಸಾಲಮಾಡಿ ನಿಜಾಮನಿಗೆ ಕೊಡುವ ಪ್ರಸಂಗವು ಬಂದಿತು. ಸಂಸ್ಥಾನಕ್ಕೆ ಆಳಿಗಾಲವು ಸುರುವಾಯಿತು. ಇಂಗ್ಲೀಷರ ಚಾಣಕ್ಯ ನೀತಿಯೂ ಪ್ರಾರಂಭವಾಯಿತು. ಈ ಋಣದಿಂದ ಕೃಷ್ಣಪ್ಪನಾಯಕ ಕೊನೆವರೆಗೆ ಮುಕ್ತನಾಗದೆ ೧೮೪೧ರ ಸುಮಾರಿಗೆ ತೀರಿಕೊಂಡಾಗ ಸುರಪುರರಾಜ್ಯವು ತುಂಬಾ ಹಣದ ತೊಂದರೆಯಲ್ಲಿತ್ತು.

ಕೃಷ್ಣಪ್ಪನಾಯಕನ ಮಗನೇ ಬಂಡುಗಾರ ವೆಂಕಟಪ್ಪನಾಯಕನು; ವೆಂಕಟಪ್ಪನಾಯಕನು ತಂದೆ ತೀರಿದಾಗ ಏಳು ವರ್ಷದವನಾಗಿದ್ದನು. ಇಂಗ್ಲೀಷರು ಮತ್ತು ನಿಜಾಮ ಇವರ ಸುಲಿಗೆಯಿಂದ ಖಜಾನೆಯೆಲ್ಲ ಬರಿದಾಗಿತ್ತು. ವೆಂಕಟಪ್ಪನಾಯಕನ ತಾಯಿ ಈಶ್ವರಮ್ಮನು ಇಂಗ್ಲೀಷರ ಮೇಲೆ ಬಹಳ ಸಿಟ್ಟಾಗಿದ್ದಳು. ಇಂಗ್ಲೀಷರು ಎಷ್ಟು ಪ್ರಯತ್ನ ಮಾಡಿದರೂ ಅವರ ಕೈಯಲ್ಲಿ ರಾಣಿ ಈಶ್ವರಮ್ಮನು ರಾಜ್ಯಸೂತ್ರಗಳನ್ನು ಎಷ್ಟೋ ದಿನ ಕೊಡದೆ ತಾನೇ ನಿರ್ವಹಿಸುತ್ತಿದ್ದಳು.

ದಿವಂಗತ ಕೃಷ್ಣಪ್ಪನಾಯಕನಿಗೆ ಪೆದ್ದನಾಯಕನೆಂಬ ಓರ್ವ ತಮ್ಮನಿದ್ದನು. ಅಲ್ಪವಯಿ ವೆಂಕಟಪ್ಪನಾಯಕನ ಅಸಹಾಯತೆ ನೋಡಿ ಕಕ್ಕನಿಗೆ ರಾಜ್ಯಲಾಲಸೆಯುಂಟಾಯಿತು. ಸುರಪುರ ಅರಸರು ಒಂದುವೇಳೆ ಕಪ್ಪ ಕೊಡಲು ತಪ್ಪಿದರೆ ಸಹಾಯಮಾಡಬೇಕೆಂದು ನಿಜಾಮನು ೧೮೦೦ರಲ್ಲಿ ಇಂಗ್ಲೀಷರೊಡನೆ ಒಪ್ಪಂದ ಮಾಡಿಕೊಂಡಿದ್ದನು. ಹಾಗೂ ಹೀಗೂ ಕೃಷ್ಣಪ್ಪನಾಯಕನ ಕಡೆಯಿಂದ ಹದಿನೈದು ಲಕ್ಷರೂಪಾಯಿಗಳನ್ನು ವಸೂಲು ಮಾಡಿಯಾಗಿತ್ತು. ಸುರಪುರ ಅರಸರಿಗೆ ಅಲ್ಲಿಯ ಸಾವುಕಾರರು ಇಂಗ್ಲೀಷರ ಜಾಮೀನಿನ ಮೇಲೆ ಹಣವನ್ನು ಕೊಟ್ಟಿದ್ದರು. ಈ ಹಣದ ವಸೂಲಿಗೆಂದು ಕೃಷ್ಣಪ್ಪನಾಯಕನಿರುವಾಗಲೆ ಇಂಗ್ಲೀಷರು ಆಡಳಿತದಲ್ಲಿ ಕೈಹಾಕಹತ್ತಿದರು.

ಕೃಷ್ಣಪ್ಪನಾಯಕನು ತೀರಿಕೊಂಡ ಮೇಲೆ ಪೆದ್ದನಾಯಕನನ್ನು ಇಂಗ್ಲೀ

ಷರು ಎಬ್ಬಿಸಿಕೊಡ್ರಿಸಿದರು. ಇದರಿಂದ ರಾಜಕುಮಾರ ವೆಂಕಟಪ್ಪನಾಯಕನ ಬೇಡರ ಅನುಯಾಯಿಗಳಲ್ಲಿ ಇಬ್ಬಣಗಳಾದವು. ಈ ಸಮಯಕ್ಕೆ ಮೆಡೋಜ್ ಟೇಲರ ಎಂಬ ಒಬ್ಬ ಚಾಣಾಕ್ಷ ಮತ್ತು ಹಿತಚಿಂತಕ ಆಂಗ್ಲ ಸಲಹೆಗಾರನು ಸುರಪುರಕ್ಕೆ ಬಂದು ರಾಜಕುಮಾರನ ಪಾಲಕತ್ವವನ್ನು ವಹಿಸಿಕೊಳ್ಳದಿದ್ದರೆ ಪೆದ್ದನಾಯಕನು ವೆಂಕಟಪ್ಪನಾಯಕನನ್ನು ನಾಶಮಾಡಿಯೇ ಬಿಡುತ್ತಿದ್ದ.

ಟೇಲರನಿಗೆ ರಾಜಕುಮಾರನ ವಿಷಯದಲ್ಲಿ ತುಂಬಾ ಕನಿಕರವುಂಟಾಯಿತು. ಪೆದ್ದನಾಯಕನ ಸ್ವಭಾವವು ಅವನಿಗೆ ಎಷ್ಟೂ ಮನಸ್ಸಿಗೆ ಬರಲಿಲ್ಲ. ಆದರೂ ಗವರ್ನರ್ ಜನರಲ್ಲರ ಇಚ್ಛೆಯಪ್ರಕಾರ ಕಡೆಗೆ ಪೆದ್ದನಾಯಕನನ್ನು ದಿವಾಣನೆಂದು ನೇಮಕ ಮಾಡಲೇಬೇಕಾಯಿತು. ನಿಜಾಮ ಇಲ್ಲವೆ ರೆಸಿಡೆಂಟ ಫ್ರೇಜರ್ ಇವರಲ್ಲಿ ಯಾರಿಗೂ ಸುರಪುರದ ಹಿತಚಿಂತನವಿರಲಿಲ್ಲ. ಅತ್ತ ಅರಮನೆಯಲ್ಲಿಯೂ ಸಾಕಷ್ಟು ಅವ್ಯವಸ್ಥೆಯಿತ್ತು. ಹೀಗಾಗಿ ವೆಂಕಟಪ್ಪನಾಯಕನು ರಾಜಕುಮಾರನಾಗಿದ್ದರೂ ಒಂದು ರೀತಿಯಲ್ಲಿ ಅನಾಥನಂತೆ ಪರದೇಶಿಯಂತೆಯೆ ಬೆಳೆಯತೊಡಗಿದನು. ಇಂಗ್ಲೀಷರ ಮೇಲೆ ಅವನಿಗೆ ಎಷ್ಟೂ ಪ್ರೀತಿ ವಿಶ್ವಾಸಗಳು ಉಳಿಯಲಿಲ್ಲ. ಈ ಪರಿಸ್ಥಿತಿಗೆ ಇಂಗ್ಲೀಷರೆ ಕಾರಣರೆಂಬುವನ್ನು ಅವನು ಚನ್ನಾಗಿ ತಿಳಿದುಕೊಂಡಿದ್ದನು. ನಿಜಾಮ ಮತ್ತು ಇಂಗ್ಲೀಷರ ನಡುವಿನ ಯಾವ ವ್ಯವಹಾರಗಳೂ ಅವನಿಗೆ ಸೇರಿಕೆಬಂದಿರಲಿಲ್ಲ. ಇಂಗ್ಲೀಷರು ಸುರಪುರ ಅರಸರನ್ನು ಗೌರವದಿಂದ ಕಾಣಲಿಲ್ಲವೆಂದು ಮೆಡೋಜ್ ಟೇಲರನೇ ಒಂದೆಡೆಗೆ ಹೇಳಿದ್ದಾನೆ.

೧೮೫೩ರಲ್ಲಿ ವೆಂಕಟಪ್ಪನಾಯಕನು ವಯಸ್ಸಿಗೆ ಬಂದನು. ಪೆದ್ದನಾಯಕನನ್ನು ಮೂಲೆಗೊತ್ತುವ ಉದ್ದೇಶದಿಂದ ಈ ಮೊದಲೆ ವೆಂಕಟಪ್ಪನಾಯಕನ ರಾಜ್ಯಾಭಿಷೇಕವಾಗಿಹೋಗಿತ್ತು. ಈಗ ಮೆಡೋಜ್ ಟೇಲರನ ಪಾಲಕತ್ವವನ್ನು ಕೊನೆಗೊಳಿಸಿ ವೆಂಕಟಪ್ಪನಾಯಕನಿಗೆ ರಾಜ್ಯಸೂತ್ರವನ್ನೊಪ್ಪಿಸುವ ಬಗ್ಗೆ ರೆಸಿಡೆಂಟ ಫ್ರೇಜರ್ ಮತ್ತು ಡಾಲಹೌಸಿಯ ನಡುವೆ ಪತ್ರವ್ಯವಹಾರವು ನಡೆಯಿತು. ೧೮೫೩ರಲ್ಲಿ ಸುರಪುರದ ಆರ್ಥಿಕ ಪರಿಸ್ಥಿತಿಯಲ್ಲಿ ತಕ್ಕಮಟ್ಟಿಗೆ ಸುಧಾರಣೆಯಾಗಿತ್ತು. ವೆಂಕಟಪ್ಪನಾಯಕನು, ತಾನು ಯಾಕೆ ವಯಸ್ಸಿಗೆ ಬಂದೆನೊ ಎಂದು ಮೆಡೋಜ್ ಟೇಲರನ ಮುಂದೆ ಗೋಳಾಡಿದ್ದಾನೆ. ಸೈನ್ಯವನ್ನೊಳಗೊಂಡು ಎಲ್ಲ ನೌಕರರ ಸಂಬಳಗಳು ಬಾಕಿ ಬಿದ್ದಿದ್ದವು. ಚಿಕ್ಕವನಾದ್ದರಿಂದ ಅರಸುಮನೆತನದ ಅವಿವೇಕಿ ಹಿರಿಯರಲ್ಲಿ ಅವನ ಮಾತು ಯಾರೂ ಕೇಳುತ್ತಿರ

ಲಿಲ್ಲ. ಪರಿಸ್ಥಿತಿಯು ಇಷ್ಟು ನಿರಾಶಾಜನಕವಿದ್ದಾಗ ೧೦-೩-೧೮೫೩ಕ್ಕೆ ಕಂಪನಿ ಸರಕಾರದಿಂದ ವೆಂಕಟಪ್ಪನಾಯಕನಿಗೆ ಪತ್ರವು ಬಂದಿತು. ವಯಸ್ಸಿಗೆ ಬಂದ ಮೂಲಕ ಅವನಿಗೆ ರಾಜ್ಯವನ್ನು ಬಿಟ್ಟುಕೊಡಬೇಕೆಂದೂ ಅವನು ವರ್ಷಕ್ಕೆ ೨೦,೦೦೦ ರೂಪಾಯಿಗಳನ್ನು ಖರ್ಚುಮಾಡಿ ಓರ್ವ ಬ್ರಿಟಿಶ್ ರಾಜಕೀಯ ಸಲಹೆಗಾರನನ್ನು ಇಟ್ಟುಕೊಳ್ಳಬೇಕೆಂದೂ ಡಾಲಹೌಸಿ ಆದೇಶವಿತ್ತನು. ವೆಂಕಟಪ್ಪನಾಯಕನಿಗೆ ಸಿಟ್ಟು ಬಂದಿತು. ಆರ್ಥಿಕ ತೊಂದರೆಗಳು ಗೊತ್ತಿದ್ದರೂ ಇಂಗ್ಲೀಷರು ಮತ್ತೂ ಸುಲಿಯಲು ಯತ್ನಿಸುತ್ತಿರುವರಲ್ಲ, ಎಂದುಕೊಂಡು ಹೈದರಾಬಾದ ರೆಸಿಡೆಂಟನಿಗೂ ಡಾಲಹೌಸಿಗೂ ವೆಂಕಟಪ್ಪನಾಯಕನು ಕಟುತರವಾಗಿ ಉತ್ತರ ಕೊಟ್ಟು ಈ ೨೦,೦೦೦ ರೂ. ಗಳ ವಾರ್ಷಿಕ ವೆಚ್ಚವು ತನ್ನಿಂದ ಶಕ್ಯವಿಲ್ಲವೆಂದು ಸ್ಪಷ್ಟವಾಗಿ ಬರೆದು ಕಳಿಸಿದ. ಇಬ್ಬರೂ ಸಾಹೇಬರು ಸಿಟ್ಟಾಗಿ ಹುಡುಗ ಬಹಳ ನಿಷ್ಠುರನಿದ್ದಾನೆ ಎಂದರು. ಆದರೆ ವೆಂಕಟಪ್ಪನಾಯಕನನ್ನು ಕಾಯದೆಪ್ರಕಾರ ಒತ್ತಾಯಪಡಿಸಲು ಬರುವಂತಿರಲಿಲ್ಲ. ಡಾಲಹೌಸಿಯು ಪ್ರಕರಣವನ್ನು ಅಲ್ಲಿಗೆ ನಿಲ್ಲಿಸಿದನು. ರಾಜ್ಯವು ವೆಂಕಟಪ್ಪನಾಯಕನ ಕೈಸೇರಿ ಮೆಡೋಜ್ ಟೇಲರನು ವರ್ಹಾಡಕ್ಕೆ ಹೊರಟು ಹೋದನು.

೧೮೫೭ನೆಯ ವರುಷ ಉದಯಿಸಿತು. ಉತ್ತರಹಿಂದುಸ್ತಾನದಲ್ಲಿಯ ಭೀಕರ ಘಟನೆಗಳ ವಾರ್ತೆ ವೆಂಕಟಪ್ಪನಾಯಕನಿಗೂ ಮುಟ್ಟಿತು. ಅವನ ವಯಸ್ಸು ಆಗ ಇಪ್ಪತ್ತುನಾಲ್ಕು ಪೂರ್ತಿಯಾಗಿರಲಿಲ್ಲ. ಮೆಡೋಜ್ ಟೇಲರನು ನಿವೃತ್ತನಾಗಿ ಹೋಗಿ ನಾಲ್ಕು ವರ್ಷಗಳಾಗಿದ್ದವು. ಆರ್ಥಿಕ ಅವ್ಯವಸ್ಥೆಯ ಮೂಲಕ ರಾಜ್ಯಭಾರವನ್ನು ಹೊರಲಾರದೆ ವೆಂಕಟಪ್ಪನಾಯಕನು ಬೇಸತ್ತು ಉದಾಸೀನನಾಗಿಬಿಟ್ಟಿದ್ದನು. ತನ್ನ ಈ ಪರಿಸ್ಥಿತಿಗೆ ಇಂಗ್ಲೀಷರೆ ಕಾರಣರೆಂದು ಅವನು ತಿಳಿದಿದ್ದನು. ನಿಜಾಮನಿಂದಲೂ ಇಂಗ್ಲೀಷರಿಂದಲೂ ಒಮ್ಮೆ ಸ್ವತಂತ್ರನಾಗಿ ಬಿಡಬೇಕೆಂಬ ವಿಚಾರವು ವೆಂಕಟಪ್ಪನಾಯಕನ ತಲೆಯಲ್ಲಿ ಸುಳಿಯತೊಡಗಿತು. ಸುರಪುರದಲ್ಲಿ ಆಗ ಕಂಪನಿ ಸೈನ್ಯವಿರಲಿಲ್ಲ. ಆಗಸ್ಟ ೧೮೫೭ರಲ್ಲಿಯೇ ಹೈದರಾಬಾದ ರೆಸಿಡೆಂಟನಿಗೆ ವೆಂಕಟಪ್ಪನಾಯಕನ ಬಗ್ಗೆ ಸಂಶಯವು ಬರತೊಡಗಿತು. ಅರಬ ಮತ್ತು ರೊಹಿಲಾ ಸೈನಿಕರು ಹೆಚ್ಚುಹೆಚ್ಚಾಗಿ ಸುರಪುರಕ್ಕೆ ಹೋಗತೊಡಗಿದರು. ಬೆಳಗಾವಿಯಲ್ಲಿ ಇದೇ ಸಮಯಕ್ಕೆ ಮಹಿಪಾಲಸಿಂಗ ಬಿನ್ ಜವಾಹರಸಿಂಗ ಎಂಬ ವ್ಯಕ್ತಿಯೊಬ್ಬನು ಓರ್ವ ಜಮಾದಾರನೊಡನೆ ಮಾತನಾಡುವಾಗ ಅಧಿಕಾರಿಗಳ ಕೈಗೆ ಸಿಕ್ಕುಬಿದ್ದನು. ವೆಂಕಟಪ್ಪನಾಯಕನು ತನ್ನನ್ನು

ಕಳಿಸಿರುವನೆಂದೂ ೨೯ನೆಯ ಕಾಲ್ದಳದ ಸಿಪಾಯಿಯರನ್ನು ಬಂಡಾಯಕ್ಕೆ ಹುರಿದುಂಬಿಸುವದೆ ತನ್ನ ಸಂಚಾರದ ಉದ್ದೇಶವಾಗಿತ್ತೆಂದೂ ಮಹಿಪಾಲಸಿಂಗನು ತನ್ನ ಜವಾಬಿನಲ್ಲಿ ಹೇಳಿದ್ದಾನೆ. ಹೈದರಾಬಾದದಿಂದ ಬೆಳಗಾವಿಯವರೆಗೆ ಎಲ್ಲ ಸಿಪಾಯಿಠಾಣ್ಯಗಳಲ್ಲಿಯೂ ಇದರಿಂದ ಉದ್ವೇಗವುಂಟಾಯಿತು. ಕೊಲ್ಹಾಪೂರದ ೨೭ನೆಯ ಕಾಲ್ದಳವು ಅದೇ ಬಂಡಾಯಹೂಡಿ ಕೀರ್ತಿಶೇಷವಾಗಿತ್ತು. ಮಹಿಪಾಲಸಿಂಗನು ತೋಫಿನ ಬಾಯಿಗೆ ಕೊಡಲ್ಪಟ್ಟನು. ಆದರೆ ಮಹಿಪಾಲಸಿಂಗನ ಹೇಳಿಕೆಯಲ್ಲಿಯ ಅಂಶಗಳನ್ನು ವೆಂಕಟಪ್ಪನಾಯಕನು ಸಂಪೂರ್ಣ ನಿರಾಕರಿಸಿಬಿಟ್ಟನು. ಅವನ ವಿರುದ್ಧ ಯಾವ ಪುರಾವೆಗಳೂ ಬ್ರಿಟಿಶರಿಗೆ ಆಗ ದೊರೆಯಲಿಲ್ಲ. ಸುರಪುರದ ವೆಂಕಟಪ್ಪನಾಯಕನೆ ಪ್ರತ್ಯಕ್ಷ ಇವನನ್ನು ಕಳಿಸಿರದಿದ್ದರೂ ಮಹಿಪಾಲಸಿಂಗನು ಹೋದದ್ದು ವೆಂಕಟಪ್ಪನಾಯಕನಿಗೆ ಗೊತ್ತಿತ್ತೆಂದು ರಾಯಚೂರ ದೋಆಬದ ಡೆಪ್ಯೂಟಿ ಕಮಿಶನರರು ಅಭಿಪ್ರಾಯಪಟ್ಟಿದ್ದಾರೆ. ಈ ಡೆಪ್ಯೂಟಿ ಕಮಿಶನರರು ಕೂಡಲೆ ವೆಂಕಟಪ್ಪನಾಯಕನಿಗೆ ಎಚ್ಚರಿಕೆ ಕೊಟ್ಟು, ಗೊತ್ತುಪಡಿಸಿದ ಮಾರ್ಗಗಳನ್ನು ಬಿಟ್ಟು ಯಾರೂ ಜೇವಿಡಿಗೆ ಕೃಷ್ಣಾನದಿಯನ್ನು ದಾಟತಕ್ಕದ್ದಲ್ಲವೆಂದು ಪ್ರತಿಬಂಧಿಸಿದನು. ವೆಂಕಟಪ್ಪನಾಯಕನು ಇತ್ತೀಚೆಗೆ ಸೇರ್ಪಡೆಮಾಡಿದ ಅಶ್ವ ಮತ್ತು ಕಾಲ್ದಳಗಳನ್ನು ವಿಸರ್ಜನೆಮಾಡಬೇಕೆಂದು ಬ್ರಿಟಿಶ ಸರಕಾರವು ಆದೇಶವಿತ್ತಿತು.

ವೆಂಕಟಪ್ಪನಾಯಕನು ತನ್ನ ನಿಜ ಉದ್ದೇಶವನ್ನು ಕಂಪನಿ ಸೈನ್ಯಾಧಿಕಾರಿಗಳಿಗೆ ಕಡೆತನಕ ತಿಳಿಯಗೊಡಲಿಲ್ಲ. ಆಗ ಲಿಂಗಸುಗೂರಿನಲ್ಲಿ ರಾಯ-ಚೂರ ದೋಆಬ ಸೈನ್ಯದ ಒಂದು ಠಾಣ್ಯವಿತ್ತು. ವೆಂಕಟಪ್ಪನಾಯಕನ ಗುಪ್ತಚಾರರು ಅಲ್ಲಿಯೂ ಕಾಣಿಸಿಕೊಂಡರು. ಮಹಾನವಮಿಯ ದಿನ ಏನಾದರೂ ಗಲಭೆಯಾಗಬಹುದೆಂದು ಬ್ರಿಟಿಶ್ ಅಧಿಕಾರಿಗಳು ಹೆದರಿದ್ದರು. ಮಹಾನವಮಿಯನ್ನು ಶಾಂತವಾಗಿಯೇ ಆಚರಿಸಲಾಯಿತು.

ಆದರೆ ಅರಬ ಮತ್ತು ರೋಹಿಲಾ ಜನರನ್ನು ಸೈನ್ಯದಲ್ಲಿ ಸೇರಿಸಿಕೊಳ್ಳುವ ಕೆಲಸವನ್ನು ವೆಂಕಟಪ್ಪನಾಯಕನು ನಡೆಸಿಯೇ ಬಿಟ್ಟಿದ್ದನು. ನಿಜಾಮನ ದಿವಾಣನಾದ ಸಾಲರಜಂಗನು ಸಹ ಗಾಬರಿಯಾದನು. ವೆಂಕಟಪ್ಪನಾಯಕ ಮತ್ತು ಅವನ ಅನುಯಾಯಿಗಳು ಅತ್ಯಂತ ಶೂರರಿರುವರೆಂಬುದು ಎಲ್ಲರಿಗೂ ಗೊತ್ತಿತ್ತು. ಅತ್ತ ಮುಂಬೈಮದ್ರಾಸ ಗಡಿಯಲ್ಲಿ ವೆಂಕಟಪ್ಪನಾಯಕನು ತನ್ನ ಕೋಟೆಗಳನ್ನು ಭದ್ರಪಡಿಸುತ್ತಿದ್ದ ವಾರ್ತೆಯಿಂದ ಕಲಾದಗಿ ಸೈನ್ಯಠಾಣ್ಯಕ್ಕೆ

ಚಿಂತೆಯಾಯಿತು. ಅವರು ಮೇಲಿಂದಮೇಲೆ ಲಿಂಗಸುಗೂರಿಗೂ ಹೈದರಾಬಾದಿಗೂ ಚಿಂತೆ ವ್ಯಕ್ತಮಾಡಿ ಪತ್ರಬರೆಯಹತ್ತಿದರು.

ಈ ಸಂಧಿಗೆ ಡಿಸೆಂಬರ ೧೮೪೨ರಲ್ಲಿ ಕ್ಯಾಪ್ಟನ್ ಕ್ಯಾಂಬೆಲ್ ಎಂಬ ಹೈದರಾಬಾದದ ಎರಡನೆಯ ಅಸಿಸ್ಟಂಟ ರೆಸಿಡೆಂಟನನ್ನು ಸುರಪುರಕ್ಕೆ ಕಳಿಸಿಕೊಡಲಾಯಿತು. ಕ್ಯಾಂಬೆಲ್ಲನು ವೆಂಕಟಪ್ಪನಾಯಕನನ್ನು ಸಮಕ್ಷಮ ಕಂಡು, ಪರಿಸ್ಥಿತಿಯ ಸವಿಸ್ತರ ವಿಚಾರಣೆ ಮಾಡಬೇಕೆಂದೂ ಮುಂದೆ ಅವಶ್ಯವಿದ್ದರೆ ಲಿಂಗಸುಗೂರಿನಿಂದ ಸೈನ್ಯ ತರಿಸಬಹುದೆಂದೂ ರೆಸಿಡೆಂಟ ಸಾಹೇಬನು ಮೇಲಿನವರಿಗೆ ತಿಳಿಸಿದನು. ಗವರ್ನರ್ ಜನರಲ್ಲನು ಸಹ ಕ್ಯಾಂಬೆಲ್ಲನ ವಿಚಾರಣೆಯಲ್ಲಿ ತುಂಬಾ ಆಸ್ಥೆ ವಹಿಸಿದನು. ಬೇಡರು ಸಾಹಸಿಗಳೂ ಬಲಿಷ್ಠರೂ ಇದ್ದುದರಿಂದ ಎಲ್ಲರೂ ಹೆದರಿಬಿಟ್ಟಿದ್ದರು. ಆರು ತೋಫುಗಳನ್ನೂ ಹದಿನೈದುನೂರು ಸೈನಿಕರನ್ನೂ ಕಲಾದಗಿಯಿಂದ ತರಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಕರ್ನೂಲ, ಹೈದರಾಬಾದ ಮತ್ತು ಲಿಂಗಸುಗೂರುಗಳಿಂದ ಎಂಟರಿಂದ ಹತ್ತು ತೋಫುಗಳು, ಸಾವಿರಕ್ಕೆ ಮಿಕ್ಕ ಸೈನ್ಯವೂ ಸಿದ್ಧವಾಗಿ ಹೊರಟಿತು.

ವೆಂಕಟಪ್ಪನಾಯಕನಿಗೆ ಈ ಭಯವು ಇದ್ದೇ ಇತ್ತು. ಜನೆವರಿ ೧೧ನೆಯ ತಾರೀಖಿನಿಂದ ಕ್ಯಾಂಬೆಲ್ ಸಾಹೇಬನ ವಿಚಾರಣೆಯು ನಡೆದೆ ಇತ್ತು. ವೆಂಕಟಪ್ಪನಾಯಕನು ಕ್ಯಾಂಬೆಲ್ಲನನ್ನು ಯೋಗ್ಯ ರೀತಿಯಿಂದ ಸ್ವಾಗತಿಸಿ ಅವನಿಗೆ ಸಾಧ್ಯವಿದ್ದ ಎಲ್ಲ ಮಾಹಿತಿಯನ್ನು ಪೂರೈಸಿದನು. ಇಂಗ್ಲೀಷರು ಸುರಪುರದ ಮೇಲೆ ದಾಳಿಮಾಡುವರೆಂದು ಕೆಲವರು ಹೆದರಿಸಿ ತನ್ನಿಂದ ಸೈನ್ಯದ ನೇಮ್ಣೂಕಿಯನ್ನು ನಡೆಸಿದರೆಂದೂ ವೆಂಕಟಪ್ಪನಾಯಕನು ಕ್ಯಾಂಬೆಲ್ ಸಾಹೇಬನಿಗೆ ಹೇಳಿದನು; ಇದೇನೂ ಒಂದು ನೆವ ಇದ್ದರೂ ಇರಬಹುದು. ಸುರಪುರದ ಬೇರೆಬೇರೆ ಭಾಗಗಳಲ್ಲಿ ಅಕ್ರಮವಾಗಿ ಬಂದು ನೆಲೆಸಿದ ಕೆಲವು ರೋಹಿಲಾ ಜನರನ್ನೂ ಕ್ಯಾಂಬೆಲ್ಲನ ವಿನಂತಿಯ ಮೇರೆಗೆ ವೆಂಕಟಪ್ಪ ನಾಯಕನು ಊರು ಬಿಡಿಸಿದನು. ವಿಚಾರಣೆಯಲ್ಲಿ ವೆಂಕಟಪ್ಪನಾಯಕನ ವಿರುದ್ಧ ವಿಶೇಷ ಪುರಾವೆಗಳು ದೊರೆತಿಲ್ಲವೆಂದು ಕ್ಯಾಂಬೆಲ್ಲನು ವರದಿ ಮಾಡಿದ್ದಾನೆ.

ಧಾರವಾಡದಲ್ಲಿ ಲೆಫ್ಟಿನೆಂಟ ಕರ್ ಸಾಹೇಬನ ಕೈಗೆ ವೆಂಕಟಪ್ಪನಾಯಕನ ಗುಪ್ತಚಾರನೊಬ್ಬನು ಸಿಕ್ಕಿದ್ದನು. ಇವನ ಹತ್ತಿರ ಆನಂದರಾವ ಸುರಪುರ ಎಂಬ ಸಹಿ ಇದ್ದ ಎರಡು ಪತ್ರಗಳು ದೊರೆತಿದ್ದವು. ನಾನಾ ಸಂಕೇಶ್ವರ ಎಂಬ ಓರ್ವ ಬ್ರಾಹ್ಮಣನನ್ನು ವೆಂಕಟಪ್ಪನಾಯಕನು ನಾನಾಸಾಹೇಬನ ಕಡೆಗೆ ಕಳಿಸಿರು

ವನೆಂದೂ ಎಲ್ಲ ಕಡೆಗೆ ದಟ್ಟವಾರ್ತೆಯಿತ್ತು. ಆದರೆ ಕ್ಯಾಂಬೆಲ್ಲನಿಗೆ ಈ ಬಗ್ಗೆ ಏನೂ ಆಧಾರಸಹಿತವಾದ ಮಾಹಿತಿ ದೊರೆಯಲಿಲ್ಲ.

ಕ್ಯಾಂಬೆಲ್ ಸಾಹೇಬನಿಗೆ ಪುರಾವೆಗಳು ದೊರೆಯದಿದ್ದರೂ ವೆಂಕಟಪ್ಪ ನಾಯಕನ ವರ್ತನದ ಬಗ್ಗೆ ಅವನಿಗೆ ಸಮಾಧಾನವಾಗಲಿಲ್ಲ. ವೆಂಕಟಪ್ಪನಾಯಕನಿಗೆ ಇಂಗ್ಲೀಷರ ಬಗ್ಗೆ ಎಷ್ಟೂ ಪ್ರೀತಿಯಿರಲಿಲ್ಲ. ಅರಬರು, ರೋಹಿಲಾ ಜನರು ಊರಲ್ಲಿ ದಿನಾಲು ಬಂದು ಸೇರುವದು ನಡದೇ ಇತ್ತು. ಬೇಡವೆಂದರೂ ಅವರು ಬರುತ್ತಿದ್ದಾರೆ, ಎಂದು ಹೇಳಿದ ವೆಂಕಟಪ್ಪನಾಯಕನ ಮಾತನ್ನು ಕ್ಯಾಂಬೆಲ್ ಸಾಹೇಬನು ನಂಬಲಿಲ್ಲ. ಫೆಬ್ರುವರಿ ಮೊದಲನೆಯ ವಾರದಲ್ಲಿ ಕ್ಯಾಂಬೆಲ್ಲನು ಲಿಂಗಸುಗೂರಿಗೆ ಹೋಗಿ ಅಲ್ಲಿಯ ಸೈನ್ಯಾಧಿಕಾರಿ ಕ್ಯಾಪ್ಟನ್ ವಿಂಡ್ಹ್ಯಾಮನಿಗೆ ಸುರಪುರಕ್ಕೆ ಸೈನ್ಯಸಾಗಿಸೆಂದು ಹೇಳಿಯೇ ಬಿಟ್ಟನು. ಫೆಬ್ರುವರಿ ೭ನೆಯ ತಾರೀಖಿಗೆ ವಿಂಡ್ಹ್ಯಾಮನ ಸೈನ್ಯವು ಊರ ಹೊರಗಿನ ಬೈಲಲ್ಲಿ ಶಿಬಿರ ಹೊಡೆಯಿತು.

ವೆಂಕಟಪ್ಪನಾಯಕನು ಸತ್ವಪರೀಕ್ಷೆಯ ಕಾಲವು ಬಂದಿತೆಂದುಕೊಂಡನು. ಬ್ರಿಟಿಶರ ವಿರುದ್ಧ ಬಂಡಾಯ ಮಾಡಬೇಕು, ಎಂಬ ಒಂದೇ ವಿಚಾರ ಅವನ ತಲೆಯಲ್ಲಿ ಸುಳಿದಾಡುತಿತ್ತೇ ಹೊರತು ಅದನ್ನು ಯಶಸ್ವಿಯಾಗಿ ಕೃತಿಗಿಳಿಸುವಷ್ಟು ಅವನ ಮನಸ್ಸು ಇನ್ನೂ ಪರಿಪಕ್ವವಾಗಿರಲಿಲ್ಲ. ಅವನು ತನ್ನ ಇಪ್ಪತ್ತು ನಾಲ್ಕನೆಯ ವರ್ಷದಲ್ಲಿ ಆದೇ ಕಾಲಿಟ್ಟಿದ್ದನು. ಬಂಡಾಯದ ವಿಚಾರವನ್ನು ಕುರಿತು ಇಡಿಯ ಕರ್ನಾಟಕದಿಂದ ಅವನಿಗೆ ಹುರಿದುಂಬಿಸುವ ಪತ್ರಗಳು ಬಂದಿದ್ದವು. ಶೂರಮನೆತನದವನಾದ ವೆಂಕಟಪ್ಪನಾಯಕನು ಬಂಡಾಯ ಹೂಡಿದರೆ ಕರ್ನಾಟಕದ ಬಂಡಾಯಕ್ಕೇ ಕಳೆಯೇರುವದೆಂದು ನರಗುಂದ ಬಾಬಾಸಾಹೇಬ, ಮುಂಡರಗಿ ಭೀಮರಾಯ ಮೊದಲಾದವರ ಅಭಿಪ್ರಾಯ ವಿತ್ತು. ಅವನೆದ್ದರೆ ಅವನೊಡನೆ ಅವನ ಅನುಯಾಯಿಗಳಾದ ಶೂರ ಬೇಡರೂ ಏಳುತ್ತಿದ್ದರು. ಅವನ ಸುತ್ತಲೂ ಜನ ಸೇರಿ, ಬ್ರಿಟಿಶರಿಗೆ ಅಳಿಗಾಲವು ಬಂದಿದೆ, ನೀನು ಕೂಡಲೆ ಬಂಡಾಯದ ಮುಖಂಡನಾಗಿ ರಾಮೇಶ್ವರದವರೆಗೆ ಸಮಗ್ರ ದಕ್ಷಿಣದ ಒಡೆಯನಾಗು ಎಂದು ಪ್ರೋತ್ಸಾಹಿಸಹತ್ತಿದರು. ಉತ್ತರದಲ್ಲಿ ಇಂಗ್ಲೀಷರು ಸಂಪೂರ್ಣ ಸೋತಿರುವರೆಂದೂ ಇಂಗ್ಲಂಡಿಗೆ ಓಡಿಹೋಗಹತ್ತಿರುವರೆಂದೂ ಹೇಳಿ, ನೀನೇ ದಕ್ಷಿಣಾಧಿಪತಿ ಎಂದು ಬ್ರಾಹ್ಮಣರು ವೆಂಕಟಪ್ಪ ನಾಯಕನಿಗೆ ಆಶೀರ್ವಾದಮಾಡಿದರು.

ಪುಣೆ, ಸಾತಾರಾ ಮತ್ತು ಕೊಲ್ಹಾಪುರದ ಮಹಾರಾಷ್ಟ್ರೀಯರು, ನರಗುಂದ ಬಾಬಾಸಾಹೇಬ, ಮತ್ತು ಮುಂಡರಗಿ ಭೀಮರಾಯರು ಹನ್ನೆರಡು ಸಾವಿರ ಜೇಡರೊಂದಿಗೆ ಬಂಡಾಯ ಸೇರಿದರೆ ನೀನು ಬೇಡಿದ್ದನ್ನು ಕೊಡುವೆವೆಂದು ಹೇಳಿಂದ ಮೇಲೆ ವೆಂಕಟಪ್ಪನಾಯಕನಿಗೆ ಬರೆದು ತಿಳಿಸಿದರು! ಹೀಗಾಗಿ ವೆಂಕಟಪ್ಪನಾಯಕನ ಬಿಸಿ ರಕ್ತ ಬಂಡಾಯಕ್ಕಾಗಿ ಸಳಮಳಿಸ ಹತ್ತಿತ್ತು. ವಿಂಡ್ಹ್ಯಾಮನ ಸೈನ್ಯ ಊರಹೊರಗೆ ಶಿಬಿರಹೊಡೆದಿದೆ ಎಂಬ ವಾರ್ತೆಯು ಬಂದೊಡನೆ ವೆಂಕಟಪ್ಪನಾಯಕನ ಸೈನ್ಯ ರಾತ್ರಿಯೇ ಊರ ಬಾಗಿಲು ತೆಗೆದು ಅವನ ಮೇಲೆ ಬಿದ್ದಿತು. ಬೆಳಗಾಗುವದರೊಳಗೆ ಮೇಜರ ಹ್ಯೂಜೆಸ್ಸನ ನಾಯಕತ್ವದಲ್ಲಿ ಮದ್ರಾಸ ಅಶ್ವದಳ ಮತ್ತು ಓಳನೆಯ ನಂಬರಿನ ಹೈಲ್ಯಾಂಡರ್ಸ್ ಸೈನ್ಯಪಡೆಗಳು ಸುರಪುರ ಬಾಗಿಲಿಗೆ ಬಂದವು. ಅಶ್ವದಳದ ನಾಯಕ ಕ್ಯಾಪ್ಟನ್ ನ್ಯೂಬೇರಿಯು ಯುದ್ಧದಲ್ಲಿ ಮಡಿದನು. ಬೇಡರ ಸೈನ್ಯವು ಹಿಮ್ಮೆಟ್ಟಿ ಊರೊಳಗೆ ಹೋಗಿ ಕುಳಿತಿತು. ಕಲಾದಗಿಯಿಂದ ಮಾಲ್ಕಮ್ ಸಾಹೇಬನ ಸೈನ್ಯ ಬರುವವರೆಗೆ ವಿಂಡ್ಹ್ಯಾಮನಿಗೆ ಸುರಪುರದ ಮೇಲೆ ಹಲ್ಲೆಮಾಡುವ ಧೈರ್ಯ ಸಾಲಲಿಲ್ಲ. ವಾಗನಗೇರಿ ಭೀಮರಾಯನೆಂಬುವವನು ಫಿತೂರಿಯಾಗಿ ಅಗಸೆ ಬಾಗಿಲನ್ನು ಇಂಗ್ಲೀಷರಿಗೆ ತೆರೆದನೆಂದೂ ಹೇಳುತ್ತಾರೆ. (ಮಿಂಚಿನ ಬಳ್ಳಿ, ೩೧೧)

ಊರೊಳಗೆ ಇಂಗ್ಲೀಷರ ಸೈನ್ಯವು ಪ್ರವೇಶ ಮಾಡಿದಾಗ ಸಾಯಂಕಾಲವಾಗಿತ್ತು. ವೆಂಕಟಪ್ಪನಾಯಕನು ಮಸುಕಿನಲ್ಲಿ ಊರ ದಾಟಿ ಹೈದರಾಬಾದದ ದಾರಿಹಿಡಿದನು. ಅರಮನೆಯಲ್ಲಿ ಹಿರಿಯ ರಾಣಿ ರಂಗಮ್ಮ ಮತ್ತು ಇತರ ಸ್ತ್ರೀಯರಿದ್ದರು. ಇವರೆಲ್ಲರೂ ಇನ್ನೂ ವಯಸ್ಸಿನಿಂದ ತೀರಾ ಚಿಕ್ಕವರು. ವೆಂಕಟಪ್ಪನಾಯಕನು ಓಡಿಹೋದ ಮೇಲೆ ರಂಗಮ್ಮ ಗಾಬರಿಗೊಂಡಳು. ಉತ್ತರ ಬಾಗಿಲಿನಿಂದ ಎಲ್ಲ ಸ್ತ್ರೀಯರು ಅರಮನೆ ಬಿಟ್ಟು ಕಾಲ್ನಡಿಗೆಯಿಂದ ಪಾರಾದರು. ಹತ್ತಿರದ ಹಳ್ಳಿಯೊಂದರಲ್ಲಿ ಅವರಿಗೆ ಆಶ್ರಯ ದೊರೆಯಿತು. ಮೈಮೇಲಿನ ವಸ್ತ್ರಾಭರಣಗಳ ಹೊರತು ಸಂಗಡ ಏನ್ನೂ ದ್ರವ್ಯವನ್ನು ತರುವದು ಅವರಿಗೆ ಸಾಧಿಸಲಿಲ್ಲ.

ಮರುದಿನ ಕ್ಯಾಪ್ಟನ್ ಕ್ಯಾಂಬೆಲ್ಲನು ಜನರಿಗೆ ಅಭಯವಚನವನ್ನಿತ್ತು ಒಂದು ಘೋಷಣೆ ಹೊರಡಿಸಲು ರಾಣಿಯರೂ ಮತ್ತೆ ಊರಲ್ಲಿ ನುಸುಳಿಕೊಂಡು ಅರಮನೆಯ ಹತ್ತಿರದ ಒಂದು ಮನೆಯಲ್ಲಿ ಉಳಿದರು. ಅರಮನೆಯ

ದೌಲತ್ತು ಸೈನ್ಯದ ಪಾಲಾಯಿತು. ಕಂಪನಿಯ ಸೈನ್ಯವು ಅರಮನೆಯನ್ನು ಆಕ್ರಮಿಸಿ ಕುಳಿತಿತು. ರಂಗಮ್ಮ ರಾಣಿಯು ತನ್ನ ಕೆಲವು ಸಾಹಿತ್ಯಗಳಿಗಾಗಿ ಅರಮನೆಗೆ ಹೇಳಿಕಳಿಸಲು ಒಂದೆರಡು ಸೀರೆಗಳನ್ನು ಮಾತ್ರ ಸೇನಾಪತಿ ಸಾಹೇಬರು ಅವಳಿಗೆ ಕಳಿಸಿಕೊಟ್ಟರು.

ಮರುದಿನ ಮಧ್ಯಾಹ್ನ ವೆಂಕಟಪ್ಪನಾಯಕನು ಹೈದರಾಬಾದ ಸೇರಿ ಮತ್ತೆ ಕೆಲವು ಆರಬ ಮತ್ತು ರೋಹಿಲಾ ಜನರನ್ನು ಕೂಡಿಸಲು ಯತ್ನಿಸಿದನು; ಆದರೆ ಅವನಿಗೆ ಅದು ಸಾಧಿಸಲಿಲ್ಲ. ಅವನ ಗುರುತು ಸಿಕ್ಕ ಕೆಲವರು ವೆಂಕಟಪ್ಪನಾಯಕನನ್ನು ಕೂಡಲೆ ಸಾಲರಜಂಗ ದಿವಾಣನಿಗೆ ಒಪ್ಪಿಸಿದರು ವೆಂಕಟಪ್ಪನಾಯಕನ ಬಗ್ಗೆ ಇಂಗ್ಲೀಷರಿಗೆ ಎಷ್ಟೂ ಸಹಾನುಭೂತಿಯಿರಲಿಲ್ಲ. ಅವನಿಗೆ ದೇಹಾಂತಶಿಕ್ಷೆಯನ್ನೆ ಕೊಡತಕ್ಕದ್ದೆಂದು ವಿಚಾರಣೆ ಮಂಡಳವು ತೀರ್ಪು ಕೊಟ್ಟಿತು.

ವೆಂಕಟಪ್ಪನಾಯಕನು ಕಾಣುತ್ತಿದ್ದ ಕನಸು ಕನಸಿನಂತೆಯೇ ಕೈಜಾರಿ ಹೋಯಿತು. ನಾನಾಸಾಹೇಬ, ಲಕ್ಷ್ಮೀಬಾಯಿ, ತಾತ್ಯಾ ಟೋಪಿ ಪ್ರಭೃತಿಗಳಂತೆಯೇ ವೆಂಕಟಪ್ಪನಾಯಕನೂ ದುರ್ಗತಿಗೆ ಈಡಾದನು. ದಾಸ್ಯಶೃಂಖಲೆಗಳಿಂದ ತನ್ನನ್ನು ತಾನೆ ಬಿಗಿದುಕೊಳ್ಳಲು ನಿರಾಕರಿಸಿದ್ದೇ ವೆಂಕಟಪ್ಪನಾಯಕನ ಮಹಾಪರಾಧವಾಯಿತು !

ಈ ದುಃಸ್ಥಿತಿಯ ವಾರ್ತೆಯು ಕರ್ನಲ್ ಟೇಲರನಿಗೆ ತಿಳಿದಕೂಡಲೆ ಟೇಲರನು ಅವನಿದ್ದಲ್ಲಿಗೆ ಧಾವಿಸಿ ಬಂದನು. ವೆಂಕಟಪ್ಪನಾಯಕನನ್ನು ಸಿಕಂದರಾಬಾದ ಜೇಲಿನಲ್ಲಿ ಇಡಲಾಗಿತ್ತು. ತನ್ನ ಮಗನಂತೆ ಪ್ರೀತಿಸುತ್ತಿದ್ದ ಈ ಬಾಲಕನ ಪರಿಸ್ಥಿತಿಯನ್ನು ನೋಡಿ ಅವನು ತುಂಬಾ ಮರುಗಿದನು. ಅವನ ಕಥೆಯನ್ನೆಲ್ಲ ಕೇಳಿಕೊಂಡು ಟೇಲರನು ರೆಸಿಡೆಂಟ ಸಾಹೇಬನಕಡೆಗೆ ಹೋದನು. ಒಳಸಂಚಿನ ವಿವರಗಳನ್ನೂ ಮತ್ತು ಸಂಬಂಧಪಟ್ಟವರ ಹೆಸರುಗಳನ್ನೂ ವೆಂಕಟಪ್ಪನಾಯಕ ಕೊನೆವರೆಗೂ ಹೇಳಲಿಲ್ಲ. “ ಈ ಕರಾರಿನ ಮೇಲೆ ನಾನು ಜೀವಯಾಚನೆಯನ್ನು ಮಾಡುವದೇ ಇಲ್ಲ; ಬಂಡುಗಾರನಂತೆ ನನ್ನನ್ನು ತೋಫಿನ ಬಾಯಿಗೆ ಕೊಡಿರಿ. ಕೊಲೆಪಾತಕ ಮಾಡಿದ ಹೀನನಂತೆ ನನ್ನನ್ನು ಗಲ್ಲಿಗೆ ಹಾಕಬೇಡಿರಿ,” ಎಂದು ವೆಂಕಟಪ್ಪನಾಯಕನು ನಿಷ್ಠುರವಾಗಿ ಹೇಳಿಬಿಟ್ಟನು. ವೆಂಕಟಪ್ಪನಾಯಕನ ಸರಳವೃತ್ತಿ ರೆಸಿಡೆಂಟನ ಅಂತರಂಗವನ್ನು ಕದಲಿಸಿತು. ಟೇಲರನೂ ಸಾಕಷ್ಟು ಮಧ್ಯಸ್ಥಿಕೆ ಮಾಡಿದನು. ವೆಂಕಟಪ್ಪ

ನಾಯಕನ ಮರಣದಂಡನೆ ಶಿಕ್ಷೆಯನ್ನು ಜೀವಾವಧಿಶಿಕ್ಷೆಗೆ ಇಳಿಸಿ ಮುಂದೆ ಅವನು ಸದ್ವರ್ತನದಿಂದ ಇದ್ದಲ್ಲಿ ನಾಲ್ಕು ವರ್ಷಗಳಲ್ಲಿ ಅವನನ್ನು ಬಿಡುಗಡೆ ಮಾಡಿ ಅವನ ರಾಜ್ಯವನ್ನು ಅವನಿಗೆ ಮರಳಿ ಕೊಡಬೇಕೆಂದು ತೀರ್ಮಾನಿಸ ಲಾಯಿತು. ಮೆಡೋಜ ಟೇಲರನು ಆಗ ಸುರಪುರದಲ್ಲಿದ್ದನು. ರಾಣಿಯ ರಿಗೂ ಈ ವಾರ್ತೆಯನ್ನು ಕೇಳಿ ಹಿಡಿಸಲಾರದಷ್ಟು ಹಿಗ್ಗಾಯಿತು.

ವೆಂಕಟಪ್ಪನಾಯಕನನ್ನು ಮದ್ರಾಸವ ಹತ್ತಿರಿರುವ ಚಿಂಗಲಪೇಟೆಯ ಕೋಟೆಯಲ್ಲಿ ಇಡಬೇಕೆಂದೂ ತನ್ನ ರಾಣಿಯರನ್ನು ಅಲ್ಲಿ ಅವನು ಕರೆಸಿಕೊಳ್ಳ ಬಹುದೆಂದೂ ಬ್ರಿಟಿಶ್ ಸರಕಾರವು ನಿರ್ಧರಿಸಿತು. ರಂಗಮ್ಮ ಮತ್ತು ಇನ್ನೊ ಬ್ಬಳು ಕರ್ನೂಲದಲ್ಲಿ ವೆಂಕಟಪ್ಪನಾಯಕನನ್ನು ಕೂಡಿಕೊಳ್ಳಬೇಕೆಂದು ಗೊತ್ತಾಯಿತು.

ಹೊರಡುವ ದಿನ ವೆಂಕಟಪ್ಪನಾಯಕನು ಪಾಲಕಿಯಲ್ಲಿ ಕುಳಿತು ತನ್ನನ್ನು ಕರೆದೊಯ್ಯುವ ಸೇನಾಪತಿಯ ಕಡೆಗೆ ಹೋದನು. ತನಗೆ ತೋರಿಸಿದ ಕರುಣೆಯ ಸಲುವಾಗಿ ಹಿಂದುಸ್ತಾನ ಸರಕಾರಕ್ಕೆ ತುಂಬ ಕೃತಜ್ಞನಾಗಿದ್ದೇನೆಂದು ನುಡಿ ದನು. ಅವನು ರಾಣಿಯರನ್ನು ಭೆಟ್ಟಿಯಾಗಲು ವಿಶೇಷ ಉತ್ಸುಕತೆಯನ್ನು ವ್ಯಕ್ತಮಾಡಿದ್ದನು.

ಆದರೆ ಸುಖ ಎಂಬುದನ್ನು ಬ್ರಹ್ಮನು ವೆಂಕಟಪ್ಪನಾಯಕನ ಹಣೆಯಲ್ಲಿ ಬರೆದಿರಲೆ ಇಲ್ಲ. ಅವನನ್ನು ಕರೆದೊಯ್ಯುವ ಅಧಿಕಾರಿ ತನ್ನ ನಡಪಟ್ಟಿಯ ಪಿಸ್ತೂಲನ್ನು ಬಚ್ಚಿಟ್ಟು ಒಳಗೆ ಹೋದನು. ಗುಂಡುಹಾರಿದ ಸಪ್ಪಳ ಕೇಳಿ ಎಲ್ಲರೂ ವೆಂಕಟಪ್ಪನಾಯಕನಿದ್ದ ಡೇರೆಗೆ ಧಾವಿಸಿದರು. ಹೊಟ್ಟೆಯೊಳಗೆ ಗುಂಡು ಬಡಿದು ವೆಂಕಟಪ್ಪನಾಯಕ ತಕ್ಷಣ ಮರಣಹೊಂದಿ ನೆಲದ ಮೇಲೆ ಉರುಳಿದ್ದ. ಏನಾಯಿತೊ ಯಾರಿಗೂ ತಿಳಿಯಲಿಲ್ಲ; ಅಪಘಾತವೊ ಅಥವಾ ಆತ್ಮಹತ್ಯೆಯೊ ?

ವೆಂಕಟಪ್ಪನಾಯಕನ ಪಾಲಕನೂ ಅವನ ಸ್ವಭಾವ ಮತ್ತ ಶೀಲಗಳನ್ನು ತುಂಬಾ ಅರಿತವನೂ ಆದ ಕರ್ನಲ ಮೆಡೋಜ ಟೇಲರನು ಮಾತ್ರ ವೆಂಕಟಪ್ಪ ನಾಯಕನು ಆ ಸಂಧಿಯಲ್ಲಿ ಆತ್ಮಹತ್ಯೆಯನ್ನು ಮಾಡಿಕೊಂಡಿರಲು ಶಕ್ಯವೇ ಇಲ್ಲವೆಂದು ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾನೆ. ವೆಂಕಟಪ್ಪನಾಯಕನು ಫಾಸಿಯಿಂದ ಉಳಿದುಕೊಂಡಿದ್ದನು; ಅವನ ಜೀವಾವಧಿ ಶಿಕ್ಷೆಯು ಕೇವಲ ನಾಲ್ಕು ವರ್ಷಕ್ಕೆ ಇಳಿಸಲ್ಪಟ್ಟು ರಾಜ್ಯವನ್ನು ಮರಳಿ ಕೊಡುವ ಭರವಸೆ

ಯನ್ನು ಸಹ ಬ್ರಿಟಿಶರು ಅವನಿಗೆ ಕೊಟ್ಟಿದ್ದರು. ಜೀವನದ ಅಂಥ ಸವಿನಿಮಿಷ ದಲ್ಲಿ ತರುಣ ವೆಂಕಟಪ್ಪನಾಯಕನು ಆತ್ಮಹತ್ಯೆಯ ವಿಚಾರ ಮಾಡಿರುವದು ಅಸಂಭವನೀಯವೆನಿಸುತ್ತದೆ. ಆದರೆ ವೆಂಕಟಪ್ಪನಾಯಕನ ಅಂತರಂಗವನ್ನು ಬಲ್ಲವರು ಯಾರು? ಇತ್ತೀಚಿಗೆ ಅವನ ಅಂತರಂಗದಲ್ಲಿ ಯಾವ ಬಿರುಗಾಳಿಯು ಬೀಸುತ್ತಿತ್ತೆಂಬುದು ಮೆಡೋಜ ಟೇಲರನಿಗೆ ಸಹ ಗೊತ್ತಿರಲಿಲ್ಲ. ಸತ್ಯದ ಸ್ವರೂಪವು ಏನೇ ಇದ್ದರೂ ವೆಂಕಟಪ್ಪನಾಯಕನ ಜೀವನಯಾತ್ರೆಯು ಮಾತ್ರ ಕೊನೆಗೊಂಡಿತು.

ಹೀಗೊಂದು ಅತಿಶೂರ ಆದರೆ ದುರ್ದೈವಿ ಜೀವವು ೧೮೫೭ರ ಯಜ್ಞ ಕುಂಡದಲ್ಲಿ ಆಹುತಿ ಬಿದ್ದಿತು. ನಾಲ್ಕುನೂರು ವರ್ಷ ಎಲ್ಲ ಬಗೆಯ ಧಕ್ಕೆಯನ್ನು ನಗುನಗುತ ತಡೆದು ಶೂರಸಾಹಸಿಗಳೆಂಬ ಅಜರಾಮರ ಕೀರ್ತಿಯನ್ನು ಪಡೆದ ಸುರಪುರ ಅರಸರು ಬ್ರಿಟಿಶರ ಕುಟಿಲಕಾರಸ್ಥಾನಕ್ಕೆ ಕಡೆಗೆ ಬಲಿಯಾದರು.

ಮರಣಹೊಂದಿದಾಗ ವೆಂಕಟಪ್ಪನಾಯಕನಿಗೆ ಇಪ್ಪತ್ತುನಾಲ್ಕು ವರ್ಷ ಗಳು ಪೂರ್ತಿಯಾಗಿರಲಿಲ್ಲ.[2]

2. ವೆಂಕಟಪ್ಪನಾಯಕನ ಜನ್ಮಕುಂಡಲಿಯನ್ನು ನೋಡಿ ಅವನಿಗೆ ಇಂಥ ಮರಣವು ೨೪ ವರ್ಷ ಪೂರ್ತಿಯಾಗುವದರೊಳಗೆ ಬರುವದೆಂದು ಓರ್ವ ಬ್ರಾಹ್ಮಣ ಜ್ಯೋತಿಷಿಯು ಹೇಳಿದ್ದನಂತೆ. ವೆಂಕಟಪ್ಪನಾಯಕನ ತಾಯಿ ಈಶ್ವರಮ್ಮ ಹಾಗು ಮೆಡೋಜ್ ಟೇಲರ ಇಬ್ಬರಿಗೇ ಈ ಗೌಪ್ಯವೂ ಗೊತ್ತಿತ್ತು. ಈಶ್ವರಮ್ಮನಂತೂ ಬೇಗನೇ ಸತ್ತು ಹೋದಳು. ಹೀಗಾಗಿ ಮೆಡೋಜ್ ಟೇಲರ ಒಬ್ಬನಿಗೇ ಈ ವಿಷಯ ಗೊತ್ತಿತ್ತು. ವೆಂಕಟಪ್ಪನಾಯಕನಿಗಾದ ಮರಣದಂಡನೆಯು ರದ್ದಾದಾಗ ಮೆಡೋಜ್ ಟೇಲರ ಮತ್ತು ಆ ಜ್ಯೋತಿಷಿ ಕೂಡಿಯೇ ಇದ್ದರು. ನಿನ್ನ ಭವಿಷ್ಯ ಸುಳ್ಳಾಯಿತೆಂದು ಮೆಡೋಜ್ ಟೇಲರ ಆಗ ನಗೆಯಾಡಿದ್ದಾನೆ. ಮರುದಿನವೇ ಈ ದುರಂತವಾರ್ತೆಯು ಟೇಲರನಿಗೆ ಸುರಪುರದಲ್ಲಿದ್ದಾಗಲೆ ಮುಟ್ಟಿತು. ಇಪ್ಪತ್ತುನಾಲ್ಕು ವರ್ಷ ತುಂಬುವದ ರೊಳಗೆ ರಾಜನೂ ಹೋದನು; ರಾಜ್ಯವೂ ಹೋಯಿತು; ದೈವಲೀಲೆಯ ಮುಂದೆ ಯಾರ ಆಟವೂ ನಡೆಯಲಿಲ್ಲ.—*Story of My Life* Colonel Meadows Taylor.

# ಹದಿನೇಳನೆಯ ಅಧ್ಯಾಯ

## ನರಗುಂದ ಬಾಬಾಸಾಹೇಬ

### ೧೮೫೮

ಧಾರವಾಡ, ವಿಜಾಪುರ, ಗುಲಬುರ್ಗಾ, ಬಳ್ಳಾರಿ ಜಿಲ್ಹೆಗಳಲ್ಲಿ ೧೮೫೭ ರಲ್ಲಿ ಬ್ರಿಟಿಶ್‌ಸರಕಾರದ ವಿರುದ್ಧ ಗಂಭೀರ ಒಳಸಂಚುಗಳು ನಡೆದವು. ಜನರೂ ಸರಕಾರದ ದ್ವೇಷ ಮಾಡತೊಡಗಿದರು. ನೊವೆಂಬರ ತಿಂಗಳಲ್ಲಿ ಹಲಗಲಿಯ ಬೇಡರು ಬ್ರಿಟಿಶ್‌ಸರಕಾರದ ವಿರುದ್ಧ ಕೊನೆಯವರೆಗೂ ಶರಣ ಬರದೆ 'ಹರಾಕಿರಿ' ಮಾಡಿದರು. ೧೮೫೮ರ ಜುಲೈ ತಿಂಗಳವರೆಗೆ ಸಮಗ್ರ ಬಂಡಾಯದ ಸಿದ್ಧತೆಗಳನ್ನು ಮಾಡಿ ಮಳೆಗಾಲವು ಬಂದೊಡನೆ ಸುರಪುರ-ನರಗುಂದ ಸಂಸ್ಥಾನಗಳ ಹಿರಿತನದಲ್ಲಿ ಎಲ್ಲರೂ ಬಂಡಾಯ ಹೂಡಬೇಕೆಂದು ವಿಚಾರಮಾಡಲಾಗಿತ್ತು. ಮುಂಡರಗಿ, ಹಮ್ಮಿಗಿ, ಕೊಪ್ಪಳ, ಆನೆಗುಂದಿ, ಗಂಗಾವತಿ ಮೊದಲಾದ ಅನೇಕ ಕರ್ನಾಟಕದ ಊರುಗಳ ಜಮೀನದಾರರು ಮತ್ತು ಜನರು ಈ ಪ್ರಯತ್ನದಲ್ಲಿ ಸೇರಿದ್ದರು. ಆದರೆ ಫೆಬ್ರುವರಿ ಮೊದಲನೆಯ ವಾರದಲ್ಲಿಯೇ ಸುರಪುರದ ಕಥೆಯು ದುರಂತದಲ್ಲಿ ಕೊನೆಗೊಂಡು ಬಂಡಾಯದ ಅರ್ಧಶಕ್ತಿಯನ್ನು ತಗ್ಗಿಸಿತು.

ಧಾರವಾಡ ಜಿಲ್ಹೆಯ ಜಮೀನದಾರ ಜಹಾಗೀರದಾರರ ಬಗ್ಗೆ ಸರಕಾರಕ್ಕೆ ತುಂಬಾ ಸಂಶಯವುಂಟಾಯಿತು. ಧಾರವಾಡವೇ ಆಗ ಜಿಲ್ಹಾ ಕೇಂದ್ರವಾಗಿತ್ತು. ೨೯ನೆಯ ಕಾಲ್ದಳವು ಧಾರವಾಡದ ಕಿಲ್ಲೆಯಲ್ಲಿ ಇರುತ್ತಿದ್ದರೂ ಇಂಗ್ಲೀಷರಿಗೆ ಯಾರ ಮೇಲೆಯೂ ವಿಶ್ವಾಸವು ಉಳಿಯದಂಥ ಒಂದು ಕಾಲವು ಪ್ರಾಪ್ತವಾಯಿತು. ರಸ್ತೆ ಮತ್ತು ರೇಲ್ವೆ ಸಾರಿಗೆಗಳು ಇನ್ನೂ ಜಿಲ್ಹೆಯಲ್ಲಿ ಇರಲೇ ಇಲ್ಲವೆಂದರೂ ಸಲ್ಲುವದು. ಮಳೆಯು ಸುರುವಾದೊಡನೆ ಬಂಡಾಯವು ಸುರುವಾಗಿದ್ದರೆ ಕಂಪನಿ ಸೈನ್ಯವು ಧಾರವಾಡದಿಂದ ತೋಫುಗಳನ್ನು ಎಳೆದುಕೊಂಡು ನರಗುಂದ ಮುಂಡರಗಿಗಳಿಗೆ ಮುಟ್ಟುವದೇ ಶಕ್ಯವಿರಲಿಲ್ಲ. ಯುರೋಪಿಯನ್ ಅಧಿಕಾರಿಗಳು ಕುದುರೆ ಇಲ್ಲವೆ ಮೇಣೆಗಳ ಸಹಾಯದಿಂದ ಗ್ರಾಮಾಂತರಗಳಲ್ಲಿ ಸಂಚರಿಸುತ್ತಿದ್ದರು. ಅನೇಕ ಶಿಪಾಯಿದಳಗಳಲ್ಲಿ ಬಂಡಾಯದ

ವಿಚಾರಗಳು ತುಂಬಿದ್ದವೇನೋ ನಿಜ. ಆದರೆ ಸ್ವಾಮಿನಿಷ್ಠ ಸಿಪಾಯರೂ ಸಾಕಷ್ಟಿದ್ದು ಇವರ ಶಿಸ್ತು ಮತ್ತು ಸಾಹಸಗಳಿಂದಲೆ ಇಂಗ್ಲೀಷರಿಗೆ ಇಂಥ ಕಠಿಣ ಪ್ರದೇಶಗಳಲ್ಲಿ ಸಹ ತಮ್ಮ ಪ್ರಭುತ್ವವನ್ನು ಉಳಿಸಿಕೊಳ್ಳುವದು ಸಾಧ್ಯವಾಯಿತು.

ಉತ್ತರಕರ್ನಾಟಕದ ಜಿಲ್ಲೆಗಳಲ್ಲಿ ಅಸಂತೋಷವು ಪ್ರಾರಂಭವಾಗಲು ಸಾಕಷ್ಟು ಕಾರಣಗಳಾದವು. ಮೈಸೂರು, ಮದ್ರಾಸ, ಹೈದರಾಬಾದಗಳ ಬಗ್ಗೆ ಇಂಗ್ಲೀಷರಿಗೆ ಚಿಂತೆಯಿರಲಿಲ್ಲ. ಆದರೆ ಕರ್ನಾಟಕದಲ್ಲಿ ಯಾವಾಗ ಏನಾಗುವದೊ ಎಂದು ಅವರು ತುಂಬಾ ಹೆದರಿಕೊಂಡಿದ್ದರು. ೧೮೧೮ರ ವರೆಗೆ ಕರ್ನಾಟಕದಲ್ಲಿ ಪೇಶ್ವೆಯರ ರಾಜ್ಯವೇ ಇತ್ತು. ಬೆಳಗಾವಿ, ನಿಪ್ಪಾಣಿಗಳಂಥ ಊರುಗಳನ್ನು ಸಹ ಕಂಪನಿಸರಕಾರವು ಯುದ್ಧಮಾಡದೆ ವಶಮಾಡಿಕೊಳ್ಳುವದು ಸಾಧ್ಯವಾಗಲಿಲ್ಲ. ಮಿರಜ, ಸಾಂಗಲಿಗಳಿಂದ ನರಗುಂದ, ರಾಮದುರ್ಗಗಳವರೆಗೆ ಕರ್ನಾಟಕದ ತುಂಬ ಪೇಶ್ವೆಯರ ಮಾಂಡಲಿಕರೇ ಇದ್ದರು. ಸಾಂಗಲಿ, ಜಮಖಂಡಿ, ಮಿರಜ ಮತ್ತು ಕುರಂದವಾಡ ಈ ಎಲ್ಲ ಸಂಸ್ಥಾನಿಕರು ಒಂದೇ ಪಟವರ್ಧನ ಕುಟುಂಬದವರಿದ್ದು, ನಾನಾಸಾಹೇಬನು ಸಾಂಗಲಿಯ ರಾಜನ ತಂಗಿಯನ್ನೇ ಮದುವೆಯಾಗಿದ್ದನು. ಈ ಎಲ್ಲ ಸಂಸ್ಥಾನಿಕರು ಈಗ ಇಂಗ್ಲೀಷರ ಮಾಂಡಲಿಕರಾಗಿದ್ದರೂ ಪೇಶ್ವೆ ಮನೆತನದ ಬಗ್ಗೆ ಇವರಿಗೆ ಅನನ್ಯ ಭಕ್ತಿಭಾವಗಳಿವೆ ಎಂಬುದು ಇಂಗ್ಲೀಷರಿಗೆ ಗೊತ್ತಿತ್ತು. ಮುಂದೆ ನಡೆದ ಘಟನೆಗಳಿಂದ ತಮ್ಮ ಸಂಶಯವು ನಿರಾಧಾರವಾದುದಲ್ಲವೆಂದು ಇಂಗ್ಲೀಷರಿಗೆ ತುಂಬಾ ಮನವರಿಕೆಯಾಯಿತು.

ಕರ್ನಾಟಕದ ಸಂಸ್ಥಾನಿಕರೆಲ್ಲರೂ ಅನೇಕ ಕಾರಣಗಳಿಗಾಗಿ ಇಂಗ್ಲೀಷರ ಮೇಲೆ ಸಿಟ್ಟಾಗಿದ್ದರು. ಪ್ರತಿಯೊಬ್ಬ ಸಂಸ್ಥಾನಿಕನ ಹತ್ತರ ಅವನ ಗೌರವಾರ್ಥವಾಗಿ ಕೆಲವು ಸೈನ್ಯ, ಶಸ್ತ್ರಾಸ್ತ್ರಗಳು, ಒಂದು ಭದ್ರವಾದ ಕೋಟೆ ಮತ್ತು ಇನಾಮು ಹೊಲಗಳು ಇರುತ್ತಿದ್ದವು. ಇನಾಮದಾರರು ಕಂದಾಯವನ್ನು ಸಂಗ್ರಹಿಸಿ ಸರಕಾರಕ್ಕೆ ಕಳಿಸುವ ಪದ್ಧತಿಯು ಅಳಿದುಹೋಗಿತ್ತು. ಈ ಶಸ್ತ್ರಾಸ್ತ್ರಗಳು, ಕೋಟೆಗಳು ಮತ್ತು ಇನಾಮು ಹೊಲಗಳನ್ನು ಸಂಸ್ಥಾನಿಕರಿಗೆ ಯಾಕೆ ಬಿಡಬೇಕೆಂಬ ಧೋರಣೆಯನ್ನು ಕಂಪನಿಸರಕಾರವು ಅನುಸರಿಸಹತ್ತಿತು. ವಾರಸದಾರರಿಲ್ಲದವರಿಗೆ ದತ್ತಕ ಮಾಡಿಕೊಳ್ಳಲಂತೂ ಡಾಲಹೌಸಿಯು ಎಂದೂ ಅಪ್ಪಣೆಕೊಡುತ್ತಿರಲಿಲ್ಲ. ಶಸ್ತ್ರಾಸ್ತ್ರಗಳಿಗೆ ಲೈಸೆನ್ಸ್ ಬೇಕೆಂದು ಕಂಪನಿ

ಸರಕಾರವು ಒಂದು ಕಾಯದೆಯನ್ನು ತಂದು ೧೮೫೭ರಲ್ಲಿ ಸಾರ್ವತ್ರಿಕ ನಿಃಶಸ್ತ್ರೀ ಕರಣದ ಕಾರ್ಯಕ್ರಮವನ್ನು ಪ್ರಾರಂಭಮಾಡಿತು. ಹುಬ್ಬಳ್ಳಿ, ಬಾಗಲಕೋಟೆ ಮೊದಲಾದ ನಗರಗಳಲ್ಲಿ ಈ ಕಾಯದೆಯ ಮೇರೆಗೆ ಕತ್ತಿ-ಕಠಾರಿಗಳನ್ನು, ಬಂದೂಕುಗಳನ್ನು, ಬರ್ಚಿ-ಭಾಲೆಗಳನ್ನೂ ಜನರಿಂದ ಜಪ್ತಮಾಡಲಾಯಿತು. ಆಗಸ್ಟ ಕೊನೆಯ ದಿನ ಏನಾದರೂ ಗಲಭೆಯಾಗುವದೆಂದು ಕಂಪನಿ ಅಧಿಕಾರಿ ಗಳಿಗೆ ಬಾಗಲಕೋಟೆಯಲ್ಲಿ ಯಾರೋ ಹೇಳಿದ್ದರಿಂದ ಎರಡು ದಿನ ಮೊದಲು ೬೫೦ ಕತ್ತಿಗಳನ್ನೂ, ೧೭ ಚೂರಿಗಳನ್ನೂ, ೫ ಪಿಸ್ತೂಲುಗಳನ್ನೂ, ೨೫ ಬಂದೂಕುಗಳನ್ನೂ ಮತ್ತು ನಾಲ್ಕು ಭಲ್ಲೆಗಳನ್ನೂ ಜನರಿಂದ ಜಪ್ತಿ ಮಾಡ ಲಾಗಿತ್ತು. ಕೇವಲ ಆತ್ಮರಕ್ಷಣೆಗೆಂದು ಹತ್ತಿರ ಕಾಯ್ದಿಟ್ಟುಕೊಂಡ ಚಿಕ್ಕ ಪುಟ್ಟ ಶಸ್ತ್ರಾಸ್ತ್ರಗಳೂ ಕೈಬಿಟ್ಟು ಹೋಗಲು ಸಭ್ಯಗೃಹಸ್ಥರಿಗೂ ಸಹ ಸರ ಕಾರದಿಂದ ಒಂದು ಬಗೆಯ ಅವಮಾನವಾದಂತಾಯಿತು. ಸ್ವಾಭಿಮಾನಕ್ಕೆ ಈ ಬಗೆಯ ಭಂಗಬಂದದ್ದೇ ಕಾರಣವಾಗಿ ಹಲಗಲಿಯ ಬೇಡರು ಪ್ರಾಣ ಹೋದರೂ ಶಸ್ತ್ರಗಳನ್ನು ಕೊಡಲಿಲ್ಲ.

೧೮೫೭ರ ಪ್ರಾರಂಭದಲ್ಲಿ ಇಂಗ್ಲೀಷ ಸರಕಾರವು ನರಗುಂದ ಬಾಬಾ ಸಾಹೇಬನಿಗೂ ಮುಂಡರಗಿ ಭೀಮರಾಯನಂಥ ಜಮೀನದಾರರಿಗೂ ಉಪಟಳ ಕೊಡಹತ್ತಿತು. ಉತ್ತರದಲ್ಲಿಯ ಪರಿಸ್ಥಿತಿಯಿಂದ ದಕ್ಷಿಣದಲ್ಲಿಯೂ ಸರಕಾರಕ್ಕೆ ಯಾರ ಮೇಲೆಯೂ ವಿಶ್ವಾಸವು ಉಳಿಯಲಿಲ್ಲ. ಕಾಲ್ಪಿ, ಝಾಂಸಿ, ಗ್ವಾಲೇರಗಳಲ್ಲಿ ನಾನಾ, ತಾತ್ಯಾ ಮತ್ತು ಲಕ್ಷ್ಮೀಬಾಯಿ ಇಂಗ್ಲೀಷರ ಕೂಡ ಭೀಕರ ಕಾಳಗದಲ್ಲಿ ತೊಡಗಿರುವದು ಕರ್ನಾಟಕದಲ್ಲಿ ಎಲ್ಲರಿಗೂ ಗೊತ್ತಿತ್ತು.

ನರಗುಂದ ಬಾಬಾಸಾಹೇಬನು ಕಂಪನಿಸರಕಾರದ ಮಾಂಡಲೀಕನೆ ಆಗಿ ದ್ದನು. ಮೊದಲಿನಿಂದಲೂ ಬ್ರಿಟಿಶರ ವಿರುದ್ಧ ಯಾವ ಕೃತಿಗಳನ್ನೂ ಅವನು ಮಾಡಿರಲಿಲ್ಲ. ಅವನ ಹತ್ತಿರ ತನ್ನ ಗೌರವಕ್ಕೆ ಯೋಗ್ಯವಾಗುವಂತೆ ಕೆಲವು ಹಳೆಯ ನಮೂನೆಯ ತೋಫುಗಳು, ಬಂದೂಕುಗಳು, ಅಲ್ಪಸ್ವಲ್ಪ ಮದ್ದುಗುಂಡು ಗಳೂ ಇದ್ದಿರಬೇಕು. ಕಂಪನಿಸರಕಾರದ ಸೈನ್ಯಶಕ್ತಿಗೆ ಇವು ಒಂದುದಿನ ಸಹ ಈಡಾಗುವಂತಿರಲಿಲ್ಲ. ಆದರೂ ಶೂರ ಸರಕಾರದ ಕಣ್ಣಿನಲ್ಲಿ ಇವು ಒತ್ತತೊಡ ಗಿದವು. ಹತ್ತಿರ ಏನೂ ಶಸ್ತ್ರಾಸ್ತ್ರಗಳನ್ನಿಟ್ಟುಕೊಳ್ಳದೆ ಎಲ್ಲವನ್ನೂ ಧಾರವಾಡಕ್ಕೆ ಕಳಿಸಿಕೊಡಬೇಕೆಂದು ಬಾಬಾಸಾಹೇಬನಿಗೆ ಧಾರವಾಡ ಕಲೆಕ್ಟರರ ಹುಕುಮು ಹೋಯಿತು; ಈ ಅನಿಶ್ಚಿತ ವಾತಾವರಣದಲ್ಲಿ ಶಸ್ತ್ರಾಸ್ತ್ರಗಳು ಬಂಡುಗಾರರ

ಕೈಗೆ ಬೀಳಬಹುದಾದ್ದರಿಂದ ನೀನು ಎಲ್ಲವನ್ನೂ ಸರಕಾರಕ್ಕೆ ಒಪ್ಪಿಸಿಬಿಡು ಎಂದು ಬಾಬಾಸಾಹೇಬನಿಗೆ ಕಲೆಕ್ಟರರು ಬರೆದಿದ್ದರು. ಬಾಬಾಸಾಹೇಬನಿಗೆ ಈ ಅವಮಾನ ಅಸಹ್ಯವೆನಿಸಿರುವದು ಸಹಜವಾಗಿದೆ. ಬಾಬಾಸಾಹೇಬನ ಹತ್ತಿರ ೬೮೬ ತೋಫಿನ ದೊಡ್ಡ ಗುಂಡುಗಳು, ೯೨೪ ಸಣ್ಣ ಗುಂಡುಗಳು ಮತ್ತು ಸುಮಾರು ೧೮೦೦೦ ಪೌಂಡು ಮದ್ದು ಇತ್ತು. ಸರಕಾರದ ಹುಕುಮು ಬಂದೊಡನೆ ಇವುಗಳ ಹೊರತಾಗಿ ಎಲ್ಲ ಚಿಲ್ಲರೆ ಶಸ್ತ್ರಗಳನ್ನು ಒಪ್ಪಿಸಿ ಮಳೆನಿಂತು ದಾರಿಯು ಸರಿಯಾದ ಮೇಲೆ ತೋಫುಗಳನ್ನು ಕಳಿಸುತ್ತೇನೆಂದು ಉತ್ತರ ಬರೆದು ಕಳಿಸಿದನು. ಈ ಅವಮಾನದ ಸಲುವಾಗಿ ಸರಕಾರದ ಬಗ್ಗೆ ಮಾತ್ರ ಬಾಬಾಸಾಹೇಬನ ಹೊಟ್ಟೆಯಲ್ಲಿ ಸಿಟ್ಟು ತುಂಬಿತು. ನಾವು ಹಲ್ಲುಮುರಿದ ಹಾವಿನಂತೆ ಯಾಕೆ ಆಗಬೇಕೆಂದು ಜನರು ಪ್ರಶ್ನೆಮಾಡಹತ್ತಿದರು. ನಿಃಶಸ್ತ್ರರಾಗಿ ಕೈಯಲ್ಲಿ ಬಳೆ ಇಟ್ಟು ಕೊಡ್ರಲು ಆಗಿನ ಜನ ಸಿದ್ಧರಿರಲಿಲ್ಲ. ಜನರು ನಿಃಶಸ್ತ್ರರಾಗುವವರೆಗೆ ಸರಕಾರಕ್ಕೆ ಧೈರ್ಯವಿರಲಿಲ್ಲ.

ಹೀಗೆಯೇ ಕಂಪನಿಸರಕಾರದ ಆಕ್ರಮಣವು ಇನ್ನೂ ಒಂದು ರೀತಿ ನಡೆಯಿತು. ಯಾರಿಗೂ ಇನಾಮು ಹೊಲಗಳನ್ನು ನಡೆಸಬಾರದೆಂದು ಸರಕಾರವು ನಿರ್ಧರಿಸಿತು. ಪೇಶ್ವೆಯರು ತಮ್ಮ ಆಳಿಕೆಯಲ್ಲಿ ಅನೇಕ ರೀತಿಯ ನಿಷ್ಠೆ ತೋರಿ ಸೇವೆ ಮಾಡಿದವರಿಗೆ ಧಾರವಾಡ, ಬೆಳಗಾವಿ ಮತ್ತು ವಿಜಾಪುರ ಜಿಲ್ಹೆಗಳಲ್ಲಿ ದೇಸಾಯಿ, ದೇಶಪಾಂಡೆ, ದೇಶಮುಖ, ಪಾಟೀಲ ಕುಲಕರ್ಣಿ ಮೊದಲಾದ ಅನೇಕ ಮಾದರಿಯ ವತನಗಳನ್ನು ಹಾಕಿಕೊಟ್ಟಿದ್ದರು. ಸರಕಾರದ ಭದ್ರತೆಗೆ ಅಪ್ರತ್ಯಕ್ಷವಾಗಿ ಇವರಿಂದ ನೆರವಾಗುವದೆಂಬ ಬುದ್ಧಿಯು ಆಗ ಇನ್ನೂ ಬ್ರಿಟಿಶರಿಗೆ ಬಂದಿರಲಿಲ್ಲ. ಈ ಹಕ್ಕುದಾರರು ತಮ್ಮ ಭೂಮಿಗಳ ಕಂದಾಯವನ್ನು ಸರಕಾರಕ್ಕೆ ಕೊಡುತ್ತಿರಲಿಲ್ಲ. ಇವರ ಸೇವೆ ಸರಕಾರಕ್ಕೆ ಅಗತ್ಯವಿಲ್ಲದಿರುವಾಗ ಇವರಿಗೆ ಯಾಕೆ ಈ ಸವಲತ್ತು ಎಂದು ಕಂಪನಿಸರಕಾರ ಲೆಕ್ಕಹಾಕಿತು. ಸರಕಾರದ ಆದಾಯವನ್ನು ಹೇಗೆ ಹೆಚ್ಚು ಮಾಡಬೇಕು ಎಂಬ ಒಂದೇ ವಿಚಾರವು ಆಗಿನ ಈಸ್ಟ ಇಂಡಿಯಾ ಕಂಪನಿಗೆ ಇತ್ತು. ಕರ್ನಾಟಕದಲ್ಲಿಯ ಎಲ್ಲ ಭೂಒಡೆಯರ ಒಡೆತನವು ಕ್ರಮಬದ್ಧವಾಗಿದೆಯೊ ಇಲ್ಲವೊ ಎಂಬುದನು ಪರಿಶೀಲನೆ ಮಾಡಲು ಒಂದು ಇನಾಮು ಕಮಿಶನ್ ಎಂಬ ವಿಚಾರಣೆ ಆಯೋಗವನ್ನು ನಿರ್ಮಾಣಮಾಡಿ ಕಾರ್ಯಪ್ರಾರಂಭಮಾಡಲಾಯಿತು. ಬೆಳಗಾವಿಯಲ್ಲಿ ಪೊಲಿಟಿಕಲ್ ಏಜಂಟನಾಗಿದ್ದ ಸಿಟನ್‌ಕರನು ಇಂಥ ಆಯೋಗವ

ಬೇಡವೆಂಬ ಅಭಿಪ್ರಾಯಪಟ್ಟನು. ಆದರೆ ಹೆಚ್ಚು ಉತ್ಪನ್ನದ ಆಸೆಯಿದ್ದ ಅವರು ಸಿಟನ್‌ಕರನ ಅಭಿಪ್ರಾಯವನ್ನು ತಿರಸ್ಕರಿಸಿದರು. ೧೮೫೩ರಿಂದಲೆ ಕಾರ್ಯ ಪ್ರಾರಂಭ ಮಾಡಿದ ಇನಾಂ ಕಮಿಶನನಿಗೆ ೧೮೫೬ರ ಸುಮಾರಿಗೆ ಒಂದು ಕ್ರಮಬದ್ಧತೆಯನ್ನು ಕಲ್ಪಿಸಿಕೊಟ್ಟು ಭರದಿಂದ ಕೆಲಸ ಮಾಡಹಚ್ಚಿದರು. ಆಯೋಗದಲ್ಲಿ ನ್ಯಾಯಮಾಡಲಿಕ್ಕೆ ಅನುಭವವಿದ್ದವರು ಯಾರೂ ಇರಲಿಲ್ಲ; ಸೈನ್ಯಾಧಿಕಾರಿಗಳೆ ಹೆಚ್ಚಾಗಿದ್ದರು. (Kaye, Vol. I, 127) ಇನಾಮು ಕಮಿಶನ್ನು ವಿಚಾರಣೆ ಪ್ರಾರಂಭಮಾಡಿದೊಡನೆ ಉತ್ತರಕರ್ನಾಟಕದ ಸಂಸ್ಥಾನಿಕರು, ಜಮೀನದಾರರು, ಜಹಾಗೀರದಾರರು, ಎಲ್ಲರೂ ಗಾಬರಿಯಾದರು. ಉತ್ತರಕರ್ನಾಟಕದಲ್ಲಿ ಆಗ ಇದ್ದ ಜಮೀನದಾರರು ಹೆಚ್ಚಾಗಿ ತಮ್ಮ ಜಮೀನುಗಳನ್ನು ಪೇಶ್ವೆಸರಕಾರದಿಂದ ಪಡೆದುಕೊಂಡಿದ್ದರು. ಪೇಶ್ವೆಸರಕಾರವು ಉರುಳಿದಾಗ ಉಂಟಾದ ಅರಾಜಕತೆಯ ಕಾಲಕ್ಕೆ ಕೆಲವರು ದೊಡ್ಡ ದೊಡ್ಡ ಆಸ್ತಿಗಳಿಗೆ ತಮ್ಮ ಹೆಸರು ಹಚ್ಚಿಬಿಟ್ಟಿದ್ದರು. ಆಯಾ ಆಸ್ತಿ ಪ್ರತ್ಯಕ್ಷ ಉಪಭೋಗ ಮಾಡುವವರದೆ ಎಂಬ ಕಲ್ಪನೆಯು ಆಗ ದೃಢವಾಗಿತ್ತು. "ಖಡ್ಗದಿಂದ ಗಳಿಸಿದ ಜಮೀನದಾರರು ಕಾಗದಗಳಿಂದ ಅವುಗಳನ್ನು ಕಾಪಾಡಲಿಲ್ಲ ಎಂಬುದೆ ಅವರ ತಪ್ಪಾಯಿತು."[1] ಆಯೋಗವು ಇಂಥದೊಂದು ಪರಿಶೀಲನೆ ನಡೆಸಲಿದೆ ಎಂಬ ವಾರ್ತೆ ಕೇಳಿದಕೂಡಲೆ ಎಷ್ಟೋ ಜಮೀನದಾರರು ಕೈಕಾಲು ಬಿಟ್ಟರು. ಅವರಿಗೆ ವಹಿವಾಟು ಅಥವಾ ಗ್ರಾಮ-ಉತಾರಗಳ ಹೊರತು ಏನೂ ಆಧಾರಗಳಿರಲಿಲ್ಲ. ಆದಷ್ಟು ಆಸ್ತಿಗಳನ್ನು ಜಪ್ತಮಾಡಬೇಕೆಂಬ ಧೋರಣೆಯನ್ನೇ ಇಟ್ಟುಕೊಂಡ ಆಯೋಗವು ಕೇವಲ ವಹಿವಾಟನ್ನು ಒಪ್ಪುತ್ತಿರಲಿಲ್ಲ. ಪ್ರತಿದಿನ ಜಪ್ತಾದ ಜಮೀನದಾರಿಗಳ ಸುದ್ದಿಗಳು ಜಿಲ್ಲೆಗಳಲ್ಲಿ ಹಬ್ಬತೊಡಗಿದವು. ನಿಪ್ಪಾಣಿ ಮತ್ತು ಜಾಂಬೋಟಿ ದೇಸಾಯರು ಈ ಆಯೋಗದ ಜಪ್ತಿ ಧೋರಣದ ಮೂಲಕವೆ ತಮ್ಮ ದೇಶಗತಿಯ ಬಹ್ವಂಶವನ್ನು ಕಳೆದುಕೊಂಡು ಕೊನೆಯವರೆಗೆ ಬ್ರಿಟಿಶರಿಗೆ ವೈರಿಗಳಾಗಿ ನಾಶಹೊಂದಿದರು. ಪರಂಪರಾಗತ ಆಸ್ತಿಯನ್ನೂ ಮರ್ಯಾದೆಯನ್ನೂ ಕಳೆಕೊಂಡವರಿಗೆ ಬಂಡಾಯದ ಹೊರತು ದಾರಿಯೇ ಇಲ್ಲದಾಯಿತು. "ಐದು ವರ್ಷಗಳಲ್ಲಿ ಆಯೋಗವು ೩೫೦೦೦ ಜಮೀನದಾರಿಗಳ ಹಕ್ಕಿನ ಪತ್ರಿಕೆಗಳನ್ನು ತಪಾಸಮಾಡಿತು. ಇದರಲ್ಲಿ

---

1 ಇನಾಂ ಕಮಿಶನಿಗೆ ಸಿಟನ್‌ಕರನು ಒಪ್ಪಿಸಿದ ಮನವಿ. (Kaye, Vol. I, 128.)

೨೧೦೦೦ ಆಸ್ತಿಗಳು ಸರಕಾರಕ್ಕೆ ಖಾಲಸಾ ಆದವು!!"[2] ಇದರಿಂದ ಹೊಲದೊಡೆಯರು ಬ್ರಿಟಿಶರಿಗೆ ಶಾಶ್ವತ ವೈರಿಗಳಾದರು.

ಆಯೋಗವು ಏನೂ ಅನ್ಯಾಯ ಮಾಡಿಲ್ಲವೆಂದು ಸಮರ್ಥನೆ ಮಾಡಿಕೊಳ್ಳುವವರೂ ಮುಂದೆ ಹೊರಟರು. ಬ್ರಿಟಿಶ್ ಅಧಿಕಾರಿಗಳಲ್ಲಿಯೇ ಆಯೋಗದ ಔಚಿತ್ಯದ ಬಗ್ಗೆ ಸಾಕಷ್ಟು ಮತಭೇದಗಳಾಗಿ ವಾಗ್ವಾದಗಳುಂಟಾದವು. ಯಾರಿಂದಲೂ ಜಮೀನು ಕಸಿದುಕೊಂಡಿಲ್ಲೆಂದು ಕೆಲವು ಬ್ರಿಟಿಶ್ ಅಧಿಕಾರಿಗಳು ಸಮರ್ಥನೆ ಮಾಡಿದ್ದಾರೆ. ಆದರೆ ಇನಾಮದಾರರಿಗೆ ಕರಮುಕ್ತತೆಯೇ ಮುಖ್ಯ ಗೌರವ ಮತ್ತು ಸವಲತ್ತು. ಅವುಗಳನ್ನು ಸೆಳೆದು ಭೂಮಿಯನ್ನು ಬಿಟ್ಟಿದ್ದೆ ನಿಮ್ಮ ಪುಣ್ಯ ಎಂದು ಅವರಿಗೆ ಹೇಳುವದು ಗಾಯದ ಮೇಲೆ ಬರೆ ಎಳೆದಂತೆಯೆ ಸರಿ. ಇನಾಮು ಕಮಿಶನ್ನು ಇನ್ನೂ ತನ್ನ ಕೆಲಸವನ್ನು ನಡೆಸಿದಾಗಲೆ ಕರ್ನಾಟಕದ ಜಮೀನದಾರರು ಬಂಡಾಯವನ್ನು ಸೇರಿಯೇ ಬಿಟ್ಟರು!

ಬೆಳಗಾವಿ ಜಿಲ್ಹೆಯಲ್ಲಿ ನಿಪ್ಪಾಣಿ, ಜಾಂಬೋಟಿ ಮತ್ತು ಕಿತ್ತೂರ ದೇಸಾಯರ ವಾರಸದಾರರು ಬ್ರಿಟಿಶರ ವಿರುದ್ಧ ಕೆಲವು ವಿಫಲ ಒಳಸಂಚುಗಳನ್ನು

---

2. *Narrative of the Bombay Inam Commission* ಎಂಬ ಒಂದು ವರದಿಯನ್ನು ಆಯೋಗದ ಅಧ್ಯಕ್ಷರಾದ ಕರ್ನಲ್ ಎಥ್ರಿಜ್ಜರು ೧೮೭೩ರಲ್ಲಿ ಪ್ರಸಿದ್ಧ ಮಾಡಿದ್ದಾರೆ. ಆಯೋಗವನ್ನು ಉಗ್ರವಾಗಿ ಟೀಕೆ ಮಾಡಿದ ಸರ್ ಜಾನ್ ಕೆ ಮತ್ತು ಸಿಟನ್ ಕರರಿಗೆ ಅವರು ತಮ್ಮ ವರದಿಯ ೯೨ನೆಯ ಕಲಮಿನಲ್ಲಿ ಸವಿಸ್ತರ ಉತ್ತರವನ್ನು ಕೊಟ್ಟಿರುವರು. ಕರ್ನಲ್ ಎಥ್ರಿಜ್ಜರು ಪ್ರಕಟಮಾಡಿದ ಅಂಕಿಸಂಖ್ಯೆಗಳೂ ಗಮನಾರ್ಹವಾಗಿವೆ. ಇನಾಮ ಕಮಿಶನ್ನು ೧೮೫೩ರಿಂದ ೧೮೬೭ರ ವರೆಗೆ ಹದಿನಾಲ್ಕು ವರ್ಷ ಕೆಲಸ ಮಾಡಿತು. ಆಯೋಗವು ಈ ಹದಿನಾಲ್ಕು ವರ್ಷಗಳಲ್ಲಿ ೮೫೯೯ ಆಸ್ತಿಗಳ ಹಕ್ಕು ಪತ್ರಿಕೆಗಳನ್ನು ತಪಾಸುಮಾಡಿತು. ಇದರಲ್ಲಿ ನಾಲ್ಕು ಸಾವಿರದಷ್ಟು ಆಸ್ತಿಗಳು ಕಂದಾಯವಿಲ್ಲದೆ ಇನಾಮಾಗಿ ಉಳಿಯಬಹುದೆಂದೂ ಸುಮಾರು ೩೬೦೦ ಆಸ್ತಿಗಳ ಮೇಲೆ ಆಯಾ ಜಮೀನದಾರನು ಸತ್ತಮೇಲೆ ಕರ ಕೊಡ್ರಿಸಬೇಕೆಂದೂ ೯೮೧ ಆಸ್ತಿಗಳ ಮೇಲೆ ಕೂಡಲೆ ಕರ ಕೂಡ್ರಿಸಬೇಕೆಂದೂ ಆಯೋಗವು ತೀರ್ಪುಕೊಟ್ಟಿದೆ.

ಸರ್ವಸಾಧಾರಣವಾಗಿ ಯಾರಿಂದಲೂ ಆಸ್ತಿಯನ್ನು ಜಪ್ತಿ ಮಾಡಿಲ್ಲವೆಂದು ಎಥ್ರಿಜ್ಜರು ಹೇಳಿದ್ದಾರೆ. ಪೂರಾ ಕರ ಕೊಡ್ರಿಸುವದೆ ಜಪ್ತಿ ಎಂಬ ವಿಕಲ್ಪನೆಯ ಮೂಲಕ ಕೆಲವು ಕಾಲ ಜಮೀನದಾರರಲ್ಲಿ ಅಸಂತೋಷವಾಗಿತ್ತು.

ಕೇನು ಕೊಟ್ಟ ಅಂಕಿಸಂಖ್ಯೆಗಳನ್ನು ಎಥ್ರಿಜ್ಜರು ನಿರಾಕರಿಸಿದ್ದಾರೆ.

ನಡೆಸಿದರು. ಕಿತ್ತೂರ ದೇಸಾಯರ ವಾರಸದಾರನಾದ ಶಿವಲಿಂಗಪ್ಪನು ಮೊಗಲಾಯಿ, ಗೋವಾ ಮತ್ತು ಕೊಲ್ಹಾಪುರಗಳಿಗೆ ಪತ್ರಗಳನ್ನು ಕಳಿಸಿ ಹೊರಗಿನವರ ಸಹಾಯದಿಂದ ಸಂಪಗಾವಿ ಮತ್ತು ಬೀಡಿ ತಾಲೂಕಗಳಲ್ಲಿ ಬಂಡಾಯವನ್ನು ಹೂಡಬೇಕೆಂದು ಪ್ರಯತ್ನ ನಡೆಸಿದ್ದನು. ಆದರೆ ಶಿವಲಿಂಗಪ್ಪನ ಆಪ್ತರಾದ ವಂಟಮುರಿ ದೇಸಾಯರು ಬ್ರಿಟಿಶರಿಗೆ ಬೇಗನೆ ಎಚ್ಚರಿಕೆ ಕೊಟ್ಟದ್ದರಿಂದ ಶಿವಲಿಂಗಪ್ಪನ ಒಳಸಂಚು ಕೃತಿಗಿಳಿಯಲಿಲ್ಲ. ( *Belgaum Dist. Gazeteer* ) ವಿಜಾಪುರ ಜಿಲ್ಹೆಯಲ್ಲಿ ಹಿಪ್ಪರಗಿ ತಾಲೂಕಿನ ಜಂಬಗಿಯ ದೇಶಮುಖರು ಕಂಪನಿ ಸರಕಾರದ ವಿರುದ್ಧ ಒಳಸಂಚು ಮಾಡಿ ತಮ್ಮ ಸರ್ವಸ್ವವನ್ನೂ ಕಳೆದುಕೊಂಡರು. ಕೊಟನಾಲ ಎಂಬಲ್ಲಿ ಇದ್ದ ಅವರ ಕಿಲ್ಲೆಯನ್ನು ಬ್ರಿಟಿಶರು ನೆಲಸಮ ಮಾಡಿಬಿಟ್ಟರು. ( *Bombay Committee Notes* ). ಜತ್ತ ಸಂಸ್ಥಾನಿಕನ ಮೇಲೆ ಒಳಸಂಚಿನ ಸಂಶಯವಿತ್ತು.

ಧಾರವಾಡ ಜಿಲ್ಹೆಯಲ್ಲಿ ನರಗುಂದ ಸಂಸ್ಥಾನ ಮತ್ತು ಮುಂಡರಗಿ ನಾಡಗೌಡರು ಬಂಡಾಯ ಹೂಡಿದ್ದಕ್ಕಾಗಿ ಒಳ್ಳೆ ಪ್ರಸಿದ್ಧಿಯನ್ನು ಪಡೆದರು. ಬಾಬಾಸಾಹೇಬ ಮತ್ತು ಭೀಮರಾಯ ವಿಶೇಷ ಗಂಭೀರಸ್ವರೂಪದ ಒಳಸಂಚನ್ನು ನಡೆಸಿದ್ದರು. ಇನಾಮ ಕಮಿಶನ್ನಿನ ಮೇಲೆ ಬಾಬಾಸಾಹೇಬನು ರಕ್ತಕಾರುತ್ತಿದ್ದನು. ಇವರಿಬ್ಬರಿಗೆ ಧಾರವಾಡ ಜಿಲ್ಹೆಯಲ್ಲಿ ಅನುಯಾಯಿಗಳೂ ಸಾಕಷ್ಟಿದ್ದರು. ಮಿರಜ ಗುಡಗೇರಿಗಳ ನಡುವೆ ಆಕ್ಷೇಪಾರ್ಹ ಪತ್ರವ್ಯವಹಾರವಿತ್ತೆಂಬ ಸಂಶಯದಿಂದ ಗುಡಗೇರಿ ಮಾಮಲೆದಾರನನ್ನೂ ಅವನ ಕಚೇರಿಯನ್ನೂ ಜಾಗರೂಕತೆಯಿಂದ ಝಡತಿ ಮಾಡಬೇಕೆಂದು ಪೋಲಿಟಿಕಲ್ ಏಜಂಟನಾದ ಮ್ಯಾನ್ಸೆನ್ ಸಾಹೇಬನು ಧಾರವಾಡ ಡಿ. ಎಸ್. ಪಿ. ಗೆ ಬರೆದ ಪ್ರಕಾರ ಅವನು ಸಹಜವಾಗಿ ಹೋಗಿ ತಪಾಸು ಮಾಡಲು ಕೆಲವು ಆಕ್ಷೇಪಾರ್ಹ ಸಾಹಿತ್ಯವು ಅವನಿಗೆ ಸಿಕ್ಕಿತು. ಗುಡಗೇರಿಯು ಆಗ ಮಿರಜ ಸಂಸ್ಥಾನದಲ್ಲಿತ್ತು. ಸಿಕ್ಕ ಸಾಹಿತ್ಯವನ್ನೆಲ್ಲ ಅಧಿಕಾರಿಗಳು ಪುಣೆಕ್ಕೆ ಕಳಿಸಿಕೊಟ್ಟರು. ಮಿರಜದ ಕೈಕೆಳಗಿರುವ ಲಕ್ಷ್ಮೇಶ್ವರದಲ್ಲಿ ಅಕ್ರಮ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಲಾಗಿತ್ತು. ಜಹಗೀರ ಪ್ರದೇಶಗಳಲ್ಲೆಲ್ಲ ಬಂಡಾಯದ ವಿಚಾರವು ಕೇಳಬರುತ್ತಿತ್ತು. ಲಕ್ಷ್ಮೇಶ್ವರ ಗುಡಗೇರಿಗಳಲ್ಲಿ ನಡೆದ ಝಡತಿ ಕಾರ್ಯಕ್ರಮದಿಂದ ಬಂಡುಗಾರರಿಗೆ ತಕ್ಕ ಮಟ್ಟಿಗೆ ಆಶ್ಚರ್ಯವೂ ತೊಂದರೆಯೂ ಆದವು.

ಹೀಗೆ ೧೮೫೭ ಆಗಸ್ಟ ತಿಂಗಳಿನಿಂದ ೧೮೫೮ ಮೇ ತಿಂಗಳ ವರೆಗೆ

ಧಾರವಾಡ ಜಿಲ್ಹೆಯ ವಾತಾವರಣವು ಪ್ರಕ್ಷುಬ್ಧವಾಗುತ್ತ ನಡೆಯಿತು. ಸರಕಾರವು ಎಂಥವರನ್ನೂ ಗೌರವದ ಬದಲು ಸಂಶಯ ಮತ್ತು ತಿರಸ್ಕಾರಗಳಿಂದ ನಡೆಸಿಕೊಳ್ಳಹತ್ತಿತು. ಅಂದಿನ ಸ್ವಾಭಿಮಾನಿ ಜನರಿಗೆ ಇಂಥ ವ್ಯವಹಾರ ಸೇರಿಕೆ ಬರಲಿಲ್ಲ. ಜನರ ಆಸ್ತಿಪಾಸ್ತಿಯನ್ನೂ ಶಸ್ತ್ರಾಸ್ತ್ರಗಳನ್ನೂ ಅಲ್ಲದೆ ಮಾನಮರ್ಯಾದೆಗಳನ್ನು ಸಹ ಕಂಪನಿಸರಕಾರವು ಬಿಡುವದಿಲ್ಲವೆಂಬುದು ಎಲ್ಲರಿಗೂ ಮನದಟ್ಟಾಯಿತು. ಈಗ ಅವರಿಗೆ ಪರಕೀಯರ ದಾಸ್ಯದ ಅರ್ಥವಾಗತೊಡಗಿತು. ಈ ಮೊದಲು ಹಿಂದುಸ್ತಾನವನ್ನು ಆಳಿದ ಯಾವ ಸಮ್ರಾ-ಟನೂ ಹೀಗೆ ಇರಲಿಲ್ಲ. ಮೊದಲಿನವರು ಎಲ್ಲರನ್ನೂ ಉದಾರತನದಿಂದಲೂ ಗೌರವದಿಂದಲೂ ನಡೆಸಿಕೊಳ್ಳುತ್ತಿದ್ದರು. ಕಂಪನಿ ಸರಕಾರವು ಹಿಂದೀಯರನ್ನು ಎಂದೂ ನಂಬಲಿಲ್ಲ; ಎಂದೂ ಅವರ ಉಪಕಾರ ಸ್ಮರಿಸಲಿಲ್ಲ; ಮತ್ತು ಜನರ ಸಂಪತ್ತನ್ನು ಸುಲಿಯುವ ಹೊರತು ಬೇರೆ ಯಾವ ಉದ್ದೇಶವೂ ಅವರಿಗಿಲ್ಲಿಲ್ಲ. ಇದರಿಂದ ಜನರಲ್ಲಿ ಅಸಮಾನ ಅಸಹ್ಯಗಳು ಹೆಚ್ಚಾದವೆಂಬುದು ಸಹಜ.

ನರಗುಂದ ಮತ್ತು ಮುಂಡರಗಿ ಎರಡೂ ಬಂಡಾಯಗಳು ಒಂದೇ ಕಾಲಕ್ಕೆ ನಡೆದವು. ಬಾಬಾಸಾಹೇಬ ಮತ್ತು ಭೀಮರಾಯ ಇವರು ಕೊನೆಯವರೆಗೆ ತಮ್ಮ ಹಟವನ್ನು ಸಾಧಿಸಿದರೆ ಹೊರತು ಗೌರವವನ್ನು ಕಳೆದುಕೊಳ್ಳಲಿಲ್ಲ.

ದಕ್ಷಿಣ ಮರಾಠಾ ಸಂಸ್ಥಾನಗಳ ರಾಜಕೀಯ ಅಧಿಕಾರಿಯೂ ಬೆಳಗಾವಿ ಕಲೆಕ್ಟರನೂ ಆದ ಸಿಟನ್‌ಕರನಿಗೆ ಕಾರ್ಯಭಾರವು ಹೆಚ್ಚಾಗತೊಡಗಲು ಈ ಎರಡೂ ಕಾರ್ಯಶಾಖೆಗಳನ್ನು ವಿಭಾಗಿಸಬೇಕೆಂದು ಎಪ್ರಿಲ್ ೧೮೫೮ರಲ್ಲಿ ಅವನು ಮುಂಬೈಸರಕಾರಕ್ಕೆ ವಿನಂತಿಮಾಡಿಕೊಂಡನು. ಇನಾಮು ಕಮಿಶನ್ನಿಗೆ ಸಿಟನ್‌ಕರನು ವಿರೋಧಿಯಾಗಿದ್ದು ಕರ್ನಾಟಕದಲ್ಲಿ ಎಲ್ಲರಿಗೂ ಗೊತ್ತಿತ್ತಾದ್ದರಿಂದ ನರಗುಂದಕರ, ಜಮುಖಂಡಿಕರ ಪ್ರಭೃತಿಗಳನ್ನೊಳಗೊಂಡ ಎಲ್ಲರೂ ಸಿಟನ್‌ಕರನ ಪರಮಸ್ನೇಹಿತರಾಗಿದ್ದರು. ಹೀಗೆಯೆ ಬಲಪ್ರಯೋಗವಿಲ್ಲದೆ ಕರ್ನಾಟಕವನ್ನೆಲ್ಲ ಶಾಂತಮಾಡಿಬಿಡಬೇಕೆಂದು ಅವನು ಹವಣಿಸಿದ್ದನು. ಚಾರ್ಲಸ್ ಮ್ಯಾನ್ಸನ ಎಂಬ ಓರ್ವ ನೂತನ ಐ. ಸಿ. ಎಸ್. ಆಂಗ್ಲ ತರುಣನು ಆದೇ ಹೊಸತಾಗಿ ಸಿಟನ್‌ಕರನ ಕೈಯೊಳಗೆ ಅಸಿಸ್ಟಂಟ ಪೊಲಿಟಿಕಲ್ ಏಜಂಟನೆಂದು ಕೆಲಸ ಮಾಡಲು ನೇಮಕ ಹೊಂದಿದ್ದನು. ಮ್ಯಾನ್ಸ

ನ್ನನು ಸಾಹಸಿಯೂ ಧೈರ್ಯಶಾಲಿಯೂ ಆಗಿದ್ದನಲ್ಲವೆ ಡಾಲಹೌಸಿಯ ಎಲ್ಲ ವಿಚಾರಗಳಿಂದಲೂ ತನ್ನ ತಲೆಯನ್ನು ತುಂಬಿಕೊಂಡಿದ್ದನು. ಭಾರತದ ಅಸಂಖ್ಯ ನರೇಂದ್ರರನ್ನು ನೆಲಸಮ ಮಾಡದ ವಿನಃ ಬ್ರಿಟಿಶರ ಸಾಮ್ರಾಜ್ಯ ಶಾಹಿಯು ಭಾರತದಲ್ಲಿ ದೃಢವಾಗಲಾರದೆಂದು ಮ್ಯಾನ್ಸನ್ ಸಾಹೇಬನು ಪೂರಾ ನಂಬಿದ್ದನು. ಇತ್ತೀಚೆಗೆ ಮ್ಯಾನ್ಸನ್ನನನ್ನು ಇನಾಮು ಕಮಿಶನದಲ್ಲಿ ಸೇರಿಸಿಕೊಳ್ಳಲಾಗಿತ್ತು. ಮುಂಬೈ ಸರಕಾರವು ಸಿಟನ್‌ಕರನ ವಿನಂತಿಯನ್ನು ಮನ್ನಿಸಿ ಮ್ಯಾನ್ಸನ್ ಸಾಹೇಬನನ್ನು ಪೊಲಿಟಿಕಲ ಏಜಂಟನನ್ನಾಗಿ ನೇಮಿಸಿ ಬಿಟ್ಟಿತು.

೧೬—೫—೧೮೫೮ನೆಯ ದಿನ ಮ್ಯಾನ್ಸನ್ನನು ಹೊಸ ಹುದ್ದೆಯನ್ನು ಸ್ವೀಕಾರಮಾಡಿದನು. ಮೇ ತಿಂಗಳ ೨೬ನೆಯ ತಾರೀಖಿನ ವರೆಗೆ ಅವನು ಕೊಲ್ಹಾಪುರದಲ್ಲಿ ಜೇಕಬ್ ಸಾಹೇಬನ ಹತ್ತಿರ ಉಳಿದಿದ್ದನು. ಮೇ ೨೬ಕ್ಕೆ ಹೊಸತಾಗಿ ತನ್ನ ಅಧಿಕಾರಕ್ಷೇತ್ರದಲ್ಲಿ ಬಂದ ಕರ್ನಾಟಕದ ಸಂಸ್ಥಾನಗಳ ಸಂಚಾರಕ್ಕಾಗಿ ಮ್ಯಾನ್ಸನ್ನನು ಕೊಲ್ಹಾಪುರದಿಂದ ಹೊರಟನು. ಅಷ್ಟರಲ್ಲಿ ಜನರಲ್ ಲೆಸ್ಟರನಿಂದ ಜೇಕಬನಿಗೆ ಬಂದ ಒಂದು ತಂತಿಯ ಮೂಲಕ ನರಗುಂದಕರನು ಬಂಡಾಯಹೂಡಿರುವನೆಂದು ತಿಳಿಯಿತು. ಜನರಲ್ ಲೆಸ್ಟರನು ನರಗುಂದಕ್ಕೆ ಸೈನ್ಯ ಕಳಿಸತಕ್ಕದ್ದೆಂದೂ ಮ್ಯಾನ್ಸನ್ನನು ಹೆಚ್ಚಿನ ವಿಚಾರ ವಿನಿಮಯಗಳಿಗಾಗಿ ಕೂಡಲೆ ಕೊಲ್ಹಾಪುರಕ್ಕೆ ಮರಳಿ ಬರಬೇಕೆಂದೂ ಜೇಕಬ್ ಸಾಹೇಬನು ಆಜ್ಞಾಪಿಸಿದನು. ಜೇಕಬ್ಬನ ಪತ್ರವು ಮ್ಯಾನ್ಸನ್ನನಿಗೆ ಕುರಂದವಾಡದಲ್ಲಿ ಮುಟ್ಟಿತು. ಆದರೆ ಮ್ಯಾನ್ಸನ್ ಸಾಹೇಬನು ಕೊಲ್ಹಾಪುರಕ್ಕೆ ಮರಳಲಿಲ್ಲ. ಕುರಂದವಾಡದಿಂದ ಒಳದಾರಿ ಹಿಡಿದು ತಾನು ಬೇಗನೆ ನರಗುಂದವನ್ನು ಮುಟ್ಟುವೆನೆಂದೂ ಬಂಡಾಯದಲ್ಲಿ ಬೀಳದಿರಲು ಬಾಬಾಸಾಹೇಬನಿಗೆ ಬುದ್ಧಿಹೇಳುವೆನೆಂದೂ ಜೇಕಬ್ಬನಿಗೆ ತಿಳಿಸಿ ಮ್ಯಾನ್ಸನ್ನನು ನರಗುಂದಕ್ಕೆ ಹೊರಟನು. ಬಾಬಾಸಾಹೇಬನಿಗೂ ಮ್ಯಾನ್ಸನ್ನನಿಗೂ ಸಾಕಷ್ಟು ಪರಿಚಯ ಮತ್ತು ಸ್ನೇಹವಿತ್ತು. ಆದರೆ ಬಾಬಾಸಾಹೇಬನ ಇತ್ತೀಚಿನ ಬೆಂದುಹೋದ ಅಂತರಂಗವನ್ನು ಸಿಟನ್‌ಕರನಂತೆ ತಿಳಿದುಕೊಳ್ಳುವಷ್ಟು ಮ್ಯಾನ್ಸನ್ನನು ನುರಿತವನಿರಲಿಲ್ಲ. ಮೇ ೨೯ಕ್ಕೆ ಮ್ಯಾನ್ಸನ್ ಸಾಹೇಬನು ರಾಮದುರ್ಗದಲ್ಲಿದ್ದನು. ಬಾಬಾಸಾಹೇಬನು ಬಂಡಾಯದಲ್ಲಿ ಪೂರಾ ಸೇರಿಯೇ ಬಿಟ್ಟಿರುವನೆಂದೂ ಅವನ ಭೆಟ್ಟಿಗೆ ಹೋಗುವದರಲ್ಲಿ ಹುರುಳಿಲ್ಲವೆಂದೂ ಮ್ಯಾನ್ಸ

ನ್ನನಿಗೆ ಮನವರಿಕೆಯಾಯಿತು. "ಜಮುಖಂಡಿಕರನಂತೆ ಬ್ರಿಟಿಶರಿಂದ ಕೈದು ಆಗಿ ಮಾನಭಂಗ ಹೊಂದುವ ಮೊದಲು ನಾನು ಸಾವನ್ನಪ್ಪುತ್ತೇನೆ." (Malleson Vol. 3 239) ಎಂದು ಬಾಬಾಸಾಹೇಬನು ತನ್ನ ತಮ್ಮನಾದ ರಾಮದುರ್ಗ ಅರಸನಿಗೆ ಪತ್ರಬರೆದು ಆ ಪತ್ರದಲ್ಲಿ ನೀನೂ ಬಂಡಾಯ ಸೇರು ಎಂದು ಆಹ್ವಾನಿಸಿದ್ದನು. ಜಮುಖಂಡಿಕರನನ್ನು ಮ್ಯಾನ್ಸನ್ನನೆ ಬಂಧನದಲ್ಲಿಟ್ಟಿದ್ದನು. ಜಮುಖಂಡಿಕರನೂ ಬಾಬಾಸಾಹೇಬನೂ ಆಪ್ತರಾದ್ದರಿಂದ ಇದರಿಂದ ಬಾಬಾಸಾಹೇಬನಿಗೆ ಬಹಳ ಸಿಟ್ಟುಬಂದಿತ್ತು.

ರಾಮದುರ್ಗ ಅರಸನು ಬಂಡಾಯದಿಂದ ದೂರ ಉಳಿದು ಬಾಬಾಸಾಹೆಬನ ಪತ್ರವನ್ನು ಮ್ಯಾನ್ಸನ್ನನಿಗೆ ಒಪ್ಪಿಸಿಬಿಟ್ಟನು. ಮ್ಯಾನ್ಸನ್ ಸಾಹೇಬನು ರಾಮದುರ್ಗ ಮುಟ್ಟುವ ಮೊದಲೆ ಕಲಾದಗಿಯ ದಕ್ಷಿಣ ಮರಾಠಾ ಅಶ್ವದಳದ ಅಧಿಪತಿಯಾದ ಕರ್ನಲ್ ಜಾರ್ಜ ಮಾಲ್ಕಮ್ಮನಿಗೆ ಸೈನ್ಯ ತೆಗೆದುಕೊಂಡು ರಾಮದುರ್ಗಕ್ಕೆ ಬರಬೇಕೆಂದು ಸಂದೇಶವನ್ನು ಕಳಿಸಿಕೊಟ್ಟಿದ್ದನು. ಕರ್ನಲ್ ಮಾಲ್ಕಮ್ಮನಿಗೆ ಮ್ಯಾನ್ಸನ್ನನ ಸಂದೇಶವು ಮುಟ್ಟಲೇ ಇಲ್ಲ. ಮುಂಡರಗಿ ಭೀಮರಾಯನು ಡಂಬಳ ಸರಕಾರಿ ಖಜಾನೆಯನ್ನು ಲೂಟಿ ಮಾಡಿರುವನೆಂಬ ವಾರ್ತೆ ಕೇಳಿ ಅವನು ಅತ್ತ ಹೋಗಿಬಿಟ್ಟದ್ದನು!

ಮ್ಯಾನ್ಸನ್ನನು ಮೇ ೨೯ನೆಯ ಸಾಯಂಕಾಲ ಐದುಗಂಟೆಗೆ ರಾಮದುರ್ಗದಿಂದ ಧಾರವಾಡಕ್ಕೆ ಹೊರಟನು. ರಾಮದುರ್ಗ ಅರಸ ರಾಮರಾಯನು ಸಂಜೆ ಹೊತ್ತು ಹೀಗೆ ಹೊರಡುವದು ಸುರಕ್ಷಿತವಲ್ಲವೆಂದು ಮ್ಯಾನ್ಸನ್ನನಿಗೆ ಅಂಗಲಾಚಿ ಹೇಳಿದನು. ಆದರೂ ಅವನು ಕೇಳಲಿಲ್ಲ. ಸಾಹೇಬನು ಒಂದು ಬೂದಿಬಣ್ಣದ ಕುದುರೆ ಹತ್ತಿ ಹೊರಟನು. ದಕ್ಷಿಣ ಮರಾಠಾ ಅಶ್ವದಳದ ಪೂರಣಸಿಂಗ ಎಂಬ ತುಂಬಾ ಸ್ವಾಮಿನಿಷ್ಠನಾಗಿದ್ದ ಓರ್ವ ಅಂಗರಕ್ಷಕನು ಮತ್ತು ಹತ್ತೆಂಟು ಸವಾರರು ಮಾತ್ರ ಅವನೊಡನೆ ಇದ್ದರು. ಸುರೆಬಾನ ಎಂಬ ಹಳ್ಳಿಗೆ ಅವರು ಬಂದು ಮುಟ್ಟುವದರೊಳಗೆ ರಾತ್ರಿ ಹತ್ತುಗಂಟೆಯಾಯಿತು. ಎಲ್ಲರೂ ದಣಿದಿದ್ದರಿಂದ ಮ್ಯಾನ್ಸನ್ನನ ಮೇಣೆಯನ್ನು ಇಳಿಸಿ ಊರಹೊರಗಿನ ಹನುಮನ ದೇವಾಲಯದಲ್ಲಿ ಶಿಬಿರಹೊಡೆದರು. ಸಾಹೇಬನು ಗುಡಿಯೊಳಗೆ ಮಲಗಿದನು. ಪೂರಣಸಿಂಗನೂ ಹತ್ತಿರದಲ್ಲಿಯೇ ಇದ್ದನು. ಸವಾರರು ಕೆಲವು ಕಾಲ ಹೊರಗೆ ಉರಿ ಹಾಕಿ ಕುಳಿತು ನಿದ್ದೆ ಬಂದ ಹಾಗೆ ಒಬ್ಬೊಬ್ಬರೇ ಮಲಗಿಬಿಟ್ಟರು.

ಬಾಬಾಸಾಹೇಬನು ಮಧ್ಯರಾತ್ರಿ ಸುಮಾರು ನೂರಿನ್ನೂರು ಜನರೊಡನೆ ಸಾಹೇಬನ ಶಿಬಿರದ ಮೇಲೆ ದಾಳಿ ಮಾಡಿದನು. ರಾಮದುರ್ಗದಿಂದ ಮ್ಯಾನ್ಸನ್ ಸಾಹೇಬನು ಬರೆದ ಪತ್ರವನ್ನೋದಿ ಬಾಬಾಸಾಹೇಬನು ತುಂಬಾ ಬೇಗಿಯೇ ಅಲ್ಲಿ ಬಂದಿದ್ದನು. ಬಾಬಾಸಾಹೇಬನ ಜನರು ಶಿಬಿರದ ಕಾವಲುಗಾರರನ್ನು ಕೊಂದು ಮಲಗಿದವರ ಮೇಲೆ ಬಿದ್ದರು. ವಿಷ್ಣು ಹಿರೆಕೊಪ್ಪ ಮತ್ತು ಇನ್ನಿತರ ನಾಲ್ಕೈದು ಮಂದಿ ಗುಡಿಯೊಳಗೆ ಹೋಗುವದರೊಳಗೆ ಸಾಹೇಬನು ಗಾಬರಿಯಿಂದ ಎದ್ದು ತನ್ನ ಹತ್ತಿರವಿದ್ದ ಪಿಸ್ತೂಲನ್ನು ಹಾರಿಸಿ ಓರ್ವನನ್ನು ಗಾಯಗೊಳಿಸಿದನು. ಅಷ್ಟರಲ್ಲಿ ಎಲ್ಲರೂ ಅವನಮೇಲೆ ಬಿದ್ದು ಒಂದು ಕ್ಷಣದಲ್ಲಿ ಅವನನ್ನು ಕೊಲೆಮಾಡಿಬಿಟ್ಟರು. ಅವನ ಅಂಗರಕ್ಷಕನಾದ ಪೂರಣಸಿಂಗನೂ ಅವನೊಡನೆ ಮಡಿದನು. ಸಾಹೇಬನ ಶಿರಚ್ಛೇದ ಮಾಡಿ ಅವನ ದೇಹವನ್ನು ಬೆಂಕಿಯಹತ್ತಿರ ಒಗೆಯಲು ಒಂದು ಕೈ ಪೂರಾ ಸುಟ್ಟುಹೋಯಿತು. ಮ್ಯಾನ್ಸನ್ನನ ರುಂಡವು ೩೦ನೆಯ ತಾರೀಖು ಬೆಳಗು ಹರಿಯುವಷ್ಟರಲ್ಲಿ ನರಗುಂದ ಅಗಸೆಬಾಗಿಲಿಗೆ ನೇತಾಡುತ್ತಿತ್ತು !!

ರಾಮದುರ್ಗ ಮತ್ತು ಸುರೆಬಾನ ಜನರು, ನರಗುಂದದ ದಂಡು ದಾಳಿ ಮಾಡುವದೆಂಬ ಭಯದಿಂದ ಊರು ಬಿಟ್ಟು ಓಡಿಹೋದರು. ಮರುದಿನ ದೇವಾಲಯದ ಸುತ್ತಲೂ ಬಿದ್ದ ಹೆಣಗಳಿಗೆ ಯೋಗ್ಯ ಸಂಸ್ಕಾರಮಾಡುವವರು ಸಹ ದಿಕ್ಕಿರಲಿಲ್ಲ.[3]

ಬಾಬಾಸಾಹೇಬನು ಇಂಗ್ಲೀಷರ ಮೇಲೆ ಇಷ್ಟು ಸಿಟ್ಟಾಗಲು ಸಾಕಷ್ಟು ಕಾರಣಗಳಾದವು. ನರಗುಂದವು ಕರ್ನಾಟಕದಲ್ಲಿಯೇ ಹಳೆಯ ಮತ್ತು ಹಿರಿಯ ರಾಜ್ಯ. ನರಗುಂದ ಕೋಟೆಯನ್ನು ಛತ್ರಪತಿ ಶಿವಾಜಿಯು ೧೬೭೪ರಲ್ಲಿ ಕಟ್ಟಿಸಿದನೆಂದು ಹೇಳುತ್ತಾರೆ. ಕೋಟೆಯು ಗುಡ್ಡದ ಮೇಲೆ ಇದ್ದು ಅತ್ಯಂತ ಭದ್ರವೂ ಅನುಕೂಲವೂ ಆಗಿತ್ತು. ಬಾಬಾಸಾಹೇಬನು ಭಾವೆ ಮನೆತನದವನಿದ್ದು ಅವನ ಹೆಸರು ಭಾಸ್ಕರರಾವ ಎಂದಿತ್ತು. ಹೈದರ ಟಿಪ್ಪೂ ಇವರ ಕಾಲದಿಂದಲೂ ನರಗುಂದ ಸಂಸ್ಥಾನವು ಸುರಪುರದಂತೆ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡು ಬಂದಿತ್ತು. ರಾಮದುರ್ಗದಲ್ಲಿ ಭಾಸ್ಕರರಾಯನ ಬಂಧುಗಳು

3 ನರಗುಂದ ಕೋಟೆಯು ಇಂಗ್ಲೀಷರ ಕೈವಶವಾದ ಮೇಲೆ ಮ್ಯಾನ್ಸನ್ನನ ರುಂಡವು ಒಂದು ಬಾವಿಯಲ್ಲಿ ಸಿಕ್ಕಿತು! Malleson, Vol. 3. p. 243. ಮ್ಯಾನ್ಸನಾಸಾಹೇಬನ ಅಂತ್ಯ ಸಂಸ್ಕಾರವು ೧-೬-೧೮೫೮ಕ್ಕೆ ಕಲಾದಗಿಯಲ್ಲಿ ಜರುಗಿತು.

ರಾಜ್ಯವನ್ನಾಳುತ್ತಿದ್ದರು. ರಾಮದುರ್ಗದಕಿಂತಲೂ ನರಗುಂದ ಪ್ರಬಲವಾದ ರಾಜ್ಯ. ೧೮೧೮ರ ವರೆಗೆ ನರಗುಂದ ರಾಮದುರ್ಗಗಳೆರಡೂ ಪೇಶ್ವೆಯವರ ಮಾಂಡಲೀಕರೇ ಆಗಿದ್ದರು. ಪೇಶ್ವಾಯಿಯು ಉರುಳಿದಾಗ ಬಾಬಾಸಾಹೇಬನ ಅಪ್ಪ ದಾದಾಜಿರಾವ ಎಂಬುವವನು ಆಳುತ್ತಿದ್ದನು. ನರಗುಂದದ ದಾದಾಜಿರಾಯನೂ ರಾಮದುರ್ಗದ ನಾರಾಯಣರಾಯನೂ ಕಂಪನಿಸರಕಾರದೊಡನೆ ೧೮೨೧ರಲ್ಲಿ ಸವಿಸ್ತರ ಒಪ್ಪಂದಗಳನ್ನು ಮಾಡಿಕೊಂಡು ಅವಕ್ಕೆ ವಿಧೇಯರಾಗಿ ರಾಜ್ಯಭಾರವನ್ನು ನಡೆಸಿದರು. ೧೮೨೭ರಲ್ಲಿ ರಾಮದುರ್ಗದ ನಾರಾಯಣರಾಯನು ಪುತ್ರಸಂತಾನವಿಲ್ಲದೆ ಮರಣಹೊಂದಿದನು. ಅವನ ಹೆಂಡತಿ ರಾಧಾಬಾಯಿ ದತ್ತಕಮಾಡಿಕೊಳ್ಳಲು ಅಪ್ಪಣೆ ಕೇಳಿದಳು. ಹಿಂದುಸ್ತಾನ ಸರಕಾರದವರು ಸಮ್ಮತಿಸಲಿಲ್ಲ; ದಾದಾಜಿರಾಯನು ರಾಮದುರ್ಗವನ್ನು ನರಗುಂದಕ್ಕೆ ಸೇರಿಸಬೇಕೆಂದು ಒಂದು ಅಡ್ಡ ಅರ್ಜಿ ಕೊಟ್ಟನು. ರಾಧಾಬಾಯಿಯು, ದಾದಾಜಿಯ ಎರಡನೆಯ ಪುತ್ರ ಮತ್ತು ಭಾಸ್ಕರರಾಯನ ತಮ್ಮನಾದ ಹರಿಹರ ಊರ್ಫ ರಾಮರಾಯನನ್ನು ದತ್ತಕಮಾಡಿಕೊಳ್ಳಬೇಕೆಂದು ವಿಲಾಯಿತಿಯಿಂದ ತೀರ್ಪು ಬಂದಿತು. ರಾಧಾಬಾಯಿಗೆ ನರಗುಂದಕರನ ಮಗನನ್ನು ದತ್ತಕ ಮಾಡಿಕೊಳ್ಳುವ ಮನಸ್ಸಿಲ್ಲದಿದ್ದರೂ ನಿರುಪಾಯಳಾಗಿ ಮಾಡಿಕೊಂಡಳು. ಕೆಲವು ಕಾಲ ನರಗುಂದ ಮತ್ತು ರಾಮದುರ್ಗಗಳ ಸಂಬಂಧ ಸ್ವಲ್ಪ ಹದಗೆಟ್ಟಿತು.

ಇತ್ತ ದಾದಾಜಿರಾಯನು ರಾಜ್ಯಭಾರದಲ್ಲಿ ಅಷ್ಟೊಂದು ಉತ್ಸಾಹಿಯಾಗಿರಲಿಲ್ಲ. ಭಾಸ್ಕರರಾಯನು ಚಿಕ್ಕವನಿದ್ದನು. ೧೮೪೨ರಲ್ಲಿ ಬಾಬಾಸಾಹೇಬನು ಗಾದಿಗೆ ಬಂದಾಗ ಇತರರ ಕೈಯಲ್ಲಿ ಕಾರಭಾರವು ಸಿಕ್ಕು ಸಂಸ್ಥಾನಕ್ಕೆ ಸಾಲವು ಬಹಳಾಗಿತ್ತು. ಬಾಬಾಸಾಹೇಬನು ೧೮೪೨ರಲ್ಲಿ ಸುಮಾರು ೩೭ ವರ್ಷದವನಿದ್ದು ತುಂಬಾ ಜಾಣನೂ ಧೈರ್ಯಶಾಲಿಯೂ ಆಗಿದ್ದರಿಂದ ಯಾರಿಗೂ ಹಿರಿಯತನ ಕೊಡದೆ ತಾನೆ ರಾಜ್ಯವನ್ನು ಸುಸೂತ್ರವಾಗಿ ನೋಡಿಕೊಂಡು ಬಂದನು.

ಬಂಡಾಯದ ಕಾಲಕ್ಕೆ ಬಾಬಾಸಾಹೇಬನಿಗೆ ೩೨ ವರ್ಷಗಳಾಗಿದ್ದವು. ಬಾಬಾಸಾಹೇಬನ ಲಗ್ನವು ೧೮೨೦ರ ಪೂರ್ವದಲ್ಲಿಯೇ ಆಗಿತ್ತು. ಅವನ ಧರ್ಮಪತ್ನಿ ಸಾವಿತ್ರಿಬಾಯಿಯು ಅಜರೆ ಎಂಬ ಗ್ರಾಮದವಳು. ೧೮೪೨ರ ಸುಮಾರಿಗೆ ಸೌ|| ಸಾವಿತ್ರಿಬಾಯಿಯು ಒಂದು ಗಂಡು ಮಗುವನ್ನು ಹೆತ್ತಳು. ಆದರೆ ದುರ್ದೈವದಿಂದ ಅದು ನಾಲ್ಕಾರು ತಿಂಗಳುಗಳಲ್ಲಿ ತೀರಿಕೊಂಡಿತು. ನಾಲ್ಕಾರು

ವರ್ಷ ಸಂತತಿ ಪ್ರೀತ್ಯರ್ಥ ದಂಪತಿಗಳು ಎಲ್ಲ ಅನುಷ್ಠಾನ ಮತ್ತು ವ್ರತಗಳನ್ನು ಮುಗಿಸಿದರು. ಆದರೆ ದೇವರು ಬಾಬಾಸಾಹೇಬನಿಗೆ ಪುತ್ರಸಂತಾನವನ್ನು ದಯಪಾಲಿಸಲಿಲ್ಲ. ೧೮೪೫ರ ಸುಮಾರಿಗೆ ಬಾಬಾಸಾಹೇಬನು ಗಂಡು ಮಕ್ಕಳಾಗುವ ಆಶೆಯಿಲ್ಲದೆ ದತ್ತಕಮಾಡಿಕೊಳ್ಳಲು ಧಾರವಾಡ ಕಲೆಕ್ಟರ ಮತ್ತು ಬೆಳಗಾವಿ ಕಮಿಶನರರ ಅಪ್ಪಣೆ ಕೇಳಿದನು. ಧಾರವಾಡ ಕಲೆಕ್ಟರರು ಬಾಬಾಸಾಹೇಬನಿಗೆ ಪ್ರತಿಕೂಲ ರಿಪೋರ್ಟ ಮಾಡಿ "ಕೋರ್ಟ ಆಫ್ ಡೈರೆಕ್ಟರ್ಸ" ಕಡೆಗೆ ಕಳಿಸಿದರೂ ಅವರು ಬಾಬಾಸಾಹೇಬನಿಗೆ ದತ್ತಕಮಾಡಿಕೊಳ್ಳಲು ಅಧಿಕಾರವಿದೆ ಎಂದು ತೀರ್ಪು ಕೊಟ್ಟರು. ಆದರೂ ಮತ್ತೂ ಪ್ರಕರಣವು ನೆನೆಗುದಿಗೆ ಬೀಳಲು ಬಾಬಾಸಾಹೇಬನು ೧೮೫೭ರಲ್ಲಿ ಮುಂಬಯಿ ಗವರ್ನರರಿಗೆ ಬರೆದು ಹಾಕಿದನು. ಅಷ್ಟರಲ್ಲಿ "ಕೋರ್ಟ ಆಫ್ ಡೈರೆಕ್ಟರ್ಸ" ಮಂಡಳದಲ್ಲಿ ಮ್ಯಾನ್ಸನ್ ಸಾಹೇಬನು ಬಂದಿದ್ದನು. ಎಷ್ಟೋ ಕಾಲವಿಲಂಬದ ನಂತರ ೩೦-೧೦-೧೮೫೫ನೆಯ ದಿವಸ ಸರಕಾರವು ದತ್ತಕ ಮಾಡಿಕೊಳ್ಳಲು ಅಪ್ಪಣೆ ಕೊಡಲಾರದೆಂದು ಬಾಬಾಸಾಹೇಬನಿಗೆ "ಕೋರ್ಟ ಆಫ್ ಡೈರೆಕ್ಟರ್ಸ"ದಿಂದ ಒಂದು ಪತ್ರ ಬಂದಿತು !

ಸಂಸ್ಥಾನವು ಹಿರಿಯರ ಕಾಲದಿಂದಲೂ ಬಹಳ ಸಾಲದಲ್ಲಿ ಮುಳುಗಿ ಹೋಗಿದ್ದರಿಂದ ಸಂಸ್ಥಾನವನ್ನು ಮುಂದುವರೆಸುವಲ್ಲಿ ಅರ್ಥವಿಲ್ಲವೆಂದು ಕಂಪನಿಸರಕಾರವು ತನ್ನ ಉತ್ತರದಲ್ಲಿ ಉಲ್ಲೇಖಿಸಿ ಬಾಬಾಸಾಹೇಬನಿಗೆ ಅತೀವ ಅವಮಾನ ಮಾಡಿಬಿಟ್ಟಿತ್ತು !

ಇನ್ನು ತನ್ನ ಸಂಸ್ಥಾನವು ಉಳಿಯುವದಿಲ್ಲವೆಂದು ಭಾಸ್ಕರರಾಯನಿಗೆ ಪೂರಾ ಮನವರಿಕೆಯಾಯಿತು. ೧೮೫೭ರಲ್ಲಿ ಉತ್ತರ ಹಿಂದುಸ್ತಾನದಲ್ಲಿ ನಡೆದ ವಿಷಯಗಳು ಅವನ ಕಿವಿಯ ಮೇಲೆ ಬೀಳುತ್ತಲೆ ಇದ್ದವು. ಇಷ್ಟು ಹಳೆಯ ರಾಜ್ಯವನ್ನು ಸುಮ್ಮನೆ ಬ್ರಿಟಿಶರಿಗೆ ಬಿಟ್ಟುಕೊಡಲು ಅವನ ಮನಸ್ಸು ಎಳ್ಳಷ್ಟಾದರೂ ಒಪ್ಪಲೊಲ್ಲದು. ಭಾಸ್ಕರರಾಯನ ಅಂತರಂಗದಲ್ಲಿ ಭಯಂಕರ ಬಿರುಗಾಳಿಯು ಬೀಸತೊಡಗಿತು; ನಿರಾಶೆ, ಭಯ, ಸಿಟ್ಟು ಎಲ್ಲವೂ ತುಂಬಿಕೊಂಡವು.

ಬಾಬಾಸಾಹೇಬನು ಹೀಗೆ ಚಿಂತಾಕ್ರಾಂತನಾಗಿದ್ದದ್ದು ಧಾರವಾಡದ ಅಧಿಕಾರಿಗಳ ಗಮನಕ್ಕೆ ಬಾರದೆ ಹೋಗಲಿಲ್ಲ. ಉತ್ತರದಲ್ಲಿ ಸಿಪಾಯಿಬಂಡಾಯವು ಸುರುವಾಗಲು ಕಲೆಕ್ಟರರು ಮೇಲಿಂದಮೇಲೆ ಬಾಬಾಸಾಹೇಬನನ್ನು ಕರೆಸಿ

ಜವಾಬು ಕೇಳತೊಡಗಿದರು. ಭಾಬಾಸಾಹೇಬನಿಗೆ ಇದೆಲ್ಲ ಬಹಳ ಅವಮಾನ ವೆನಿಸಿತು. ಬಾಬಾಸಾಹೇಬನಂತೆಯೇ ಬ್ರಿಟಿಶರ ವಿಷಯವಲ್ಲಿ ಬೆಂಕಿಯಾದ ಜನರು ಇನ್ನೂ ಸಾಕಷ್ಟಿದ್ದರು. ಮುಂಡರಗಿ ಭೀಮರಾಯ, ಹಮ್ಮಿಗಿಯ ಕೆಂಚನಗೌಡ ದೇಸಾಯಿ ಪ್ರಭೃತಿಗಳಿಂದ ಹಿಡಿದು ಅನೇಕ ಜಮೀನದಾರರ ಕೂಡ ಬಾಬಾಸಾಹೇಬನು ಒಳಸಂಚು ಮಾಡಹತ್ತಿದನು. ಸುರಪುರ ವೆಂಕಟಪ್ಪ ನಾಯಕನೊಡನೆಯೂ ಬಾಬಾಸಾಹೇಬನು ಬಂಡಾಯದ ವಿಚಾರವನ್ನು ನಡೆಸಿದ್ದನು. ಬಾಬಾಸಾಹೇಬನಿಗೆ ಮುಂಡರಗಿ ಭೀಮರಾಯನ ಬೆಂಬಲವೇ ಬಹಳಿತ್ತು. ಜುಲೈ ತಿಂಗಳು ಬಂದೊಡನೆ ಬಾಬಾಸಾಹೇಬನು ಧಾರವಾಡದ ಕಡೆಗೂ ಭೀಮರಾಯನು ಕೊಪ್ಪಳದ ದಿಶೆಯಲ್ಲಿಯೂ ದಾಳಿ ಮಾಡಬೇಕೆಂಬ ವಿಚಾರವು ನಡೆದಿತ್ತು.

ಸಂಶಯಿತರಿಂದ ಶಸ್ತ್ರಾಸ್ತ್ರಗಳನ್ನು ಕಸಿದುಕೊಳ್ಳುವ ಒಂದು ಕಾರ್ಯಕ್ರಮ ವನ್ನು ಸರಕಾರವು ಆಗ ನಡೆಸಿಯೇ ಬಿಟ್ಟಿತ್ತು. ಆ ಪ್ರಕಾರ ಭಾಸ್ಕರರಾಯನ ತೋಫುಗಳ ಮೇಲೆಯೂ ಮದ್ದು ಗುಂಡುಗಳ ಮೇಲೆಯೂ ಸರಕಾರದ ವಕ್ರ ದೃಷ್ಟಿಯು ಬಿದ್ದಿತು. ಅಷ್ಟರಲ್ಲಿ ಮ್ಯಾನ್ಸನ್ ಸಾಹೇಬನು ಪೊಲಿಟಿಕಲ್ ಏಜಂಟನಾಗಿ ಅಧಿಕಾರವನ್ನು ವಹಿಸಿಕೊಂಡಿದ್ದನು. ಮ್ಯಾನ್ಸನ್ನನ ಸಾಹಸೀ ವೃತ್ತಿಯನ್ನು ಭಾಸ್ಕರರಾಯ ಚೆನ್ನಾಗಿ ಬಲ್ಲವನಾಗಿದ್ದ. ಶಸ್ತ್ರಾಸ್ತ್ರಗಳ ವಸೂಲಿ ಯನ್ನು ಅವನೇ ಪ್ರಾರಂಭಿಸಿದನೆಂದು ಬಾಬಾಸಾಹೇಬನಿಗೆ ತಿಳಿಯಿತು. ಜಮ ಖಂಡಿಕರನಂತೆ ತನ್ನನ್ನೂ ಮ್ಯಾನ್ಸನ್ನನು ಕೈದು ಮಾಡಬಹುದೆಂದು ಬಾಬಾ ಸಾಹೇಬನು ಧಾರವಾಡಕ್ಕೆ ತನ್ನ ಜನರನ್ನು ಕಳಿಸಿ ನಿಜ ಸಂಗತಿಯನ್ನು ತಿಳಿದು ಕೊಳ್ಳಲು ಪ್ರಯತ್ನಪಟ್ಟನು. ತನ್ನ ಒಳಸಂಚಿನ ವಿಚಾರಗಳು ಮ್ಯಾನ್ಸನ್ನನಿಗೆ ತಿಳಿದವೇನೊ ಎಂದೂ ಅವನು ಸ್ವಲ್ಪ ಅಧೀರನಾದನು. ಅವನ ಮನಸ್ಸು ಸಾವಕಾಶವಾಗಿ ಕಲ್ಲಾಗಹತ್ತಿತು. ಇನಾಮು ಕಮಿಶನದಲ್ಲಿ ಕೆಲಸ ಮಾಡು-ತ್ತಿದ್ದ ಮ್ಯಾನ್ಸನ್ ಸಾಹೇಬನಿಗೆ ಬುದ್ಧಿ ಕಲಿಸಿಯೇ ಬಿಡಬೇಕೆಂದು ಅವನು ಮನಸ್ಸಿನಲ್ಲಿ ಕುದಿಯತೊಡಗಿದನು. ಮೊದಲಿನ ಕೆಲವು ಸಂದರ್ಭಗಳಲ್ಲಿ ಇಲ್ಲದ ಸಂಶಯಕ್ಕೆ ಕಾರಣವು ಬೇಡವೆಂದು ಸರಕಾರವು ಕೇಳಿದಾಗೊಮ್ಮೆ ಏನಾದರೂ ಶಸ್ತ್ರಾಸ್ತ್ರಗಳನ್ನೂ ಮದ್ದುಗುಂಡುಗಳನ್ನೂ ಭಾಸ್ಕರರಾಯನು ಧಾರವಾಡಕ್ಕೆ ಕಳಿಸುತ್ತಲೆ ಇದ್ದನು. ಮೇ ೨೭ನೆಯ ದಿನಾಂಕ ಮೂರು ತೋಫುಗಳು ನರಗುಂದದಿಂದ ಧಾರವಾಡದ ಕಡೆಗೆ ಹೊರಟಾಗ ಭಾಸ್ಕರ

ರಾಯನಿಗೆ, ತೋಫುಗಳು ಹೋದರೆ ಎಲ್ಲವೂ ಹೋಯಿತು, ಎಂದೆನಿಸಿತೊ ಏನೊ! ಗಟ್ಟಿ ಮನಸ್ಸು ಮಾಡಿ ಅರ್ಧ ದಾರಿ ಹೋದ ತೋಫುಗಳನ್ನು ಭಾಸ್ಕರರಾಯ ತಿರುಗಿ ತರಿಸಿಕೊಂಡುಬಿಟ್ಟನು. ಮತ್ತು ಬ್ರಿಟಿಶರ ಮೇಲೆ ಮರಾಠಾ ಪದ್ಧತಿಯಂತೆ ಕೂಟಯುದ್ಧ ಸಾರಿದನು!! ಮೂರು ಮುರಕ್ಕ ತೋಫುಗಳಿಂದ ಯುದ್ಧವನ್ನು ಗೆಲ್ಲುವೆನೆಂದು ನಂಬುವಷ್ಟು ಭಾಸ್ಕರರಾಯನು ಹುಚ್ಚನಿರಲಿಲ್ಲ. ಬ್ರಿಟಿಶರೊಡನೆ ಹೋರಾಡಿ ಮರ್ಯಾದೆಯಿಂದ ಮಡಿಯುವದೇ ಲೇಸು ಎಂದು ವಿಚಾರಮಾಡಿ ಆ ಅರ್ಧದಾರಿ ಹೋದ ತೋಫುಗಳನ್ನು ಅವನು ತಿರುಗಿ ತರಿಸಿಕೊಂಡಿರಬೇಕು.

ಈ ಸುದ್ದಿಯು ಕೊಲ್ಹಾಪುರಕ್ಕೆ ಮುಟ್ಟಿ, ಮ್ಯಾನ್ಸನ್ ಸಾಹೇಬನು ಅಲ್ಲಿಂದ ಸುರೆಬಾನಕ್ಕೆ ಬಂದು ಭಾಸ್ಕರರಾಯನ ಜನರಿಂದ ಕೊಲ್ಲಲ್ಪಟ್ಟನೆಂಬುದು ಈಗಾಗಲೆ ಹೇಳಲಾಗಿದೆ. ಇದು ಮೇ ೨೯ನೆಯ ದಿನ ಮಧ್ಯರಾತ್ರಿ ನಡೆಯಿತು. ಜೂನ ೧ನೆಯ ತಾರೀಖಿಗೆ ಬ್ರಿಟಿಶರು ನರಗುಂದ ಕಿಲ್ಲೆಯನ್ನು ಮುತ್ತಿದರು. ಮ್ಯಾನ್ಸನ್ ಸಾಹೇಬನ ಕೊಲೆಯಾದಾಗ ದೊರೆತ ಕಾಗದಪತ್ರಗಳಿಂದ, ತನ್ನ ಜನರೇ ಕೆಲವರು ದ್ರೋಹಬಗೆದು ಮದ್ದು ಗುಂಡುಗಳನ್ನು ತೋಯಿಸಿರುವರೆಂದು ಭಾಸ್ಕರರಾಯನಿಗೆ ತಿಳಿಯಿತೆಂದು, ಹೇಳುತ್ತಾರೆ. (*Bombay Committee Notes*) ಆದರೂ ಬಾಬಾಸಾಹೇಬನ ಸೈನ್ಯ ಒಮ್ಮೆ ಕೋಟೆಯ ಹೊರಗೆ ನುಗ್ಗಿ ಹೋರಾಡಿತು. ಬ್ರಿಟಿಶರಿಗೆ ಈಡಾಗದೆ ಮತ್ತೆ ಕೋಟೆಯೊಳಗೆ ಓಡಿ ಅಡಗಿತು.

ಕರ್ನಲ್ ಮಾಲ್ಕಮ್ಮನು ರಾತ್ರಿ ಕೋಟೆಯ ಮೇಲೆ ದಾಳಿಮಾಡಲಿಲ್ಲ. ಮರುದಿನ ಮುಂಜಾನೆ ಇಡಿಯ ಕೋಟೆಯೇ ಖಾಲಿಯಾಗಿ ಬಿಟ್ಟಿತ್ತು! ಇಂಗ್ಲೀಷರು ಊರನ್ನೂ ಕೋಟೆಯನ್ನೂ ಹಿಡಿದುಕೊಂಡರು. ಬಾಬಾಸಾಹೇಬನ ಅರಮನೆ ಲೂಟಿಯಾಯಿತು. ಬಾಬಾಸಾಹೇಬನು ಸಂಗ್ರಹಮಾಡಿಟ್ಟ ಸುಮಾರು ನಾಲ್ಕುಸಾವಿರ ಸಂಸ್ಕೃತ ಗ್ರಂಥಗಳನ್ನು ಕಂಪನಿ ಸೈನ್ಯವು ಧ್ವಂಸಮಾಡಿತು.[4] ಅದುವರೆಗೆ ಸಮೃದ್ಧವಾಗಿದ್ದ ಇಡಿಯ ಊರನ್ನು ಸಂಪೂರ್ಣ ಲೂಟಮಾಡಿ ಮುತ್ತುರತ್ನಗಳಿಂದ ಮೊದಲುಮಾಡಿ ಬಾಲಕರ ಆಟಿಗೆಸಾಮಾನುಗಳ ವರೆಗೆ ಎಲ್ಲವನ್ನೂ ಇಂಗ್ಲೀಷರು ಒಯ್ದರೆಂದು ಕೈಜ ಎಂಬ ಜರ್ಮನ ಮಿಶನರಿಯು ಸಂಗ್ರಹಿಸಿದ ಒಂದು ಕನ್ನಡ ಲಾವಣಿಯ ಇಂಗ್ಲೀಷ ಭಾಷಾಂತರದಲ್ಲಿ ಉಲ್ಲೇಖವಿದೆ (*Western India* by Jacob p. 239)

---

4. *Western India*, by Jacob p. 226-227.

ಹೀಗೆ ನರಗುಂದ ಸಂಸ್ಥಾನವು ಹಾಳಾಗಿ ಹೋಯಿತು. ಬಾಬಾಸಾಹೇಬನು, ಅವನ ಧರ್ಮಪತ್ನಿ ಸಾವಿತ್ರಿಬಾಯಿ ಮತ್ತು ವೃದ್ಧ ತಾಯಿ ಯಮುನಾಬಾಯಿ ಇನ್ನೂ ಇಂಗ್ಲೀಷರ ಕೈಗೆ ಸಿಕ್ಕಿರಲಿಲ್ಲ. ಬಾಬಾಸಾಹೇಬನ ಕೂಡ ಇನ್ನೂ ನಾಲ್ಕೈದು ಸ್ವಾಮಿನಿಷ್ಠ ಅನುಯಾಯಿಗಳೂ ಓಡಿಹೋಗಿದ್ದರು. ಭೀಮರಾಯನನ್ನು ಕೂಡಲು ಭಾಸ್ಕರರಾಯನು ಹೋಗಿರಬೇಕೆಂದು ಇಂಗ್ಲೀಷರು ಭಾವಿಸಿದರು. ಬೆಳಗಾವಿ ಡಿ. ಎಸ್. ಪಿ. ಯಾದ ಫ್ರ್ಯಾಂಕ್ ಸೂಟರ ಎಂಬ ಅಧಿಕಾರಿಯು ಬಾಬಾಸಾಹೇಬನ ಬೆನ್ನಟ್ಟಿ ಹೋದನು. ಬಾಬಾಸಾಹೇಬನು ತೊರಗಲ ದಾರಿಯನ್ನು ಹಿಡಿದು ಓಡಿಹೋದನೆಂದು ಸೂಟರನಿಗೆ ತಿಳಿಯಿತು. ತೊರಗಲದಲ್ಲಿ ಸೂಟರನು ಗುಪ್ತಚಾರರನ್ನು ಬಿಟ್ಟನು. ಜೇಸಾಯುರ ಮನೆಯಲ್ಲಿ ಸಂಶಯ ಬರುವಂಥ ಒಂದು ಕುದುರೆಯು ಸೂಟರನಿಗೆ ಸಿಕ್ಕಿತು ; ಆದರೆ ಅದರ ಸವಾರನು ಫರಾರಿಯಾಗಿದ್ದನು ! ಈ ಸವಾರನು, ಬಾಬಾಸಾಹೇಬನ ಕಡೆಯ ಜನರಿಗಾಗಿ ಪಂಢರಪೂರ ಯಾತ್ರಿಕರ ವೇಷಗಳನ್ನು ಕೊಂಡುಕೊಳ್ಳಲು ಬಾಜಾರದಲ್ಲಿ ತಿರುಗಾಡುತ್ತಿದ್ದಾಗ ಗುಪ್ತಚಾರರ ಕೈಗೆ ಸಿಕ್ಕನು. ಸಿಕ್ಕ ಕೂಡಲೆ ಅವನು ಎಲ್ಲ ವಿಷಯಗಳ ಬಗ್ಗೆಯೂ ಕಬೂಲಿಯನ್ನು ಕೊಟ್ಟುಬಿಟ್ಟನು ! ತೊರಗಲದಿಂದ ಮೂರು ಮೈಲು ದೂರದಲ್ಲಿ, ರಾಮದುರ್ಗ ರಸ್ತೆಯ ಮೇಲೆ ಹತ್ತುವ ಮಲಪ್ರಭಾ ನದಿಯ ದಂಡೆಯ ಮೇಲಿದ್ದ ಗಿಡಗಳ ಗುಂಪಿನಲ್ಲಿ ಬಾಬಾಸಾಹೇಬನು ಅಡಗಿಕುಳಿತಿರುವನೆಂದು ಈ ಸವಾರನಿಂದ ಸೂಟರ ಸಾಹೇಬನಿಗೆ ತಿಳಿಯಿತು. ಅಲ್ಲಿಂದ ಯಾತ್ರಿಕರ ವೇಷದಲ್ಲಿ ಬಾಬಾಸಾಹೇಬನು ಮತ್ತು ಸಂಗಡಿಗರು ಉತ್ತರ ಹಿಂದುಸ್ಥಾನಕ್ಕೆ ನಾನಾಸಾಹೇಬನ ಕಡೆಗೆ ಹೋಗುವ ವಿಚಾರವನ್ನು ನಡೆಸಿದ್ದಾರೆಂದು ಆ ಸವಾರನು ಹೇಳಿದನು. ಸೂಟರನು ವೇಗದಿಂದ ನಾಲ್ಕು ಸವಾರರೊಡನೆ ತೊರಗಲ್ ದಾರಿಹಿಡಿದನು. ಮಲಪ್ರಭೆಯನ್ನು ದಾಟುವಾಗ ಎಲ್ಲ ಸವಾರರ ಕುದುರೆಗಳೂ ಸೆಳವಿನಲ್ಲಿ ತೇಲಿ ಹೋಗಿಬಿಟ್ಟವು ! ಆದರೂ ಸಾಹಸದಿಂದ ಸೂಟರನು ನದಿಯನ್ನು ದಾಟಿ ಹೋಗಿ ೨-೬-೧೮೫೮ಕ್ಕೆ ಬಾಬಾಸಾಹೇಬನನ್ನು ಬಂಧಿಸಿದ್ದನು. ಇಷ್ಟರಲ್ಲಿಯೇ ಜೂನ ಮೂರನೆಯ ತಾರೀಖಿಗೆ ಒಂದು ಘೋಷಣೆ ಹೊರಡಿಸಿ ಬಾಬಾಸಾಹೇಬನನ್ನು ಹಿಡಿದುಕೊಟ್ಟವರಿಗೆ ಸರಕಾರವು ೧೦,೦೦೦ರೂ. ಇನಾಮು ಕೊಡುವದಾಗಿ ಜೇಕಬ್‌ಸಾಹೇಬನು ಸಾರಿದ್ದನು.

ಭಾಸ್ಕರರಾಯನ ಪತ್ನಿ ಸಾವಿತ್ರಿಬಾಯಿ ಹಾಗು ತಾಯಿ ಯಮುನಾಬಾಯಿ ಬ್ರಿಟಿಶರ ಕೈಗೆ ಸಿಗಲೇ ಇಲ್ಲ. ಜೂನ ಮೊದಲನೆಯ ವಾರದಲ್ಲಿ ವೈರಿಯ ಕೈಗೆ

ಸಿಗಬಾರದೆಂದು ಅತ್ತೆಸೊಸೆಯರು ಮಲಪ್ರಭೆಯಲ್ಲಿ ಹಾರಿಕೊಂಡು ಪ್ರಾಣ ಕೊಟ್ಟರು. ಇಂಗ್ಲೀಷರಿಗೆ ಗೊತ್ತಾಗುವ ಪೂರ್ವದಲ್ಲಿ ಅವರ ಶವಸಂಸ್ಕಾರವು ಸಹ ಮುಗಿದುಹೋಯಿತು.

ಬಾಬಾಸಾಹೇಬನ ವಿಚಾರಣೆಯು ಬೆಳಗಾವಿಯಲ್ಲಿ ನಡೆದು ಬಾಬಾಸಾಹೇಬ ನಿಗೆ ಮರಣದಂಡನೆಯಾಯಿತು. ಚಾಂಡಾಲರು ಗಾಡಿಯಲ್ಲಿ ಊರಹೊರಗೆ ಬಾಬಾಸಾಹೇಬನನ್ನು ಎಳೆತಂದು ಜನಸಮೂಹದ ಎದುರಿಗೆ ಜೂನ ೧೨ನೆಯ ತಾರೀಖಿಗೆ ಗಲ್ಲಿಗೆ ಹಾಕಿದರು. ಆ ಮಹಾಪುರುಷನ ದುರ್ದೆಶೆಯನ್ನು ನೋಡಿ ಜನರ ಅಂತಃಕರಣವು ಕರಗಿ ಅವರು ಕಣ್ಣೀರು ಹಾಕಿದರು.

ನರಗುಂದವು ಬ್ರಿಟಿಶ್ ರಾಜ್ಯದಲ್ಲಿ ಸೇರಿದಾಗ ನರಗುಂದ ಸಂಸ್ಥಾನದಲ್ಲಿ ನಾಲ್ವತ್ತೊಂದು ಹಳ್ಳಿಗಳಿದ್ದವು. ಜನವಸತಿಯು ಸುಮಾರು ೨೨,೫೦೦ ಇತ್ತು. ೫೦,೦೦೦ ರೂಪಾಯಿಗಳಷ್ಟು ಸಂಸ್ಥಾನದ ಉತ್ಪನ್ನವಿತ್ತು. ಮುಂದೆ ಯಾವ ಉಪಯೋಗಕ್ಕೂ ಬಾರದಂತೆ ನರಗುಂದ ಕೋಟೆಯನ್ನು ಬ್ರಿಟಿಶರು ಹಾಳುಗೆಡವಿ ಹೊರಗೆ ಬಂದರು.

ಭಾಸ್ಕರರಾಯನನ್ನು ಕರ್ನಲ್ ಲಿ ಗ್ರಾಂಡ್ ಜೇಕಬ್ಬನು ಮುಕ್ತಕಂಠದಿಂದ ಹೊಗಳಿದ್ದಾನೆ. ತನಗೆ ಅನ್ಯಾಯವಾಗಿದೆ ಎಂಬ ಪೂರ್ಣ ಮನವರಿಕೆಯಿಂದ ಆಗಿನ ಕಾಲಕ್ಕನುಸರಿಸಿ ಭಾಸ್ಕರರಾಯನು ಆಂದೋಲನದಲ್ಲಿ ಧುಮುಕಿದನು ; ಇತರರಂತೆ ಗೆಪ್ಪ ಎತ್ತಿನ ಬಾಲ ಹಿಡಿಯಲು ದಾರೀ ಕಾಯುತ್ತ ಸುಮ್ಮನೆ ಕೂಡ್ರ ಲಿಲ್ಲ ಎಂದು ಜೇಕಬ್ ಸಾಹೇಬನು ಸತ್ಯವನ್ನು ಇದ್ದಂತೆ ಆಡಿದ್ದಾನೆ. ( *Western India*, by Jacob P. 226–227. )

# ಹದಿನೆಂಟನೆಯ ಅಧ್ಯಾಯ

## ಮುಂಡರಗಿ ಭೀಮರಾಯ

**೧೮೫೭–೫೮**

ಕರ್ನಾಟಕದಲ್ಲೆಲ್ಲ ಬಂಡಾಯದ ಜಾಲವನ್ನು ಪಸರಿಸಿ ಬ್ರಿಟಿಶರ ಎದರು ನಿಂತು ಹೋರಾಡಿ ರಣರಂಗದಲ್ಲಿ ಮಡಿದು ಅಮರತ್ವವನ್ನೈದಿದ ಶ್ರೇಯಸ್ಸು ಎಲ್ಲರಕಿಂತಲೂ ಮುಂಡರಗಿ ಭೀಮರಾಯನಿಗೇ ಹೆಚ್ಚಾಗಿ ಸಲ್ಲತಕ್ಕದ್ದು. ಭೀಮರಾಯನು, ಮುಂಡರಗಿ ಬೆಣ್ಣೆಹಳ್ಳಿ ಮತ್ತು ಹೈತಾಪುರಗಳ ಇನಾಮದಾರನಾಗಿದ್ದನು. ಸಿಪಾಯಿಬಂಡಾಯದ ಕಾಲಕ್ಕೆ ಭೀಮರಾಯನಿಗೆ ಸುಮಾರು ೪೫ ವರ್ಷಗಳಾಗಿರಬೇಕು. ಭೀಮರಾಯನ ಮನೆತನವು ಮೊದಲಿನಿಂದಲೂ ಶೂರ ಸಾಹಸಿಗಳ ಮನೆತನವೆಂದು ಪ್ರಸಿದ್ಧವಿತ್ತು. ಭೀಮರಾಯನ ಅಜ್ಜ "ಮೊಂಡಗೈ" ಭೀಮರಾಯನ ಶೌರ್ಯಸಾಹಸಗಳು ಇವತ್ತಿಗೂ ಕನ್ನಡನಾಡಿನಲ್ಲಿ ಪವಾಡವಾಗಿವೆ.

ಭೀಮರಾಯನು ತರುಣ ವಯಸ್ಸಿನಲ್ಲಿ ಬ್ರಿಟಿಶ ಸರಕಾರದ ನೌಕರನಾಗಿ ಬಳ್ಳಾರಿ ಮತ್ತು ಹರಪನಹಳ್ಳಿಗಳಲ್ಲಿ ತಹಸೀಲದಾರನಾಗಿ ಕೆಲಸ ಮಾಡಿದ್ದನು. ಇವನ ಸ್ವಾತಂತ್ರ್ಯಪ್ರೇಮ ಮತ್ತು ಉದ್ಧಾಮಸ್ವಭಾವದ ಸಲುವಾಗಿ ಸರಕಾರಕ್ಕೂ ಭೀಮರಾಯನಿಗೂ ಕೂಡಿನಡೆಯಲಿಲ್ಲ. ಭೀಮರಾಯನು ತನ್ನ ಹುದ್ದೆಗೆ ಶರಣುಹೊಡೆದು ಬಂದುಬಿಟ್ಟನು.

ಭೀಮರಾಯನ ಎರಡನೆಯ ಹೆಂಡತಿ ವೆಂಕೂಬಾಯಿಯು ಕೊಪ್ಪಳದ ಹತ್ತಿರದಲ್ಲಿ ಕುಕನೂರ ಗ್ರಾಮದವಳು. ಈ ಬೀಗತನದಿಂದಲೂ, ಕೆಲವು ಕಾಲ ಅಲ್ಲಿ ತಹಸೀಲದಾರನಾಗಿದ್ದರಿಂದಲೂ, ಭೀಮರಾಯನ ವರ್ಚಸ್ಸು ಕೊಪ್ಪಳ–ಬಳ್ಳಾರಿಗಳ ಸುತ್ತಲೂ ಸಾಕಷ್ಟಿತ್ತು. ಬೆಟಗೇರಿಯಲ್ಲಿಯೂ, ಮೈಸೂರ ಸಂಸ್ಥಾನದಲ್ಲಿಯೂ ಭೀಮರಾಯನ ಕೆಲವು ಆಸ್ತಿ ಮತ್ತು ಹೊಲಗಳು ಇದ್ದವು.

ಭೀಮರಾಯನು ಬಹು ಧೈರ್ಯಶಾಲಿ. ಬ್ರಿಟಿಶಸರಕಾರದ ಬಗ್ಗೆ ಮೊದಲಿನಿಂದಲೂ ಅವನು ಜಿಗುಪ್ಸೆ ತಾಳಿದ್ದನು. ಸಿಪಾಯಿ ಬಂಡಾಯದ ಕಾಲಕ್ಕೆ ಕರ್ನಾ

ಟಕದ ಜಹಗೀರದಾರರು ನಡೆಸಿದ ಒಳಸಂಚಿನಲ್ಲಿ ಅವನು ಸೇರಲು ತಡವಾಗಲಿಲ್ಲ. ಆಗಸ್ಟ ೧೮೫೭ರಲ್ಲಿಯೇ ಭೀಮರಾಯನು ಡಂಬಳದ ಸುತ್ತಲಿನ ಪ್ರದೇಶದಲ್ಲಿ ಶಸ್ತ್ರಾಸ್ತ್ರಗಳನ್ನೂ ಜನರನ್ನೂ ಸಂಗ್ರಹಿಸುತ್ತಿರುವನೆಂದು ಮಿಶನರಿಗಳೂ ಗುಪ್ತಚಾರರೂ ಸರಕಾರಕ್ಕೆ ಸುದ್ದಿಯನ್ನು ಮುಟ್ಟಿಸುತ್ತಲೆ ಇದ್ದರು. ಆದರೂ ಸರಕಾರಕ್ಕೆ ಭೀಮರಾಯನ ವಿರುದ್ಧ ನಿಶ್ಚಿತ ಪುರಾವೆಗಳೇನೂ ದೊರೆತಿರಲಿಲ್ಲ. ಭೀಮರಾಯನನ್ನು ಧಾರವಾಡ ಕಲೆಕ್ಟರರು ಎರಡು-ಮೂರು ಸಲ ಜವಾಬಿಗೆ ಕರೆಕಳುಹಿಸಿದ್ದರೂ ಅವನಿಂದ ಜಾಮೀನು ಕೇಳುವದಕ್ಕಾಗಲಿ ಅಥವಾ ಅವನನ್ನು ಸ್ಥಾನಬದ್ಧತೆಯಲ್ಲಿಡುವದಕ್ಕಾಗಲಿ ಸರಕಾರಕ್ಕೆ ಧೈರ್ಯ ಸಾಲಲಿಲ್ಲ. ಇದರಿಂದ ಜನರಮೇಲೆ ಏನು ಪರಿಣಾಮವಾಗುವದೊ ಎಂದು ಸರಕಾರವು ಭಯಪಟ್ಟಿತ್ತು. ಕೊನೆಯಸಲ ಭೀಮರಾಯನು ಕಲೆಕ್ಟರನನ್ನು ಭೆಟ್ಟಿಯಾಗಿ ಬಂದು "ಇನ್ನೊಮ್ಮೆ ಅವರು ನನ್ನನ್ನು ಕರೆಯಿಸಲಿ; ಅವರಿಗೆ ಯೋಗ್ಯ ಉತ್ತರ ಕೊಡುತ್ತೇನೆ" ಎಂದು ಸಿಟ್ಟಿನ ಉದ್ಗಾರ ತೆಗೆದನಂತೆ! ಭೀಮರಾಯನ ಈ ಬಂಡಾಯದ ವಿಚಾರಗಳ ಸಲುವಾಗಿ ಭೀಮರಾಯನ ಮಿತ್ರರಿಗೂ ಸರಕಾರವು ಸಾಕಷ್ಟು ಉಪಟಳ ಕೊಡಹತ್ತಿತು. ಭೀಮರಾಯನ ಪರಮಮಿತ್ರನಾದ ಹಮ್ಮಿಗಿ ದೇಸಾಯಿ ಕೆಂಚನಗೌಡನನ್ನು ಧಾರವಾಡದಲ್ಲಿ ಸ್ಥಾನಬದ್ಧತೆಯಲ್ಲಿ ಇಡಬೇಕೆಂದು ಜೇಕಬ್ ಸಾಹೇಬನು ಕೊಲ್ಹಾಪುರದಿಂದ ಹುಕುಮು ಮಾಡಿದ್ದನು. ಆ ಪ್ರಕಾರ ಮುಂಡರಗಿ ಬಂಡಾಯದ ಮೊದಲು ಮೂರುವಾರಗಳ ಹಿಂದೆ ಕೆಂಚನಗೌಡನು ಧಾರವಾಡದಲ್ಲಿಯೇ ಇದ್ದನು. ಆದರೆ ಸ್ವಲ್ಪ ದಿನಗಳಲ್ಲಿಯೇ ಇನಾಮ ಕಮಿಶನದ ಮುಂದೆ ಕೆಲವು ಕಾಗದಗಳನ್ನು ಹಾಜರ ಮಾಡಬೇಕಾಗಿದೆ ಎಂದು ನೆವ ಹೇಳಿ ಧಾರವಾಡದಿಂದ ಹೋದ ಕೆಂಚನಗೌಡನು ಪಾರಾಗಿಯೇ ಬಿಟ್ಟನು!

ಧಾರವಾಡ ಜಿಲ್ಲೆಯ ಎಲ್ಲ ಜಮೀನದಾರರು ಭೀಮರಾಯನ ಪರಮ ಮಿತ್ರರಾಗಿದ್ದರು. ಮತ್ತು ಭೀಮರಾಯನ ಒಳಸಂಚಿನಲ್ಲಿ ಇವರೆಲ್ಲರ ಅಂಗವಿತ್ತು. ಹಮ್ಮಿಗಿ, ಸೊರಟೂರ ಮತ್ತು ಗೋವನಕೊಪ್ಪದ ದೇಸಾಯರಂತೂ ಒಳಸಂಚಿನಲ್ಲಿ ಪ್ರತ್ಯಕ್ಷ ಭಾಗವಹಿಸಿದ್ದರು. ಹೆಬ್ಬಳ್ಳಿಯ ಜಹಗೀರದಾರರು, ಶಿರಹಟ್ಟಿಯ ದೇಸಾಯರು, ಸವಣೂರ ನವಾಬರು, ಶಿರಸಂಗಿ ದೇಸಾಯರು ಇವರೆಲ್ಲ ಭೀಮರಾಯನಿಗೆ ಅಪ್ರತ್ಯಕ್ಷವಾಗಿ ಬೆಂಬಲವನ್ನಿತ್ತಿದ್ದರು. ಬೆಳಗಾವಿ, ವಿಜಾಪುರ ಮತ್ತು ಮೊಗಲಾಯಿ ಪ್ರದೇಶಗಳಲ್ಲಿ ಗೋಕಾಕ, ಮುಧೋಳ,

ತೊರಗಲ, ಆನಿಖಿಂಡಿ, ಐನಾಪೂರ, ಮೊದಲಾದ ಎಲ್ಲ ಊರುಗಳ ದೇಸಾಯರು ಸಿದ್ಧತೆಯಲ್ಲಿದ್ದರು. ರಾಮದುರ್ಗ, ನರಗುಂದ, ಸಾಂಗಲಿ, ಜಮಖಂಡಿ ಸಂಸ್ಥಾನಗಳಂತೂ ಸಂಧಿಯನ್ನು ಕಾಯ್ದುಕೊಳ್ಳುತ್ತಿದ್ದವು. ಎಲ್ಲರೂ ಒಮ್ಮೆಲೆ ಬಂಡಾಯವನ್ನು ಹೂಡಲಿಲ್ಲವಾದ್ದರಿಂದ ನರಗುಂದ ಬಾಬಾಸಾಹೇಬ, ಭೀಮರಾಯ, ಕೆಂಚನಗೌಡನಂಥ ಧೈರ್ಯಶಾಲಿಗಳು ಮುನ್ನುಗ್ಗಿ ನಷ್ಟಹೊಂದಿದರು. ಉಳಿದವರು ಬ್ರಿಟಿಶರಿಗೆ ಮುಜುರೆ ಮಾಡಿ ಪಾರಾಗಿಬಿಟ್ಟರು !

ಸುರಪುರದ ವೆಂಕಟಪ್ಪನಾಯಕನ ಕೂಡ ಭೀಮರಾಯನ ಪತ್ರವ್ಯವಹಾರವಿತ್ತೆಂದೂ ಜುಲೈದಲ್ಲಿ ಬಂಡಾಯ ಮಾಡುವ ವಿಚಾರವಿತ್ತೆಂದೂ ಗೊತ್ತಾಗಿದೆ.[1] ಸುರಪುರವು ಫೆಬ್ರುವರಿ ೧೮೫೮ರಲ್ಲಿಯೇ ಬ್ರಿಟಿಶರ ವಶವಾಗಿ ಬಂಡುಗಾರರು ಚದುರಿಹೋದರು. ಅತ್ತ ಬಾಬಾಸಾಹೇಬನು ಶಸ್ತ್ರಾಸ್ತ್ರಗಳನ್ನು ಸರಕಾರಕ್ಕೆ ಒಪ್ಪಿಸಲಾರದೆ ಮತ್ತು ತನ್ನ ಒಳಸಂಚು ಮ್ಯಾನ್ಸನ್ ಸಾಹೇಬನಿಗೆ ಗೊತ್ತಾಯಿತೆಂದು ಹೆದರಿ ಮೇ ತಿಂಗಳ ೨೭ನೆಯ ತಾರೀಖಿಗೆ ಬ್ರಿಟಿಶರಮೇಲೆ ಯುದ್ಧವನ್ನು ಸಾರಿಬಿಟ್ಟನು. ಘಟಿಸಿದ ನಂತರ ಈ ಸಂಗತಿ ಭೀಮರಾಯನಿಗೆ ಗೊತ್ತಾಯಿತು. ಭೀಮರಾಯನೂ ತನ್ನ ಒಳಸಂಚು ಬ್ರಿಟಿಶರಿಗೆ ತಿಳಿದೊಡನೆ ಬಂಡು ಹೂಡಿಬಿಟ್ಟನು. ಹೀಗೆ ಭೀಮರಾಯ ಬಾಬಾಸಾಹೇಬ ಮತ್ತು ವೆಂಕಟಪ್ಪನಾಯಕರ ಜತ್ತು ಮುರಿದು ಹೋಯಿತು. ಹಮ್ಮಿಗಿಯ ಕೆಂಚನಗೌಡ, ಸೊರಟೂರ ಮತ್ತು ಡಂಬಳದ ದೇಸಾಯರು, ಗೋವನಕೊಪ್ಪದ ನಾಡಗೀರರು ಎಲ್ಲರೂ ಬಂಡಾಯ ಹೂಡಲು ಕಾಯಾ ವಾಚಾ ಮನಸಾ ಸಿದ್ಧರಿದ್ದರು. ಭೀಮರಾಯನು ಸೊರಟೂರ ದೇಸಾಯರ ಮುತಾಲೀಕ ನಾಡಗೌಡರ ಮನೆತನಕ್ಕೆ ಸೇರಿದವನು. ಭೀಮರಾವ ರಂಗರಾವ ನಾಡಗೀರ ಎಂಬುದು ಅವನ ಪೂರಾ ಹೆಸರು. ಎಲ್ಲ ದೇಸಾಯರು ಧೈರ್ಯಶಾಲಿ ಭೀಮರಾಯನನ್ನೆ ತಮ್ಮ ಮುಖಂಡನೆಂದು ತಿಳಿದು ಕೆಲಸ ನಡೆಸಿದ್ದನು.

ರಾಜನಿಷ್ಠನಾಗದಿದ್ದಲ್ಲಿ ನಿನ್ನ ದೇಸಗತಿಯನ್ನು ಜಪ್ತಮಾಡುವದಾಗಿ ಸರಕಾರದವರು ಭೀಮರಾಯನಿಗೆ ಒಮ್ಮೆ ತಿಳಿಸಿದ್ದರು. ಆದರೆ ಭೀಮರಾಯನು ಇಂಥ ಬೆದರಿಕೆಗೆ ಸೊಪ್ಪು ಹಾಕುವವನಲ್ಲ. ಸೊರಟೂರ ದೇಸಾಯಿ, ಹಮ್ಮಿಗಿ ಕೆಂಚನಗೌಡ ಮತ್ತು ಭೀಮರಾಯನಿಗೆ ಒಳಸಂಚು ನಡೆಸಲು ಕೆಲವು ರಾಜಕೀಯ ಕಾರಣಗಳೂ ಉಂಟಾಗಿದ್ದವು. ಡಂಬಳ ತಾಲೂಕಿನ ಹಮ್ಮಿಗಿಯ

---

1. *The story of my life*. Meadows Taylor. P. 412.

ದೇಸಾಯಿ ವತನವು ಮೊದಲು ಶಿರಹಟ್ಟಿ ದೇಸಾಯರ ಒಡೆತನದಲ್ಲಿತ್ತು. ಶಿರಹಟ್ಟಿ ದೇಸಾಯಿಯು ಕೆಂಚನಗೌಡನನ್ನು ದತ್ತಕ ಮಾಡಿಕೊಂಡನು. ಸರಕಾರವು ದತ್ತಕವನ್ನು ಮಾನ್ಯಮಾಡದೆ ಹಮ್ಮಿಗಿ ದೇಸಗತಿಯನ್ನು ಕೆಂಚನಗೌಡನಿಂದ ಜಪ್ತುಮಾಡಿಬಿಟ್ಟಿತು ! ಶಿರಹಟ್ಟಿ ಮತ್ತು ಹಮ್ಮಿಗಿಯ ದೇಸಾಯಿವಾಡೆಗಳು ಮಾತ್ರ ಕೆಂಚನಗೌಡನಿಗೆ ಉಳಿದವು. ಬ್ರಿಟಿಶಸರಕಾರದ ಮೇಲೆ ಸಿಟ್ಟಾಗಲು ಕೆಂಚನಗೌಡನಿಗೆ ಇದೂ ಒಂದು ಮುಖ್ಯ ಕಾರಣವಾಗಿತ್ತು. ಆದ್ದರಿಂದ ಭೀಮರಾಯನಕಿಂತಲೂ ಬಂಡಾಯ ಹೂಡಲು ಕೆಂಚನಗೌಡನ ಆಗ್ರಹವು ಬಹಳಿತ್ತು. ಸೊರಟೂರ ದೇಸಾಯಿಯ ಹೆಸರು ಶ್ರೀನಿವಾಸ ವೆಂಕಟಾದ್ರಿ ಎಂದಿತ್ತು. ಇವನ ಅಜ್ಜನು ಧೋಂಡಜಿ ವಾಘನಿಗೆ ಆಶ್ರಯಕೊಟ್ಟನೆಂಬ ಕಾರಣದಿಂದ ಡ್ಯೂಕ ಆಫ್ ವೆಲಿಂಗಟನನು ಅವನನ್ನು ತೋಫಿನ ಬಾಯಿಗೆ ಕೊಟ್ಟಿದ್ದನು ! ಈ ಸಿಟ್ಟಿನಿಂದ ಶ್ರೀನಿವಾಸ ವೆಂಕಟಾದ್ರಿಯೂ ಸಮಯ ಕಾಯ್ದು ಕುಳಿತಿದ್ದನು. ಅವನನ್ನು ಕೆಲವುಕಾಲ ಧಾರವಾಡದಲ್ಲಿ ಇಟ್ಟು ಆಸ್ತಿಯನ್ನೆಲ್ಲ ಜಾಮೀನೆಂದು ಜಪ್ತಿ ಮಾಡಲಾಗಿತ್ತು. ಡಂಬಳದಲ್ಲಿ ಇವರದೊಂದು ಅತ್ಯುತ್ತಮವಾದ ಕೋಟೆಯಿತ್ತು. ಮಾರ್ಚ ೧೮೫೮ರಲ್ಲಿ ಕಂಪನಿಸರಕಾರವು ಅದನ್ನು ಸಂಪೂರ್ಣವಾಗಿ ನೆಲಸಮ ಮಾಡಿಬಿಟ್ಟಿತು !

**“ ಮೇ ೨೭ನೆಯ ತಾರೀಖಿಗೆ ಬಂಡಾಯವನ್ನು ಪ್ರಾರಂಭ ಮಾಡಬೇಕೆಂದು ಬಾಬಾಸಾಹೇಬನೂ ಭೀಮರಾಯನೂ ಗೊತ್ತುಪಡಿಸಿ ಮೂರುತಿಂಗಳಾಗಿತ್ತು. ತೊರಗಲ್ಲ ಸುತ್ತಲೂ ಬಾಬಾಸಾಹೇಬನು, ಗದಗ ತಾಲೂಕಿನಲ್ಲಿ ಡಂಬಳ ದೇಸಾಯಿಯು, ಮತ್ತು ಹೊಸಪೇಟ ಕಮಲಾಪೂರಗಳಲ್ಲಿ ಭೀಮರಾಯನು ಶಸ್ತ್ರಾಸ್ತ್ರಗಳನ್ನೂ ಜನರನ್ನೂ ಕೂಡಿಸಬೇಕೆಂದು ಗೊತ್ತಾಗಿತ್ತು. ಕೊಪ್ಪಳದಲ್ಲಿಯ ಭರಮನಾಯಕ ಎಂಬುವವನನ್ನು ಕರೆಯಿಸಿ ಭೀಮರಾಯನು ಗುಪ್ತರೀತಿಯಲ್ಲಿ ಕೊಪ್ಪಳ ಕೋಟೆಯನ್ನು ವಶಮಾಡಿಕೊಳ್ಳುವ ವಿಚಾರವನ್ನು ಮಾಡಿಟ್ಟಿದ್ದನು. ಕಂಪನಿಸರಕಾರವು ಶಸ್ತ್ರಾಸ್ತ್ರಗಳನ್ನು ಬೇಡಿದ್ದೆ ಬಾಬಾಸಾಹೇಬನು ಬಂಡುಹೂಡಲು ಮುಖ್ಯ ಕಾರಣವಾಗಿತ್ತು. ಹಿರಿಯರು ಮಾಡಿಟ್ಟಿದ್ದನ್ನುತಾನು ಸರಕಾರಕ್ಕೆ ಎಂದೂ ಒಪ್ಪಿಸುವದು ಶಕ್ಯವಿಲ್ಲವೆಂದೂ ಬಂಡಾಯ ಹೂಡಲು ತಾನು ನಿಶ್ಚಿತ ಮಾಡಿರುವೆನೆಂದೂ ಬಸಪ್ಪನೆಂಬ ಸವಾರನನ್ನು ಕೊಟ್ಟು ಬಾಬಾಸಾಹೇಬನು ಭೀಮರಾಯನಿಗೆ ಹೇಳಿಕಳಿಸಿದ್ದನು. ತಮ್ಮ ಶಸ್ತ್ರಾಸ್ತ್ರಗಳೂ ಹೀಗೆಯೇ ಒಂದು ದಿನ ಜಪ್ತಾಗಿ ತಾವೂ ಸೆರೆಮನೆ ವಾಸ ಮಾಡಬೇಕಾಗುವದೆಂದು ಭೀಮರಾಯನೂ ಕೆಂಚನಗೌಡನೂ ತಿಳಿದಿದ್ದರು.**

ಬಾಬಾಸಾಹೇಬನು ನಾನಾಸಾಹೇಬನ ಕೂಡ ಪತ್ರವ್ಯವಹಾರವನ್ನಿಟ್ಟಿದ್ದನು.

"ನವಲಗುಂದದ ಮೇಲೆ ಹಾಯ್ದು ಬಾಬಾಸಾಹೇಬನು ಧಾರವಾಡದ ಮೇಲೆ ದಾಳಿ ಮಾಡಬೇಕೆಂದು ಗೊತ್ತಾಯಿತು. ಡಂಬಳ ದೇಸಾಯಿಯು ಡಂಬಳ ಮತ್ತು ಗದಗಗಳನ್ನು ಹಿಡಿದುಕೊಳ್ಳಬೇಕೆಂದು ಗೊತ್ತುಪಡಿಸಲಾಯಿತು. ತೊರಗಲ ರಾಜನು ತನ್ನ ದೇಶದಲ್ಲಿ ಹಾಗೂ ಭೀಮರಾವ ಮತ್ತು ಕೆಂಚನಗೌಡರು ಕೊಪ್ಪಳ ಪ್ರದೇಶದಲ್ಲಿ ಬಂಡಾಯ ಮಾಡಬೇಕೆಂದು ನಿಶ್ಚಿತಗೊಳಿಸಲಾಗಿತ್ತು. ಹಮ್ಮಿಗಿ ವಾಡೆಯಲ್ಲಿ ಅಡಗಿಸಿಟ್ಟ ಶಸ್ತ್ರಾಸ್ತ್ರಗಳನ್ನು ಸರಕಾರವು ಪತ್ತೆಹಚ್ಚಲು ಇವರಿಬ್ಬರು ಮೇ ೨೪ನೆಯ ತಾರೀಖಿಗೆ ಬಂಡಾಯ ಸಾರಿ ಹೊರಬೀಳಬೇಕಾಯಿತು. ಬಂಡುಹೂಡಿ ಕವಲೂರ ಹತ್ತಿರ ಹೋದಾಗ ಭೂತಪ್ಪನಹಳ್ಳಿಯಿಂದ ಭರಮನಾಯಕನು ಕೊಪ್ಪಳ ಊರು ಮತ್ತು ಕಿಲ್ಲೆಗಳನ್ನಾಕ್ರಮಿಸುವ ಸಿದ್ಧತೆಯಾಗಿದೆಯೆಂದು ಮತ್ತು ಜನರೆಲ್ಲ ಬಂಡಾಯದ ಹಿಂದಿರುವರೆಂದೂ ಸಂದೇಶಕಳಿಸಿದನು. ಕೊಪ್ಪಳದಲ್ಲಿ ರಾಜಾನಾಯಕ ಮತ್ತು ಮೊದೀನನಾಯಕ ಎಂಬುವವರು ೨೦೦ ಸಶಸ್ತ್ರ ಸವಾರರನ್ನು ಕೊಡುತ್ತೇವೆಂದು ಆಶ್ವಾಸನ ಕೊಟ್ಟಿದ್ದರು. ಆನೆಗುಂದಿ ರಾಜನು ಬಂಡಾಯವನ್ನು ಸೇರಲು ಉತ್ಸುಕನಾಗಿರುವನೆಂದು ಇಷ್ಟರಲ್ಲಿ ಭೀಮರಾಯನಿಗೆ ತಿಳಿದೊಡನೆ ಭೀಮರಾಯನು ನರಹರಿ ಎಂಬ ಕಾರಕೂನನನ್ನು ಆನೆಗುಂದಿ ರಾಜನ ಕಡೆಗೆ ಕಳಿಸಿದ್ದನು. ಆನೆಗುಂದಿಯಿಂದ ಓರ್ವ ಜಮಾದಾರನು ಬೆಣ್ಣಿಹಳ್ಳಿಗೆ ಬಂದು ಭೀಮರಾಯನನ್ನು ಕಂಡಿದ್ದನು. ಗಂಗಾವತಿ ಮುಸಲ್ಮಾನರು ಬಂಡಾಯ ಹೂಡಲು ಉತ್ಸುಕರಿದ್ದಾರೆಂದು ಭೀಮರಾಯನಿಗೆ ಗೊತ್ತಾಯಿತು. ಭೀಮರಾಯನು ಗಂಗಾವತಿಗೇ ಹೋಗಬೇಕೆಂದು ಮೊದಲು ವಿಚಾರಮಾಡಿದ್ದನು. ಆದರೆ ತನ್ನ ಹೆಂಡಿರು ಮಕ್ಕಳು ಕೊಪ್ಪಳದಲ್ಲಿ ಸೆರೆಹಿಡಿಯಲ್ಪಟ್ಟ ವಾರ್ತೆಯು ತಿಳಿಯಲು ಅವನು ಕೊಪ್ಪಳಕ್ಕೆ ಧಾವಿಸಿದನು. ಬೆಳಗಾವಿ ಮತ್ತು ಧಾರವಾಡ ಸೈನ್ಯಸವಾರರ ಹತ್ತಿರ ಬಾಬಾಸಾಹೇಬನ ಜನರು ಕಾರಸ್ಥಾನ ನಡೆಸಿಯೇ ಇದ್ದರು. ಕೊಪ್ಪಳದಿಂದ ಭೀಮರಾಯನು ನರಗುಂದ ಮತ್ತು ಡಂಬಳಗಳಿಗೆ ಸಂದೇಶ ಕಳಿಸಿ ಹೊಸಪೇಟೆ ಕಮಲಾಪುರಗಳ ಮೇಲೆ ದಾಳಿಮಾಡುವ ಸಿದ್ಧತೆಯಿಂದ ಬರಬೇಕೆಂದು ಹೇಳಿಕಳಿಸಿದ್ದನು. ಹೊಸಪೇಟೆಯ ಹತ್ತಿರ ಇದ್ದ ಒಬ್ಬ ಠಾಕೂರನನ್ನು ಒಡೆಸಿಕೊಳ್ಳಲು ಭೀಮರಾಯನು ಅವನಿಗೆ ೫೦೦ ರೂ. ಗಳನ್ನು ಕಳಿಸಿಕೊಟ್ಟಿದ್ದನು." ೩

ಕೊಪ್ಪಳದ ಪತನದ ನಂತರ ನಡೆದ ವಿಚಾರಣೆಯಲ್ಲಿ ಭೀಮರಾಯನ ಗುಮಾಸ್ತ ಭೀಮರಾಯನೆಂಬ ಒಬ್ಬ ಮಾಫಿ ಸಾಕ್ಷಿದಾರನು ಈ ಸಂಗತಿಗಳನ್ನು ಹೊರಗೆಡವಿದ್ದಾನೆ. ಅವನಿಗೂ ಮರಣದಂಡನೆಯಾಗಿತ್ತು.

೧೮೫೭ನೆಯ ಇಸ್ವಿಯ ಉತ್ತರಾರ್ಧದಲ್ಲಿ ಮತ್ತು ೧೮೫೮ರ ಮೇ ತಿಂಗಳಿನ ವರೆಗೆ ಧಾರವಾಡದಲ್ಲಿ ಥಾಮಸ್ ಓಗಿಲ್ವಿ ಎಂಬ ಕಲೆಕ್ಟರನಿದ್ದನು. ಲೆಫ್ಟನಂಟ ಥಾಮಸ್ ಎಂಬುವವನು ಡಿ. ಎಸ್. ಪಿ. ಯಾಗಿದ್ದನು. ಕಲೆಕ್ಟರನು ತಕ್ಕ ಮಟ್ಟಿಗೆ ಉದಾರವಾದಿಯಾಗಿದ್ದು ಭೀಮರಾಯನಂಥ ಗೌರವಸ್ಥ ಗೃಹಸ್ಥರನ್ನು ಆದಷ್ಟು ಸಿಟ್ಟಿಗೆಬ್ಬಿಸಬಾರದೆಂಬ ಅಭಿಪ್ರಾಯವುಳ್ಳವನಾಗಿದ್ದನು. ಥಾಮಸ್ ಸಾಹೇಬನು ಮಾತ್ರ ಭೀಮರಾಯನ ಬಗ್ಗೆ ತುಂಬಾ ಸಂಶಯಪಟ್ಟುಕೊಂಡು ೧೮೫೭ನೆಯ ಇಸ್ವಿಯ ಮೇ ತಿಂಗಳಲ್ಲಿಯೇ ಭೀಮರಾಯನಿಂದ ಸಾಕಷ್ಟು ಜಾಮೀನುಬೇಡಬೇಕೆಂದು ಅವನು ಸೂಚಿಸಿದ್ದನು. ಅತ್ತ ಬಳ್ಳಾರಿ ಮ್ಯಾಜಿಸ್ಟ್ರೇಟನೂ ಭೀಮರಾಯನ ಉಪಟಳಗಳ ಬಗ್ಗೆ ಧಾರವಾಡ ಕಲೆಕ್ಟರನಿಗೆ ಮೇಲಿಂದಮೇಲೆ ಎಚ್ಚರಿಸಹತ್ತಿದ್ದನು. ಓಗಿಲ್ವೆ ಸಾಹೇಬನು ಕೆಲವು ಕಾಲ ಭೀಮರಾಯನಿಗೆ ಧಾರವಾಡದಲ್ಲಿಯೇ ಇರಲಿಕ್ಕೆ ಹೇಳಿದನು. ಮುಂದೆ ಜಾಮೀನು ಕೇಳುವ ವಿಚಾರವೂ ನಡೆದಿತ್ತು. ಆದರೆ ಅಧಿಕಾರಿಗಳಿಗೆ ಭೀಮ-ರಾಯನ ವಿರುದ್ಧ ಏನೂ ಪುರಾವೆಗಳು ದೊರೆಯಲೊಲ್ಲವು ! ಪೋಲೀಸ ಸಾಹೇಬನು ಮಾತ್ರ ಭೀಮರಾಯನಮೇಲೆ ಗುಪ್ತಚಾರರನ್ನು ಬಿಟ್ಟಿದ್ದನು. ೧೮೫೮ ಮೇ ತಿಂಗಳ ಮೂರನೆಯ ವಾರ ಡಿ. ಎಸ್. ಪಿ. ಥಾಮಸನ್ ಸಾಹೇಬನು ಗುಡಗೇರಿ ಮಾಮಲೇದಾರ ಕಚೇರಿಯನ್ನು ಝಡತಿಮಾಡುವ ಉದ್ದೇಶದಿಂದ ಕಳಸದಲ್ಲಿ ವಸತಿಮಾಡಿದ್ದನು.

ತುಂಗಭದ್ರಾ ತೀರದ ಮೇಲಿದ್ದ ಹಮ್ಮಿಗಿ ಕೋಟೆಯಲ್ಲಿ ಭೀಮರಾಯ ಪ್ರಭೃತಿಗಳು ಸಾಕಷ್ಟು ಮದ್ದುಗುಂಡುಗಳ ಸಂಗ್ರಹ ಮಾಡಿಟ್ಟಿರುವರೆಂದು ಡಂಬಳ ಫೌಜದಾರನಾದ ವೆಂಕಟರಾವ ರಾಮಚಂದ್ರ ಎಂಬುವವನು ಕಳಸಕ್ಕೆ ಸುದ್ದಿ ಕಳಿಸಿದನು ; ಇದು ನಿಜವಿತ್ತು. ಸ್ವಲ್ಪೇ ದಿನಗಳ ಹಿಂದೆ ಭೀಮರಾಯನ ನೌಕರಿಯನ್ನು ಬಿಟ್ಟು ಹೋಗಿದ್ದ ಓರ್ವ ಮುಸಲ್ಮಾನನಿಂದ ಡಂಬಳ ಫೌಜದಾರನಿಗೆ ಈ ಸುದ್ದಿಯು ತಿಳಿದಿತ್ತು. ಹಮ್ಮಿಗಿ ಕೋಟೆಯನ್ನು ಝಡತಿ ಮಾಡಲು ಫೌಜದಾರನಿಗೆ ಡಿ. ಎಸ್. ಪಿ. ಯು ಅಪ್ಪಣೆಕೊಟ್ಟಿದ್ದ ಪ್ರಕಾರ ಡಂಬಳ ಫೌಜದಾರನು ಹಮ್ಮಿಗಿಯ ಕಿಲ್ಲೆಯನ್ನು ಮೇ ೨೩ಕ್ಕೆ ಝಡತಿ ಮಾಡಿಯೇ ಬಿಟ್ಟನು. ಕೆಂಚನಗೌಡನು ಭೀಮರಾಯನಿದ್ದ ಬೆಣ್ಣಿಹಳ್ಳಿಗೆ ಓಡಿ ಹೋದನು. ಪೋಲೀಸರ ಶೋಧದಲ್ಲಿ ಸಾಕಷ್ಟು ಅಕ್ರಮ ಶಸ್ತ್ರಾಸ್ತ್ರಗಳೂ ಮದ್ದುಗುಂಡುಗಳೂ ದೊರೆತದ್ದರಿಂದ ಹಮ್ಮಿಗಿಕೋಟೆಯನ್ನು ವಶಪಡಿಸಿ ಫೌಜ

ದಾರನು ಬೀಗಮುದ್ರೆ ಹಾಕಿ ಕೂಡಲೆ ಪೋಲೀಸ ಸಾಹೇಬನಿದ್ದ ಕಳಸಕ್ಕೆ ವರದಿಯನ್ನು ಮುಟ್ಟಿಸಿದನು.

ಈ ಸಂಗತಿಗಳು ಡಿ ಎಸ್. ಪಿ.ಗಿಂತಲೂ ಮುಂಚಿತವಾಗಿ ಭೀಮರಾಯನಿಗೆ ತಿಳಿದುಬಂದವು. ಇನ್ನು ತನ್ನ ಬಂಡಾಯದ ವಿಚಾರಗಳನ್ನು ಮುಚ್ಚಿಟ್ಟಲ್ಲಿ ಅರ್ಥವಿಲ್ಲವೆಂದು ಭೀಮರಾಯನು ನಿರ್ಧರಿಸಿದನು. ಡಿ. ಎಸ್. ಪಿ. ಗಿಂತ ಮೊದಲೆ ಭೀಮರಾಯ ಮತ್ತು ಕೆಂಚನಗೌಡರು ಕೆಲವು ಜೇಡರನ್ನೂ ಇತರ ಅನುಯಾಯಿಗಳನ್ನೂ ಕೂಡಿಕೊಂಡು ಮೇ ೨೪ ಮಧ್ಯಾಹ್ನ ಹಮ್ಮಿಗ್ಗೆ ಬಂದರು. ಪೋಲೀಸರಿಗೆ ಸುದ್ದಿಹೇಳಿದ ಮುಸಲ್ಮಾನನು ಮೊದಲು ಆಹುತಿ ಬಿದ್ದನು. ಭೀಮರಾಯನ ಜನರು ಕೋಟೆಯ ಬೀಗ ಮುರಿದು ತಮಗೆ ಬೇಕಾದಷ್ಟು ಶಸ್ತ್ರಾಸ್ತ್ರಗಳಿಂದ ಸನ್ನದ್ಧರಾಗಿ ಡಂಬಳಕ್ಕೆ ಹೊರಟರು. ದಾರಿಯಲ್ಲಿ ಫೌಜದಾರ ವೆಂಕಟರಾಯನನ್ನ ಸೆರೆಹಿಡಿಯಲಾಯಿತು. ಭೀಮರಾಯನ ಕೂಡ ಆಗ ಕನಿಷ್ಠ ಎರಡುನೂರು ಜನರಿರಬೇಕು. ಡಂಬಳದಲ್ಲಿ ಮಹಾಲಕರಿ ಕಚೇರಿಯ ತಿಜೋರಿಯನ್ನು ಲೂಟಿಮಾಡುವ ಉದ್ದೇಶದಿಂದ ಭೀಮರಾಯನು ಅಲ್ಲಿ ಬಂದನು. ಮಹಾಲಕರಿಯು ಅಂದು ಮುಂಜಾನೆಯೆ ಹಣವನ್ನೆಲ್ಲ ಗದುಗಿಗೆ ಕಳಿಸಿ ಫರಾರಿಯಾಗಿದ್ದನು. ಡಂಬಳಕ್ಕೆ ಬರುವಾಗ ಕೆಲವು ಸವಾರರು ಭೀಮರಾಯನಿಗೆ ಎದುರಾಗಲು ಒಂದು ಚಿಕ್ಕ ಘರ್ಷಣೆಯಾಗಿ ಓರ್ವ ಸವಾರನು ಹತನಾದನು; ಒಬ್ಬನಿಗೆ ಗಾಯವಾಯಿತು. ಅವನ ಅನುಯಾಯಿಗಳು ಕಛೇರಿಯಲ್ಲಿ ಗೊಂದಲಹಾಕಿ ಹತ್ತು ಹದಿನೈದು ಪೋಲೀಸರ ಬಂದೂಕುಗಳನ್ನು ಕಸಿದೊಯ್ದರು.

ಮೇ ೨೫ನೆಯ ತಾರೀಖಿನ ಸಾಯಂಕಾಲದೊಳಗೆ ಭೀಮರಾಯನ ಜನರು ಡಂಬಳದಿಂದ ಹೊರಟರು. ಭೀಮರಾಯನು ಗದುಗಿಗೆ ಬರುವನೆಂದು ಹೆದರಿ ಗದುಗಿನ ಟೆಲಿಗ್ರಾಫ ಆಫೀಸಿನ ಜನರೆಲ್ಲ ಓಡಿ ಹೋಗಿ ಬಿಟ್ಟಿದ್ದರು.[3] ಅಂದು ರಾತ್ರಿ ಭೀಮರಾಯನ ಜನರು ಕಪಲೂರಲ್ಲಿ ಶಿಬಿರ ಹೂಡಿದರು. ಕಪಲೂರ ಗೌಡನು ಭೀಮರಾಯನಿಗೆ ಭೆಟ್ಟಿಯಾಗಿ ಸಮಾಚಾರ ತಗೆದುಕೊಂಡು ಹೋದನು. ಬಹಳ ಊರಿನ ಓಲೆಕಾರರು ಭೀಮರಾಯನ ಬಂಡಾಯದಲ್ಲಿ ಸೇರಿದ್ದರು. ಕಪಲೂರಿಗೆ

3. ಭೀಮರಾಯನು ಗದುಗಿಗೆ ಬಂದನೆಂದೂ ಟೆಲಿಗ್ರಾಫ ಕಚೇರಿಗೆ ಧಕ್ಕೆ ಮಾಡಿ ಮುಂದೆ ಕೊಪ್ಪಳದ ಕಡೆಗೆ ಹೋದನೆಂದೂ ಮುಂಬೈ ರಾಜ್ಯ ಸ್ವಾತಂತ್ರ್ಯ ಸಂಗ್ರಾಮ ಇತಿಹಾಸ ಸಮಿತಿಯ ಟಿಪ್ಪಣಿಗಳಲ್ಲಿದೆ. ಆದರೆ ಗುಮಾಸ್ತ ಭೀಮರಾಯನ ಜವಾಬಿನಲ್ಲಿ ಗದುಗಿಗೆ ಹೋದ ಉಲ್ಲೇಖವಿಲ್ಲ.

ಮುಟ್ಟುವ ವರೆಗೆ ಮುಂದಿನ ಕಾರ್ಯಕ್ರಮವನ್ನು ಭೀಮರಾಯನೂ ಕೆಂಚನ ಗೌಡನೂ ನಿರ್ಧರಿಸಿದಂತೆ ಕಾಣಲಿಲ್ಲ.

ಭೀಮರಾಯನು ಬಂಡಾಯ ಹೂಡಿದ್ದು ಕೊಪ್ಪಳದ ಹಿಂದಿ ಅಮಲದಾರ ನೋರ್ವನಿಗೆ ಗೊತ್ತಾಯಿತು. ಭೀಮರಾಯನ ಎರಡನೆಯ ಹೆಂಡತಿಯಾದ ವೆಂಕೂಬಾಯಿಯು ಅಲ್ಲಿಯೆ ಸುತ್ತಲಿನ ಪ್ರದೇಶದಲ್ಲಿ ಇರುವಳೆಂಬುದನ್ನು ಈ ಅಮಲದಾರನು ಪತ್ತೆ ಹಚ್ಚಿ ಮಕ್ಕಳೊಂದಿಗೆ ಅವಳನ್ನು ಸೆರೆಹಿಡಿದು ಕೊಪ್ಪಳದ ಕೋಟೆಯಲ್ಲಿ ಇಟ್ಟನು. ಈ ಸುದ್ದಿಯು ಭೀಮರಾಯನಿಗೆ ಕವಲೂರಿನಲ್ಲಿಯೇ ತಿಳಿಯಿತು ; ಆದ್ದರಿಂದ ಕೊಪ್ಪಳಕ್ಕೆ ಹೋಗದೆ ಅವನಿಗೆ ಗತ್ಯಂತರವಿಲ್ಲದಾಯಿತು. ಕೊಪ್ಪಳ ಕೋಟೆಯು ತಡವಿಲ್ಲದೆ ವಶವಾಗುವದೆಂದು ಇಷ್ಟರಲ್ಲಿ ಭೂತಪ್ಪನಹಳ್ಳಿಯ ಭರಮನಾಯಕನು ಭೀಮರಾಯನಿಗೆ ಹೇಳಿಕಳಿಸಿದನು.

ಮೇ ೨೯ನೆಯ ದಿನ ಮುಂಜಾನೆ ಭೀಮರಾಯನು ಕವಲೂರಿನಿಂದ ಕೊಪ್ಪಳಕ್ಕೆ ಹೊರಟನು. ಕೊಪ್ಪಳದ ದಾರಿಯಲ್ಲಿ ಬಹಾದ್ದೂರ ಬಂಡಾ, ಕುಮಾರ ರಮಣಕುಂಟೆ ಮೊದಲಾದ ಗುಡ್ಡಗಾಡು ಕಿಲ್ಲೆಗಳಲ್ಲಿ ಮೇ ತಿಂಗಳ ೩೦ನೆಯ ತಾರೀಖಿನ ವರೆಗೆ ಭೀಮರಾಯನ ಜನರು ಆಶ್ರಯ ಪಡೆದರು. ಮೇ ೩೦ನೆಯ ತಾರೀಖು ರವಿವಾರ ದಿನ ಭೀಮರಾಯನು ಕೊಪ್ಪಳ ಕೋಟೆಯನ್ನು ಸುಲಭವಾಗಿ ಆಕ್ರಮಿಸಿ ಕುಳಿತುಬಿಟ್ಟನು. ಕೊಪ್ಪಳ ಕೋಟೆಯ ಅಮಲದಾರನು ಭೀಮರಾಯನನ್ನು ಹುಡುಕಲು ಅತ್ತ ಹೊರಗೆ ಹೋದಾಗ ಇತ್ತ ಬೇರೆ ದಾರಿಯಿಂದ ಭೀಮರಾಯನು ಬಂದು ಕೋಟೆಯನ್ನು ವಶಪಡಿಸಿಕೊಂಡನು. ಕೊಪ್ಪಳದಲ್ಲಿ ಮೋದೀನ ಮುಕ್ತುಂ ನಾಯಕ ಮತ್ತು ರಾಜಾನಾಯಕ ಎಂಬುವವರು ಎರಡು ಮೂರು ತಿಂಗಳುಗಳಿಂದಲೂ ಒಳಸಂಚಿನಲ್ಲಿದ್ದು ಕೊನೆಯವರೆಗೂ ಭೀಮರಾಯನಿಗೆ ಬಹಳ ನೆರವಾದರು. ಕೊಪ್ಪಳದಲ್ಲಿ ಬಹಳ ಜನರು ಬಂದು ಬಂಡಾಯವನ್ನು ಸೇರಿದರು.

ಇತ್ತ ಕಳಸದಿಂದ ಮೇ ೩೧ನೆಯ ತಾರೀಖು ಬೆಳಗಿನ ಮೂರು ಗಂಟೆಗೆ ಹೊರಟ ಡಿ. ಎಸ್. ಪಿ. ಥಾಮಸ್ ಸಾಹೇಬನು ಹಮ್ಮಿಗಿಗೆ ಬಂದು ಮುಟ್ಟಲು ಸಾಯಂಕಾಲವಾಯಿತು. ಹಮ್ಮಿಗಿಗೆ ಭೀಮರಾಯನು ಬಂದು ಗೊಂದಲಹಾಕಿ ಹೋದ ಸುದ್ದಿಯನ್ನು ಓರ್ವ ಸವಾರನು ಬಂದು ಸಾಹೇಬನಿಗೆ ದಾರಿಯಲ್ಲಿಯೇ

ಹೇಳಿದ್ದನು. ಡಿ. ಎಸ್. ಪಿ.ಯು ಹೋದಾಗ ಹಮ್ಮಿಗಿಯಲ್ಲಿ ಜನರೇ ಇರಲಿಲ್ಲ. ಗಾಬರಿಯಿಂದ ಊರುಬಿಟ್ಟು ಓಡಿಹೋಗಿದ್ದರು! ಹಮ್ಮಿಗಿಯ ಕೋಟೆಯ ಮುಂದೆ ಭೀಮರಾಯನ ಬಗ್ಗೆ ಇಂಗ್ಲೀಷರಿಗೆ ಸುದ್ದಿಯನ್ನು ಕೊಟ್ಟ ಮುಸಲ್ಮಾನನ ಹೆಣವು ತುಂಡಾಗಿ ಬಿದ್ದಿತ್ತು. ನಡೆದ ದುರ್ಘಟನೆಗಳ ಯಥಾವಿಧಿ ಪಂಚನಾಮೆಯಾದ ಮೇಲೆ ಥಾಮಸ್ ಸಾಹೇಬನು ದೇಸಾಯಿಯ ಕೋಟೆಗೆ ನಾಲ್ಕು ಕಡೆಯಿಂದ ಕೊಳ್ಳಿಕೊಟ್ಟು ಸುಟ್ಟುಬಿಟ್ಟನು.[4]

ಡಿ. ಎಸ್. ಪಿ.ಯು ಇಷ್ಟಾದ ಮೇಲೆ ಭೀಮರಾಯನನ್ನು ಬೆನ್ನಟ್ಟಲಿಲ್ಲ. ಧಾರವಾಡ ಜಿಲ್ಲೆಯಾಚೆಗೆ ಅವನು ಓಡಿಹೋದನೆಂದು ಖಾತ್ರಿಮಾಡಿಕೊಂಡು ಥಾಮಸ್ ಸಾಹೇಬನು ಗದುಗಿಗೆ ಹೋದನು. ವಾರಿಯಲ್ಲೆಲ್ಲ ಜನರು ಭೀಮರಾಯನಿಗೆ ತುಂಬಾ ಅನುಕೂಲರಾಗಿದ್ದರೆಂದು ಅವನು ಹೇಳಿದ್ದಾನೆ. ಬಳ್ಳಾರಿ ಕಲೆಕ್ಟರನು ಥಾಮಸ್ ಸಾಹೇಬನ ಈ ಅಲಕ್ಷ್ಯವನ್ನು ಗಮನಕ್ಕೆತಂದ ಮುಂಬೈಸರಕಾರಕ್ಕೆ ಪತ್ರ ಬರೆಯಲು, ಕುಂಟನೆವಗಳನ್ನು ಹೇಳಿ ಉಳಿದುಕೊಳ್ಳಬೇಕಾದರೆ ಥಾಮಸ್ ಸಾಹೇಬನ ಪುಣ್ಯ ತೀರಿಹೋಯಿತು.

* * * *

ಭೀಮರಾಯನು ಕೊಪ್ಪಳ ಕೋಟೆಯಲ್ಲಿ ಕುಳಿತ ವಾರ್ತೆಯು ಎಲ್ಲಕಡೆಗೂ ಹಬ್ಬಲು ಬಳ್ಳಾರಿ ಮತ್ತು ರಾಯಚೂರು ಅಧಿಕಾರಿಗಳಲ್ಲಿ ಭಯಂಕರ ಗಡಿಬಿಡಿಯೆದ್ದಿತು. ಹೂವಿನ ಹಡಗಲಿಯಲ್ಲಿಯ ತಹಸೀಲ ರಾಮರಾಯನೆಂಬುವನ ಮೇಲೆ ಸೇಡು ತೆಗೆಯಲು ಭೀಮರಾಯನು ಹೂವಿನ ಹಡಗಲಿಗೆ ಬರುವನೆಂದೂ ಸುದ್ದಿಯಿತ್ತು. ಭೀಮರಾಯನ ಒಳಸಂಚಿನ ಬಗ್ಗೆ ಈ ರಾಮರಾಯನು ಬಳ್ಳಾರಿ ಮ್ಯಾಜಿಸ್ಟ್ರೇಟರಿಗೆ ಸುದ್ದಿಯನ್ನು ಮುಟ್ಟಿಸಿದ್ದನು. ಬಳ್ಳಾರಿ ಕಲೆಕ್ಟರ ಮತ್ತು ಮ್ಯಾಜಿಸ್ಟ್ರೇಟನಾದ ಪೆಟಿ ಎಂಬ ಸಾಹೇಬನನ್ನೂ ಭೀಮರಾಯನು ಸೆರೆ ಹಿಡಿಯುವ ಹಂಚಿಕೆಯಲ್ಲಿದ್ದನು!

ಬಳ್ಳಾರಿಯಿಂದ ಆಯ್. ಈ. ಹ್ಯೂಜೆಸ ಎಂಬ ಸೈನ್ಯಾಧಿಕಾರಿಯು ಹೊಸಪೇಟೆ ಮಾರ್ಗವಾಗಿ ಕೊಪ್ಪಳಕ್ಕೆ ಹೊರಟನು. ಐದನೆ ನಂಬರಿನ ಅಶ್ವದಳದ ಕೆಲವು ಸವಾರರು ಮೇ ೩೦ರ ಮುಂಜಾನೆಯೇ ಮುಂದೆಹೋಗಿದ್ದರು. ಅಂದು

---

4. ಹೀಗೆ ಮಾಡಿದ್ದಕ್ಕಾಗಿ ಮುಂಬೈ ಸರಕಾರವು ಡಿ. ಎಸ್. ಪಿ.ಯ ಉಪಕ್ರಮವನ್ನು ನಿಂದೆಮಾಡಿ ಇನ್ನುಮುಂದೆ ಮುಲ್ಕಿ ಅಧಿಕಾರಿಗಳು ಮತ್ತು ಇಂಜಿನಿಯರರಿಂದಲೆ ಇಂಥ ಕಾರ್ಯಗಳಾಗತಕ್ಕದ್ದೆಂದು ವಿಧಿಸಿತು.

ಸಾಯಂಕಾಲ ೭ಳನೆಯ ಹೈಲ್ಯಾಂಡರ್ಸ್, ೪೭ನೆಯ ಹಿಂದಿ ಕಾಲ್ದಳಗಳೊಡನೆ ಹ್ಯೂಜೆಸ ಸಾಹೇಬನೂ ಹೊರಟನು. ಮೇ೩೧ ಬೆಳಗಿನ ಜಾವದಲ್ಲಿ ಹ್ಯೂಜೆಸನ ಸೇನೆಗಳು ಭೀಮರಾಯನಿಗೆ ಗೊತ್ತಾಗದಂತೆ ಕೊಪ್ಪಳವನ್ನು ಸುತ್ತುಗಟ್ಟಿದವು. ತೋಫುಗಳ ಸಹಾಯವಿಲ್ಲದೆ ಕೋಟೆಯನ್ನು ವಶಪಡಿಸಿಕೊಳ್ಳುವದು ಸಾಧ್ಯವಿರ ಲಿಲ್ಲ. ಹ್ಯೂಜೆಸನ ತೋಫುಗಳು ಹಿಂದೆ ಬಿದ್ದುದರಿಂದ ಇಡಿಯ ೩೧ನೆಯ ದಿನಾಂ ಕವೆಲ್ಲ ಅವನ ಸೈನ್ಯವು ಅಡಗಿ ಕುಳಿತಿತು. ತೋಫುದಳವು ಅಂದು ಸಾಯಂಕಾಲ ಬಂದಿತು. ಹರಿಹರದಿಂದ ಮೈಸೂರ ಶಿಲೇದಾರರೂ, ಲಿಂಗಸುಗೂರಿನಿಂದ ಹೈದ ರಾಬಾದದ ನಾಲ್ಕು ನಂಬರ ಪಡೆಯೂ, ಕರ್ನೂಲಿನಿಂದ ಕೆಲವು ಪಡೆಗಳೂ ಬಂದು ಕೂಡಲು ಹ್ಯೂಜೆಸನು ಜೂನ ೧ನೆಯ ತಾರೀಖು ಮುಂಜಾನೆ ದಾಳಿಯ ಸಿದ್ಧತೆಯನ್ನು ನಡೆಸಿದನು. ಭೀಮರಾಯನ ಹತ್ತಿರ ಸುಮಾರು ಮೂರು ನಾಲ್ಕು ನೂರು ಜನರು ಇರಬೇಕು. ಅವರ ತರಬೇತಿಯಾಗಲೀ ಶಸ್ತ್ರಾಸ್ತ್ರಗಳಾಗಲಿ ಕಂಪನಿ ಸರಕಾರದ ಸೈನ್ಯಕ್ಕೆ ಎಂದೂ ಸಮವಾಗಿರುವದು ಸಾಧ್ಯವಿರಲಿಲ್ಲ. ಆದರೂ ದೈವ ಲೀಲೆಯೋ ಆ ಕಾರಣಪುರುಷನನ್ನು ಹೋರಾಡಲು ಹಚ್ಚಿತು. ಭೀಮರಾಯನ ಜನರಿಗೆ ಕೊಪ್ಪಳ ಕೋಟೆಯನ್ನು ಹ್ಯೂಜೆಸನ ತೋಫುಗಳಿಂದ ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ.

ಜೂನ ೧ನೆಯ ತಾರೀಖಿನ ದಿನ ಮುಂಜಾನೆ ನಾಗರಿಕರಿಗೂ ಅವರ ಕುಟುಂಬದವರಿಗೂ ಊರುಬಿಟ್ಟುಹೋಗಲು ಮೂರು ತಾಸು ಅವಧಿ ಕೊಡ ಬೇಕೆಂದು ಹ್ಯೂಜೆಸನು ಭೀಮರಾಯನಿಗೆ ಶಿಫಾರಸು ಮಾಡಿ ಪತ್ರ ಕಳಿಸಿದನು.[5] ಮಧ್ಯಾಹ್ನದವರೆಗೆ ಭೀಮರಾಯನಿಂದ ಯಾವ ಉತ್ತರವೂ ಬರಲಿಲ್ಲ. ಹ್ಯೂಜೆ ಸನು ತನ್ನ ತೋಫುಗಳನ್ನು ಯೋಗ್ಯ ಸ್ಥಳಗಳಲ್ಲಿ ಸ್ಥಾಪನೆ ಮಾಡತೊಡಗಿದನು. ಇಷ್ಟರಲ್ಲಿ ಬಂಡುಗಾರರು ಕೋಟೆಯೊಳಗೆ ಸರಿಯಹತ್ತಿರುವರೆಂದು ಹ್ಯೂಜೆಸನಿಗೆ ತಿಳಿದುಬಂದಿತು. ಕೋಟೆಯ ಒಂದು ಭಾಗದಲ್ಲಿ ಗೋಡೆಯು ಸ್ವಲ್ಪ ಒಡೆದಿತ್ತು. ಹೂಜೆಸನು ಇಲ್ಲಿಂದ ಒಳನುಗ್ಗಿರೆಂದು ತನ್ನ ಸೈನ್ಯಕ್ಕೆ ಆಜ್ಞೆಮಾಡಿದನು. ಕೋಟೆಯ ಮಧ್ಯವನ್ನು ಬಂಡುಗಾರರು ಮುಟ್ಟುವದರೊಳಗೆ ಅವರನ್ನು ಯುದ್ಧಕ್ಕೆ ಆಹ್ವಾನಿಸಲಾಯಿತು. ಹೀಗಾಗಿ ಕೇಂದ್ರ ಕೊತ್ತಲವನ್ನು ಮುಟ್ಟು ವದು ಬಂಡುಗಾರರಿಗೆ ಕೊನೆವರೆಗೆ ಸಾಧಿಸಲೇ ಇಲ್ಲ.

5. ಭೀಮರಾಯನು ಇಡಿಯ ಊರನ್ನೆ ಹಿಡಿದುಕೊಂಡಿದ್ದನೆಂದು ಇದರಿಂದ ಸ್ಪಷ್ಟವಾಗು ತ್ತದೆ. ಊರ ಓಣಿಗಳಲ್ಲೆಲ್ಲ ಯುದ್ಧವಾಗುವದೆಂದು ಹ್ಯೂಜೆಸನು ನಿರೀಕ್ಷಿಸಿರಬೇಕು.

ಮಧ್ಯಾಹ್ನ ಮೂರುಗಂಟೆಯ ಸುಮಾರಿಗೆ ಭೀಮರಾಯನು ಮತ್ತು ಕೆಂಚನಗೌಡನು ಕೋಟೆಯ ಎರಡು ಬಾಗಿಲುಗಳ ನಡುವೆ ಕಾದುತ್ತ ಮಡಿದರು. ಭೀಮರಾಯ ಕೆಂಚನಗೌಡರು ಹತರಾದ ಕೂಡಲೆ ಬಂಡುಗಾರರು ತಡವಿಲ್ಲದೆ ಶರಣುಬಂದುಬಿಟ್ಟರು. ಬಂಡುಗಾರರಲ್ಲಿ ಅರ್ಧಜನರು ಹತರಾದರು. ಉಳಿದವರನ್ನು ಸೆರೆಹಿಡಿಯಲಾಯಿತು.

ರಾಯಚೂರಿನಲ್ಲಿ ಮುಂದೆ ಈ ಬಂಡಾಯಗಾರರ ವಿಚಾರಣೆಯು ನಡೆದು ೭೭ ಜನರನ್ನು ಗುಂಡು ಹಾಕಿ ಕೊಲ್ಲಲಾಯಿತು! [6] ನಾಲ್ವತ್ತು ಜನರಿಗೆ ೧೪ ವರ್ಷ ಕಠಿಣ ಶಿಕ್ಷೆಯಾಯಿತು. ಇಪ್ಪತ್ತು ಜನರಿಗೆ ೧ ರಿಂದ ೫ ವರ್ಷಗಳ ವರೆಗೆ ಸಶ್ರಮ ಶಿಕ್ಷೆಯಾಯಿತು. ಕೊಪ್ಪಳದಲ್ಲಿ ಭೀಮರಾಯನಿಗೆ ಬಹಳ ನೆರವಾಗಿದ್ದ ಮುಕ್ತುಂ ಮೊಹದೀನನಿಗೆ ಫಾಸಿಯಾಯಿತು.

6. ಈ ಎಪ್ಪತ್ತೇಳು ಜನರು ಯಾವ ಯಾವ ಊರವರಿದ್ದರೆಂಬ ವಿವರಗಳನ್ನು ನೋಡಿದರೆ ಭೀಮರಾಯನಿಗೆ ಜನಬೆಂಬಲವು ಎಷ್ಟು ಪ್ರಚಂಡವಾಗಿತ್ತೆಂಬ ಕಲ್ಪನೆಯು ಬರುತ್ತದೆ. ಆದ್ದರಿಂದ ಈ ಕೆಳಗಿನ ಅಂಕೆಗಳನ್ನು ಓದುಗರ ಅವಗಾಹನೆಗೆ ಪ್ರಕಟಿಸಲಾಗಿದೆ:—

| ಹಳ್ಳಿ | ಸಂಖ್ಯೆ | ಹಳ್ಳಿ | ಸಂ |
|---|---|---|---|
| ೧. ಕೊರ್ಲಹಳ್ಳಿ | ೨೮ | ೧೩. ಬಾಗವಾರಿ | ೫ |
| ೨. ಹಮ್ಮಿಗಿ | ೧೧ | ೧೪. ಕುಕನೂರು | ೨ |
| ೩. ಗಂಗಾಪೂರ | ೧ | ೧೫. ಕುಂದಗೋಳ | ೧ |
| ೪. ವಡ್ಡರಹಳ್ಳಿ | ೩ | ೧೬. ಯೆಸೂರ | ೫ |
| ೫. ಸಿಂಗಟಾಲೂರು | ೨ | ೧೭. ಕರ್ಜಗಿ | ೧ |
| ೬. ಸೂಲವಿ | ೧ | ೧೮. ಬೆಟಗೇರಿ | ೧ |
| ೭. ಹೆಬಸೂರ | ೨ | ೧೯. ಹಂದಿಗನೂರು | ೧ |
| ೮. ಹರಪನಹಳ್ಳಿ | ೧ | ೨೦. ಬನ್ನೂರ | ೧ |
| ೯. ಮುಂಡರಗಿ | ೧ | ೨೧. ಬಂಕಾಪೂರ | ೧ |
| ೧೦. ತಲವರಗಿ | ೧ | ೨೨. ನವಲಗುಂದ | ೧ |
| ೧೧. ಹರಗುರಿ | ೧ | ೨೩. ಇತರ ಊರುಗಳು | ೫ |
| ೧೨. ವೆಂಕಟಾಪೂರ | ೧ | | |
| | | ಒಟ್ಟು | ೭೭ |

ಹೀಗೆ ಕರ್ನಾಟಕದಲ್ಲಿಯ ಬಂಡಾಯದ ಕೊನೆಯ ಮತ್ತು ಅತ್ಯುಜ್ವಲವಾದ ದೀವಿಗೆಯು ನಂದಿಹೋಯಿತು. ದಕ್ಷಿಣಭಾರತದಲ್ಲಿಯೇ ಭೀಮರಾಯನಷ್ಟು ಶೂರತನದಿಂದ ಯಾರೂ ಹೋರಾಡಲಿಲ್ಲ. ಬಲಾಢ್ಯನಾದ ವೈರಿಯ ಕೂಡ ಹೋರಾಡಿ ರಣದಲ್ಲಿ ಮಡಿದ ವೀರಶ್ರೀಯನ್ನು ಕರ್ನಾಟಕದಲ್ಲಿ ಭೀಮರಾಯನ ಹೊರತು ಯಾರಿಗೂ ಸಲ್ಲಲಾರದು. ಸ್ವಾತಂತ್ರ್ಯಪ್ರೇಮವೇ ಅಪರಾಧವಾಗಿದ್ದ ಆ ದುರ್ದಿನಗಳಲ್ಲಿ ಶೂರ, ಧೀರ ಮತ್ತು ಸಾಹಸಿ ಭೀಮರಾಯನು ಒಬ್ಬ ಬಂಡುಗಾರನಾಗಿ ಪ್ರಾಣಕೊಡಬೇಕಾಯಿತು. ಭಾರತವು ಸ್ವತಂತ್ರವಾಗುವವರೆಗೆ ಭೀಮರಾಯನ ಹೆಸರುಸಹ ಬಹಿರಂಗವಾಗಿ ನುಡಿಯುವಂತಿರಲಿಲ್ಲ.

ಸರಕಾರದವರು ಭೀಮರಾಯನ ಇನಾಮನ್ನು ಜಪ್ತಮಾಡಿದರು. ಇದರಿಂದ ಭೀಮರಾಯನ ಕುಟುಂಬದ ಜನರಿಗೆ ಅತ್ಯಂತ ಸಂಕಷ್ಟವಾಯಿತು. ಭೀಮರಾಯನ ಆಜ್ಞ ಮೊಂಡಸ್ಯೆ ಭೀಮರಾಯನ ಇಬ್ಬರು ಪತ್ನಿಯರು (೧) ಕೃಷ್ಣಾಬಾಯಿ (೨) ಯಮುನಾಬಾಯಿ ಇನ್ನೂ ಜೀವಂತ ಇದ್ದರು. ಯಮುನಾಬಾಯಿಗೆ ೭೦ ವರ್ಷಗಳಾಗಿದ್ದು ಅವಳು ಆಲೂರಲ್ಲಿ ತನ್ನ ತವರುಮನೆಯಲ್ಲಿ ಇರುತ್ತಿದ್ದಳು. ಭೀಮರಾಯನಿಗೆ ಗಂಗಾಬಾಯಿ ಎಂಬ ೩೫ ವರ್ಷದ ಮಲತಾಯಿ ಇದ್ದಳು. ವೆಂಕೂಬಾಯಿ ಎಂಬ ೨೫ ವರ್ಷದ ಓರ್ವ ವಿಧವಾ ಅತ್ತಿಗೆಯಿದ್ದಳು. ಭೀಮರಾಯನ ಮೊದಲನೆಯ ಹೆಂಡತಿ ಜೀವೂಬಾಯಿಯು ಕುಂದಗೋಳ ನಾಡಗೀರರ ಮನೆಯವಳು. ಎರಡನೆಯ ಹೆಂಡತಿ ವೆಂಕೂಬಾಯಿಯು ಕುಕನೂರಿನ ಮಾದನಗೌಡ ಪಾಟೀಲನ ಮಗಳಿದ್ದು ಬಂಡಾಯದ ಕಾಲಕ್ಕೆ ಇವಳು ಕೇವಲ ಇಪ್ಪತ್ತು ವರ್ಷದವಳಿದ್ದಳು. ಇವಳಿಗೆ ತುಳಸಿ ಎಂಬ ಎರಡು ತಿಂಗಳ ಒಂದು ಹೆಣ್ಣುಕೂಸು ಮಾತ್ರ ಇತ್ತು. ಜೀವೂಬಾಯಿಗೆ ರಂಗರಾವ ಎಂಬ ಒಂಭತ್ತು ವರ್ಷದ ಮಗನಿದ್ದನು. ಇವರ ಉಪಜೀವನದ ಹೊರೆಯು ಸರಕಾರದಮೇಲೆ ಬಿದ್ದಿತು. ಭೀಮರಾಯನ ಕುಟುಂಬದವರನ್ನು ಯಾವ ಪ್ರತಿಬಂಧದಲ್ಲಿಯೂ ಇಡುವ ಅಗತ್ಯವಿಲ್ಲವೆಂದೂ ಅವರ ಉಪಜೀವನಕ್ಕೆ ಪ್ರತಿ ತಿಂಗಳ ಮೂವತ್ತು ರೂಪಾಯಿಗಳನ್ನು ಕೊಡತಕ್ಕದ್ದೆಂದೂ ಮುಂಬಯಿ ಸರಕಾರವು ಬರೆದು ಕಳಿಸಿತು. ಹಮ್ಮಿಗಿ ದೇಸಾಯರ ಕುಟುಂಬದವರಿಗೂ ಅಷ್ಟೆ ಪೋಟಗಿಯನ್ನು ಸರಕಾರವು ಮಂಜೂರು ಮಾಡಿತು. (*Political Disturbances Volumes.* **Bombay Archives Office.**)

ಮೇಲಿನ ಸಕಲ ಕಥೆಗಳಿಂದ ೧೮೫೭ರಲ್ಲಿ ಕರ್ನಾಟಕದಲ್ಲಿ ಸಾಕಷ್ಟು ಬಂಡಾಯದ ವಾತಾವರಣವು ಇದ್ದಿತೆಂದು ಓದುಗರಿಗೆ ಅಗತ್ಯ ಮನವರಿಕೆ ಯಾಗುವದು. ಆಗಸ್ಟ ೧೮೫೭ರಲ್ಲಿಯೇ ಧಾರವಾಡ ಬೆಳಗಾವಿಗಳಲ್ಲಿ ಕೊಲ್ಹಾಪೂರದ ಉದಾಹರಣೆಯನ್ನು ಅನುಸರಿಸುವ ಗಂಭೀರ ಪ್ರಯತ್ನಗಳು ನಡೆದು ಹೋದವು. ಭೀಮರಾಯನ ಬಗ್ಗೆ ಥಾಮಸ್ ಸಾಹೇಬನು ೧೦-೫-೧೮೫೭ರ ದಿನವೇ ಕಲೆಕ್ಟರನಿಗೆ ಎಚ್ಚರಿಕೆಯನ್ನು ಕೊಟ್ಟಿದ್ದು ನೋಡಿದರೆ ಕನ್ನಡಿಗರಲ್ಲಿ ಬ್ರಿಟಿಶರ ವಿರುದ್ಧ ಯಾವಬಗೆಯ ದ್ವೇಷವು ತುಂಬಿತ್ತು ಎಂಬುದರ ಕಲ್ಪನೆ ಬರುತ್ತದೆ. ಮುಂಡರಗಿ ಬಂಡಾಯದ ಮೊದಲು ಒಂದು ವರ್ಷ ಭೀಮರಾಯನು ಬಂಡಾಯದ ಸಿದ್ಧತೆಯನ್ನು ನಡೆಸಿಯೇ ನಡೆಸಿದ್ದನು. ಮತ್ತು ಅವನ ಮುಖಂಡತ್ವದಲ್ಲಿ ಸುಮಾರು ಎಲ್ಲ ಕರ್ನಾಟಕದ ಜಮೀನದಾರರು ಕಂಪನಿರಾಜ್ಯದ ವಿರುದ್ಧ ಒಳಸಂಚಿನಲ್ಲಿದ್ದರು. ಉತ್ತರ ಹಿಂದುಸ್ತಾನದಲ್ಲಿ ಏನು ನಡೆದಿದೆ ಎಂಬುದರ ಪೂರಾ ಕಲ್ಪನೆಯು ಭೀಮರಾಯ ಪ್ರಭೃತಿಗಳಿಗಿತ್ತು. ಭೀಮರಾಯನ ದಫ್ತರದಲ್ಲಿ ನಾನಾಸಾಹೇಬನ ಘೋಷಣೆಯ ಹನ್ನೆರಡು ಪ್ರತಿಗಳು ದೊರೆತಿದ್ದು ಅದರಲ್ಲಿ ಉತ್ತರಹಿಂದುಸ್ತಾನದಂತೆಯೇ ದಕ್ಷಿಣದಲ್ಲಿಯೂ ಬಂಡಾಯ ಹೂಡಬೇಕೆಂದು ನಾನಾಸಾಹೇಬನು ಸಾರಿದ್ದಾನೆ.[7] ಇದರಿಂದ ಭೀಮರಾಯನಿಗೆ ಮತ್ತು ಬಾಬಾಸಾಹೇಬನಿಗೆ ಇಡಿಯ ಭಾರತದಲ್ಲಿ ಏನು ನಡೆದಿದೆ ಎಂಬುದರ ಪೂರ್ಣ ಜ್ಞಾನವಿತ್ತು ಮತ್ತು ಬ್ರಿಟಿಶರನ್ನು ಹೊರಗೆ ಹಾಕಲು ನಡೆದ ಅಖಿಲ ಭಾರತೀಯ ಪ್ರಯತ್ನಗಳಿಗೆ ನೆರವಾಗುವ ಉದ್ದೇಶದಿಂದಲೇ ಭೀಮರಾಯ, ಬಾಬಾಸಾಹೇಬರು ಬಂಡಾಯದಲ್ಲಿ ಧುಮುಕಿದರು ಎಂದೆನಿಸುತ್ತದೆ.

ಕರ್ನಾಟಕದಲ್ಲಿ ಪ್ರತ್ಯಕ್ಷ ಬಂಡಾಯ ನಡೆದದ್ದು ನೊವೆಂಬರ ೧೮೫೭ರಿಂದ ಜೂನ ೧೮೫೮ರ ವರೆಗೆ ಎಂದು ಹೇಳಲು ಅಡ್ಡಿಯಿಲ್ಲ. ಹಲಗಲಿ 'ಹರಾಕಿರಿ'ಯು ನೊವೆಂಬರ ೧೮೫೭ರಲ್ಲಿ ಆಗುವ ವರೆಗೆ ಬ್ರಿಟಿಶ್ ಸರಕಾರದೊಡನೆ ಪ್ರತ್ಯಕ್ಷ

ಘೋಷಣೆಯ ಇಂಗ್ಲೀಷ ಭಾಷಾಂತರವು ಧಾರವಾಡ ಕಲೆಕ್ಟರ ಆಫೀಸಿನಲ್ಲಿ ದೊರೆತ ಮುಂಡರಗಿ ಬಂಡಾಯದ ಫೈಲಿನಲ್ಲಿತ್ತು. ಮೂಲ ಪ್ರತಿಯ ಅಭಾವದ ಮೂಲಕ ಘೋಷಣೆಯು ನಿಜವೋ ಅಥವಾ ಖೊಟ್ಟಿಯೋ ಎಂಬುದನ್ನು ಸಿದ್ಧ ಮಾಡಲು ಬರುವಂತಿಲ್ಲ. ಆದರೂ ಆಗಿನ ಬಂಡುಗಾರರಿಗೆ ರಾಷ್ಟ್ರೀಯ ದೃಷ್ಟಿಕೋನ ಹೊಂದಿತ್ತೆಂದು ಈ ಕಾಗದದಿಂದ ಸಿದ್ಧವಾಗುತ್ತದೆ. ಘೋಷಣೆಯನ್ನು ಕನ್ನಡಿಸಿ ಪರಿಶಿಷ್ಟದಲ್ಲಿ ಕೊಡಲಾಗಿದೆ.

ಹೋರಾಟ ಎಂಬುವೇ ಇರಲಿಲ್ಲ. ಹಲಗಲಿಯ ನಂತರ ಡಿಸೆಂಬರ ಜಾನೆವರಿ ಮತ್ತು ಫೆಬ್ರುವರಿ ತಿಂಗಳುಗಳಲ್ಲಿ ಸುರಪೂರ ವೆಂಕಟಪ್ಪನಾಯಕನು ಬಂಡಾಯ ಹೂಡಿದನು. ಮುಂದೆ ಕೂಡಲೆ ಮುಂಡರಗಿ ಮತ್ತು ನರಗುಂದ ಬಂಡಾಯ ಗಳಾದವು. ಭೀಮರಾಯನು ಜೂನ ೧ನೆಯ ತಾರೀಖಿಗೆ ಹತನಾದನು. ಜೂನ ೧೨ಕ್ಕೆ ಬಾಬಾಸಾಹೇಬನ ಫಾಸಿಯಾಯಿತು. ಜುಲೈ ಮಧ್ಯದೊಳಗೆಂದರೆ ನರ ಗುಂದ ಮತ್ತು ಮುಂಡರಗಿಯ ನೂರಾರು ಬಂಡುಗಾರರು ತೋಫಿನ ಬಾಯಿಗೆ ಕೊಡಲ್ಪಟ್ಟರು. ಇಷ್ಟು ಭಯಾನಕ ರೀತಿಯಲ್ಲಿ ಬಂಡಾಯವು ಕರ್ನಾಟಕದಲ್ಲಿ ಕೊನೆಗೊಂಡಿತು.

ಭಿನ್ನ ಭಿನ್ನ ವರ್ಗಗಳಲ್ಲಿ ಒಳಸಂಚಿನ ಪ್ರಯತ್ನಗಳೂ ಸಾಕಷ್ಟು ನಡೆದಿದ್ದ ವೆಂಬ ಪುರಾವೆಗಳೂ ಇವೆ. ಕರ್ನಾಟಕದ ಎಲ್ಲ ಜಮೀನದಾರರು ಜುಲೈ ತಿಂಗ ಳಲ್ಲಿ ಬಂಡಾಯಹೂಡುವ ಒಳಸಂಚು ಮಾಡಿದ್ದರೆಂದು ಆಂಗ್ಲ ಅಧಿಕಾರಿಗಳೇ ಮೊದಲಿನಿಂದಲೂ ತಮ್ಮ ಪತ್ರವ್ಯವಹಾರಗಳಲ್ಲಿ ಉಲ್ಲೇಖಿಸಿರುವರು. ಬೆಳ ಗಾವಿಯಲ್ಲಿ ಮಹಿಪಾಲಸಿಂಗ ಮತ್ತು ಛನ್ನೂಸಿಂಗರನ್ನು ಈ ಒಳಸಂಚಿನ ಸಲು ವಾಗಿಯೇ ತೋಫಿನ ಬಾಯಿಗೆ ಕೊಡಲಾಯಿತು. ಸಾತಾರೆಯಿಂದ ಕೊಲ್ಹಾಪೂರ, ಕೊಲ್ಹಾಪೂರದಿಂದ ಬೆಳಗಾವಿ, ಹೀಗೆ ಬಂಡಾಯದ ವಿಚಾರಗಳು ಕರ್ನಾಟಕ ದಲ್ಲಿ ನುಸುಳಿಕೊಂಡಿದ್ದವು. ಒಳಸಂಚುಗಳು ಪೂರ್ತಿಯಾಗಿ ಯಶಸ್ವಿಯಾಗಿದ್ದರೆ ಹೋರಾಟವು ಇನ್ನೂ ಉಗ್ರವಾಗಿ ಆಗಬಹುದಿತ್ತು. ಆದರೆ ನಮ್ಮ ಜನರೆ ಬಾಬಾ ಸಾಹೇಬ ಮತ್ತು ಭೀಮರಾಯನಿಂದ ಫಿತೂರಿಯಾಗಿ ಸಿದ್ಧತೆಯಾಗುವ ಮೊದಲೆ ಇಂಗ್ಲೀಷರಿಗೆ ಮಾಹಿತಿಕೊಟ್ಟಿದ್ದರಿಂದ ಬಂಡಾಯವು ಅಯಶಸ್ವಿಯಾಗಿಬಿಟ್ಟಿತು. ಸುರಪೂರ ವೆಂಕಟಪ್ಪನಾಯಕನು ಧಾರವಾಡ ಜಿಲ್ಲೆಯ ಬಂಡುಗಾರರು ಮತ್ತು ಹಲಗಲಿಯ ಬೇಡರು ತನ್ನ ಸಹಾಯ ಕೇಳಿದರೆಂದು ಒಪ್ಪಿಕೊಂಡಿದ್ದಾನೆ. ಇದ ರಿಂದ ಸಾಮೂಹಿಕ ಪ್ರಯತ್ನವು ಕರ್ನಾಟಕದಲ್ಲಿ ನಡೆಯಿತೆಂದು ಸಿದ್ಧವಾಗುತ್ತದೆ.

ನರಗುಂದ ಮತ್ತು ಮುಂಡರಗಿ ಬಂಡಾಯಗಳಾಗಲು ಸಾಧಾರಣ ಒಂದೇ ಬಗೆಯ ಕಾರಣಗಳಾದವೆಂದು ಹೇಳಬಹುದು. ಎಲ್ಲ ಉದ್ದಾಮ ವರ್ಗದವರಿಂದ ಶಸ್ತ್ರಾಸ್ತ್ರಗಳನ್ನು ಕಸಿದುಕೊಳ್ಳಬೇಕೆಂದು ಬ್ರಿಟಿಶ್ ಸರಕಾರವು ಮಾಡಿದ ನಿರ್ಧಾ ರವು ಈ ಎರಡೂ ಬಂಡಾಯಗಳಾಗಲು ಒಂದು ಮುಖ್ಯ ಕಾರಣವಾಯಿತು. ಹಲಗಲಿಗಂತೂ ಇದೊಂದರ ಹೊರತು ಬೇರೆ ಕಾರಣವೇ ಇರಲಿಲ್ಲ. ಬಾಬಾ ಸಾಹೇಬನು ತನಗೆ ದತ್ತಕ ಮಾಡಿಕೊಳ್ಳಲು ಅಪ್ಪಣೆಯು ಸಿಗದೆ ಇರುವದರಿಂದ

ಮತ್ತಿಷ್ಟು ಕ್ರುದ್ಧನಾಗಿದ್ದನು. ಅತ್ತ ಹಮ್ಮಿಗಿ ಕೆಂಚನಗೌಡನು ತನ್ನ ದತ್ತಕ ತಂದೆಯಾದ ಶಿರಹಟ್ಟಿ ದೇಸಾಯರ ಆಸ್ತಿಯನ್ನು ಕಂಪನಿಸರಕಾರವು ಜಪ್ತ ಮಾಡಿದ್ದಕ್ಕೆ ಬಂಡುಗಾರನಾಗಿದ್ದನು. ಭೀಮರಾಯನಿಗೆ ವೈಯಕ್ತಿಕ ಕಾರಣಗಳು ಇರಲಿಲ್ಲ; ಬ್ರಿಟಿಶ್‌ಸರಕಾರ ಅವನ ಸ್ವಾಭಿಮಾನಕ್ಕೆ ಹಿಡಿಸಲಿಲ್ಲ!

ಸುರಪೂರ ವೆಂಕಟಪ್ಪನಾಯಕನ ಬಂಡಾಯಕ್ಕೆ ಮಾತ್ರ ಒಂದೇ ಕಾರಣವಾಗಲಿಲ್ಲ. ವೆಂಕಟಪ್ಪನಾಯಕನ ಅರಸುಮನೆತನವನ್ನು ನಾವು ಔಧದ ನವಾಬರಿಗೆ ಹೋಲಿಸಬಹುದು. ಬಹುಕಾಲದಿಂದಲೂ ನಿಜಾಮ ಮತ್ತು ಬ್ರಿಟಿಶರ ದುಹೇರಿ ಕಾರಭಾರದಿಂದ ಸುರಪೂರದ ಅರಸರು ಬೇಸತ್ತು ಕೊನೆಗೆ ಬಂಡಾಯಕ್ಕೆ ಮೊರೆಹೊಕ್ಕರು!

ಜನರು, ಅರಸರು ಮತ್ತು ಜಮೀನದಾರರಲ್ಲಿ ಇಷ್ಟೊಂದು ಬಂಡಾಯದ ವಿಚಾರಗಳು ತುಂಬಿದ್ದರೂ ಸೈನ್ಯವು ಯಾಕೆ ಇದರಲ್ಲಿ ಸೇರಲಿಲ್ಲವೆಂಬುದು ಮಾತ್ರ ಅಚ್ಚರಿಯ ವಿಷಯವಾಗಿದೆ. ಬೆಳಗಾವಿಯ ೨೮ನೆಯ ಕಾಲ್ದಳಗಳ ಕೂಡ ಬಾಬಾಸಾಹೇಬನು ಮತ್ತು ವೆಂಕಟಪ್ಪನಾಯಕನು ಕೆಲವು ಕಾರಸ್ಥಾನಗಳನ್ನು ನಡೆಸಿದರು. ಆದರೆ ಅವರ ಪ್ರಯತ್ನಗಳಿಗೆ ಯಶಪ್ರಾಪ್ತಿಯಾಗಲಿಲ್ಲ. ಬಹುಶಃ ಇಲ್ಲಿಯ ಕಾಲ್ದಳಗಳಲ್ಲೆಲ್ಲ ಔಧದ ಸಿಪಾಯರಿದ್ದು ಜನರಿಗೂ ಅವರಿಗೂ ವಿಶೇಷ ಸ್ನೇಹಸಂಪರ್ಕಗಳಿದ್ದಂತೆ ಕಾಣಲಿಲ್ಲ. ಸೈನ್ಯವು ಬಾಬಾಸಾಹೇಬ ಮತ್ತು ಭೀಮರಾಯರಿಗೆ ನೆರವಾಗಿದ್ದರೆ ಕರ್ನಾಟಕದಲ್ಲಿ ಬಂಡಾಯದ ಇತಿಹಾಸವೇ ಬದಲಾಗುತ್ತಿತ್ತು. ಸೈನ್ಯವು ದೂರ ಉಳಿದಿದ್ದರಿಂದ ಯಾವ ಶಿಸ್ತು ಸಂಘಟನೆಗಳನ್ನೂ ಅರಿಯದ ಬಂಡುಗಾರರು ಕೇವಲ ಬ್ರಿಟಿಶ್ ತೋಫುಗಳಿಗೆ ಆಹಾರವಾಗಿಬಿಟ್ಟರು.

ಒಂದು ರೀತಿಯಲ್ಲಿ ನೋಡಿದರೆ ಕರ್ನಾಟಕದಲ್ಲಿ ೧೮೨೪ರಿಂದಲೇ ಬಂಡಾಯದ ಹವೆ ಬೀಸತೊಡಗಿತ್ತು. ೧೮೨೪ರಲ್ಲಿ ಕಿತ್ತೂರ ಚೆನ್ನಮ್ಮ, ೧೮೨೯ರಲ್ಲಿ ಸಂಗೊಳ್ಳಿಯ ರಾಯನಾಯಕ, ೧೮೩೭ರಲ್ಲಿ ಕೊಡಗು-ಮಂಗಳೂರುಗಳಲ್ಲಿ ಅಪರಂಪರ ಸ್ವಾಮಿ ಇವರು ಬ್ರಿಟಿಶರಿಗೆ ತಮ್ಮ ವಿಚಾರಗಳನ್ನು ತಿಳಿಸುತ್ತಲೆ ಇದ್ದರು. ೧೮೫೭ರ ಘಟನೆಗಳು ಈ ಎಲ್ಲ ಘಟನೆಗಳಿಗೆ ಕಳಸವನ್ನಿಟ್ಟವು.

ಆಗಿನ ಕನ್ನಡಿಗರು ಎಷ್ಟು ಶೂರರು, ಎಷ್ಟು ಸ್ವಾಭಿಮಾನಿಗಳು, ಮತ್ತು ಎಷ್ಟು ಸಾಹಸಿಗಳು ಇದ್ದರೆಂಬುದು ಬಂಡಾಯದ ಇತಿಹಾಸದಿಂದ ನಮಗೆ ಸ್ಪಷ್ಟ ತಿಳಿಯುತ್ತದೆ.

# ಹತ್ತೊಂಬತ್ತನೆಯ ಅಧ್ಯಾಯ

## ಉಪಸಂಹಾರ

ಸಿಪಾಯಿಬಂಡಾಯದ ಸಾದ್ಯಂತ ವಿವರಗಳನ್ನು ಓದಿ ತಿಳಿದುಕೊಂಡ ಮೇಲೆಯೂ ಈ ಎಲ್ಲ ದುರ್ಘಟನೆಗಳ ಇಂಗಿತಾರ್ಥವೇನು ಎಂಬ ಪ್ರಶ್ನೆಯು ಓದುಗರ ಮನಸ್ಸಿನಲ್ಲಿ ಮತ್ತೆಮತ್ತೆ ಒಡಮೂಡುವದು ಸಹಜ. ರಾಜಕೀಯ ಕಾರಣಗಳಿಗಾಗಿ ರಕ್ತಪಾತವು ನಡೆದುದು ಈ ಸ್ವಾತಂತ್ರ್ಯಯುದ್ಧದಲ್ಲಿಯೇ ಮೊದಲುಸಲವಲ್ಲ; ಕೊನೆಯುಸಲವೂ ಅಲ್ಲ. ಆದರೂ ನಮ್ಮ ದೇಶವು ಇಂಥ ವಿಪತ್ತುಗಳಿಂದ ಪಾರಾಗಿ ಹೊಸ ಜೀವನದಲ್ಲಿ ಕಾಲಿಡುತ್ತ ನಡೆದದ್ದು ಮಾತ್ರ ಬಹುದೊಡ್ಡ ಆಶಾಸೂಚಕ ಚಿಹ್ನವಾಗಿದೆ.

ಕೆಟ್ಟದ್ದರಿಂದಲೂ ಒಳ್ಳೆಯದು ಒಮ್ಮೊಮ್ಮೆ ಉದ್ಭವಿಸುವದುಂಟು ಎಂಬ ಇಂಗ್ಲೀಷ ನಾಡುನುಡಿಯಂತೆ ಈ ಯುದ್ಧದಿಂದ ಉಭಯಪಕ್ಷದವರೂ ಕೆಲವು ಉತ್ತಮ ಪಾಠಗಳನ್ನು ಕಲಿತರು. ತಮ್ಮ ಆಳಿಕೆಯನ್ನು ಭಾರತೀಯರು ವಿರೋಧಿಸುವ ರೀತಿಯನ್ನು ಕಂಡು ತಮ್ಮ ಇಷ್ಟವಿದ್ದಂತೆ ಈ ದೇಶವನ್ನು ಆಳುವದು ಶಕ್ಯವೇ ಇಲ್ಲವೆಂದು ಬ್ರಿಟಿಶರು ಕಳೆದ ಒಂದು ಶತಮಾನದಿಂದಲೂ ಪೂರಾ ಮನಗಂಡುಬಿಟ್ಟರು. ವಿದೇಶ ಆಡಳಿತಗಳ ಬೀಡು, ಎಂದು ಭಾರತವನ್ನು ವರ್ಣಿಸುವದು ತಪ್ಪು. ಯಾಕಂದರೆ ಅಲೆಕ್ಝಾಂಡರನ ಕಾಲದಿಂದ ಮೊಗಲರ ಕಾಲದವರೆಗೆ ಹೊರಗಿನಿಂದ ಬಂದವರು ಎಲ್ಲರೂ ದಿಲ್ಲಿಯಲ್ಲಿ ವಿದೇಶಿ ಆಳಿಕೆಯನ್ನು ಸ್ಥಾಪನೆ ಮಾಡಿದವರೆಂದು ಹೇಳುವದು ಸರಿಯಲ್ಲ. ಅವರಲ್ಲಿ ಬಹುಶಃ ಎಲ್ಲರೂ ಇಲ್ಲಿಯೇ ಉಳಿದು, ಭಾರತೀಯರಾಗಿ ಅನನ್ಯಭಾವದಿಂದ ರಾಜ್ಯಭಾರವನ್ನು ನೆರವೇರಿಸಿದರು. ನಿಜವಾದ ವಿದೇಶೀ ಆಳಿಕೆಯನ್ನು ಮೊದಲುಸಲ ಭಾರತದಲ್ಲಿ ಸ್ಥಾಪನೆ ಮಾಡಿದವರು ಬ್ರಿಟಿಶರೆ; ಮತ್ತು ಅವರ ಆಳಿಕೆಯನ್ನು ಭಾರತವು ಸ್ವಸಂತೋಷದಿಂದ ಎಂದೂ ಒಪ್ಪಲೇ ಇಲ್ಲ.

ಒಳಗೆ ಕಾಲಿಡಲು ಪ್ರಯತ್ನ ಮಾಡುವ ಯಾವದೇ ಪರದೇಶೀಯರನ್ನು ಒಳಗೆ ಬರಗೊಡಬಾರದೆಂಬ ಮೊದಲನೆಯ ಪಾಠವನ್ನು ನಾವು ಈ ಯುದ್ಧದಿಂದ

ಕಲಿಯತಕ್ಕದ್ದು. ಪರರಾಳಿಕೆ ಮೂಲತಃ ಅಪಾಯಕರವೇ. ಮೇಲಾಗಿ ನಮ್ಮ ಸಿಪಾಯರೆ ಇಂಗ್ಲೀಷರ ಪರವಾಗಿ ನಮ್ಮ ಜನರಮೇಲೆ ಶಸ್ತ್ರವನ್ನೆತ್ತಿ ಅವರ ಆಳಿಕೆಯನ್ನು ಭದ್ರಪಡಿಸಿದುದು ಭಾರತದ ಇತಿಹಾಸದಲ್ಲಿ ಒಂದು ಅತ್ಯಂತ ಹೇಯವಾದ ಸಂಗತಿಯಾಗಿದೆ. ಯಾವ ಸಿಪಾಯರು ಇಂಗ್ಲೀಷರ ವಿರುದ್ಧ ರಾಷ್ಟ್ರಾದ್ಯಂತವಾದ ಪ್ರಚಂಡ ಕ್ರಾಂತಿಯನ್ನೆಬ್ಬಿಸಿದರೋ ಅವರ ಸಂಗಡಿಗರೇ ಮುಂದೆ ಅದನ್ನು ಸದೆಬಡೆಯಲೂ ನೆರವಾದರು. ಪರಕೀಯರ ಪರವಾಗಿ ತಮ್ಮ ಸ್ವಂತ ಬಂಧುಗಳ ಮೇಲೆ ಶಸ್ತ್ರವನ್ನೆತ್ತಲು ಸಿಪಾಯಿಯು ನಿರಾಕರಿಸಿದ್ದರೆ ಮುಂದೆ ಬ್ರಿಟಿಶ್ ಆಳಿಕೆಗೆ ತೊಂಭತ್ತು ವರ್ಷಗಳ ಜೀವದಾನ ಸಿಕ್ಕುತ್ತಿರಲಿಲ್ಲ. ಕಳೆದುಕೊಂಡ ದಿಲ್ಲಿ, ಕಾನಪೂರ, ಝಾಂಸಿ, ಲಖನೌ ಮೊದಲಾದ ಭದ್ರಸ್ಥಾನಗಳನ್ನು ಬ್ರಿಟಿಶರು ಪುನಃ ಆಕ್ರಮಿಸುವಾಗ ಪ್ರತಿಯೊಂದು ಸಾರೆಯೂ ಅರ್ಧಕ್ಕಿಂತ ಹೆಚ್ಚು ಸೈನಿಕರು ಹಿಂದೀ ಸಿಪಾಯಿಗಳೇ ಇದ್ದರು ! ಶೂರತನದ ಶ್ರೇಯ ಮಾತ್ರ ಇಂಗ್ಲೀಷರಿಗೆ ಸಲ್ಲಿತು ! ವಿದೇಶೀಯರ ಆಳಿಕೆಗೆ ಬಲಕೊಡುವಂಥ ಯಾವ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾದ ಒಂದೂ ಕೃತಿಯನ್ನು ನಾವು ಮಾಡತಕ್ಕದ್ದಲ್ಲ; ಇದು ಈ ಯುದ್ಧದ ಎರಡನೆಯ ಪಾಠವು.

ಇಂಗ್ಲೀಷರ ಶೌರ್ಯ ನಮಗಿಂತ ಹೆಚ್ಚಾಗಿರಲಿಲ್ಲ. ಅವರ ಯುದ್ಧತಂತ್ರ ಮಾತ್ರ ನಮಗಿಂತ ಸ್ವಲ್ಪ ಉತ್ತಮವಾಗಿರಲಿಕ್ಕೆ ಸಾಕು. ಇಂಗ್ಲೀಷರು ದೂರಿನಿಂದ ಬಂದವರಿದ್ದು ಇಲ್ಲಿ ಅವರು ಅಲ್ಪಸಂಖ್ಯಾಕರಾಗಿದ್ದರಿಂದ ಅವರಲ್ಲಿ ಒಕ್ಕಟ್ಟು-ಸ್ವಾಭಿಮಾನಗಳು ಅಧಿಕಸ್ವರೂಪದಲ್ಲಿ ವ್ಯಕ್ತವಾದವು. ಇದು ಯಾವ ಜನಾಂಗಕ್ಕಾದರೂ ಸಹಜಗುಣವಾಗಿದೆ. ಅನೇಕ ದುರ್ಧರವಾದ ಪ್ರಸಂಗಗಳಲ್ಲಿ ಇಂಗ್ಲೀಷ ಯೋಧರ ಸತ್ವಪರೀಕ್ಷೆಯಾಗಿಹೋಯಿತು. ದಿಲ್ಲಿಯನ್ನು ಪುನಃ ವಶಪಡಿಸಿಕೊಳ್ಳುವಾಗ ಎನ್ಸನ್, ವಿಲ್ಸನ್ ಮೊದಲಾದ ಹೆಸರಾಂತ ಸಾಹಸಿಗಳು ಸಹ ಕೈಕಾಲುಬಿಟ್ಟಿದ್ದರು. ಮೀರತದಲ್ಲಿ ಬಂಡಾಯವು ಆದೊಡನೆ ಅಲ್ಲಿಯ ಸೇನಾಪತಿಗಳು ಮತ್ತು ಆಂಗ್ಲ ಸೈನ್ಯ ಗಾಬರಿಯಿಂದ ನಿಶ್ಚಲವಾಗಿ ಕುಳಿತುಬಿಟ್ಟಿತು. ಆದರೆ ಬಿಕ್ಕಟ್ಟಿನ ಪ್ರಸಂಗಗಳಲ್ಲಿ ಒಕ್ಕಟ್ಟು ಅಭಿಮಾನಗಳಿಂದ ಕಾರ್ಯ ಮಾಡುವ ಇಂಗ್ಲೀಷರ ರೀತಿಯು ತುಂಬಾ ಶ್ಲಾಘನೀಯವಾಗಿದೆ. ಇದರಿಂದಲೆ ಅವರು ಹಿಟ್ಲರ, ನೆಪೋಲಿಯನ್ನರಂಥ ಯಮಸ್ವರೂಪಿಯಾದ ವೈರಿಗಳ ದವಡೆಗಳಿಂದ ಪಾರಾದರು. ನೂರುವರ್ಷ ನಮ್ಮನ್ನಾಳಿದ ಇಂಗ್ಲೀಷರಿಂದ ಈ ಪಾಠವನ್ನು ನಾವು ಅವಶ್ಯವಾಗಿ ಕಲಿಯಬೇಕು. ಭರತವರ್ಷ ಮತ್ತು ಭಾರತೀಯ

ನೆಂದರೆ ನಮ್ಮ ಅಭಿಮಾನಪ್ರೇಮಗಳು ತುಂಬಿ ಉಕ್ಕಿ ಹೊರಚೆಲ್ಲಬೇಕು.

ಈ ಒಕ್ಕಟ್ಟು ಮತ್ತು ಸ್ವಾಭಿಮಾನಗಳ ಅಭಾವದ ಮೂಲಕ ಬಂಡಾಯಕ್ಕೆ ಎಷ್ಟೋ ಸಿಪಾಯಿಗಳ ಒಮ್ಮನಸ್ಸಿನ ಬೆಂಬಲವಿರಲಿಲ್ಲ. ಇದರಿಂದ ಬಂಡಾಯದ ಶಕ್ತಿಯು ಕುಗ್ಗಿತು. ಬ್ರಿಟಿಶರು ದ್ವಿಮುಖಧೋರಣೆಯನ್ನು ಅನುಸರಿಸಿದರು: ಅವರು ನಿಶ್ಚೈಯಿಂದ ಇಷ್ಟು ಸಿಪಾಯರ ಪೂರ್ಣ ಉಪಯೋಗ ಮಾಡಿಕೊಂಡರು. ಇದೇ ಸಮಯ ಸಾಧಿಸಿ ತಮಗೆ ಬೇಡಾದವರ ಮೇಲೆ ಇಲ್ಲದ ಆರೋಪ ಹೊರಿಸಿ ಅವರ ನಾಶಮಾಡಿಬಿಟ್ಟರು. ನಿಜವಾಗಿ ನೋಡಿದರೆ ಸಿಪಾಯರು ಬ್ರಿಟಿಶರ ನೌಕರರು. ಅವರ ಬಂಡಾಯದ ಹೊಣೆಯನ್ನು ಜನರ ಮೇಲೆ ಇಲ್ಲವೆ ಸಂಸ್ಥಾನಿಕರ ಮೇಲೆ ಹಾಕುವ ಪ್ರಸಂಗಗಳು ಎಷ್ಟೋ ಕಡೆಗೆ ಬರಲಿಲ್ಲ. ಬಹಾದ್ದೂರ ಶಹಾ ತಾನಾಗಿ ಬಂಡಾಯ ಸೇರಲಿಲ್ಲವೆಂಬುದು ಬ್ರಿಟಿಶರಿಗೆ ಗೊತ್ತಿತ್ತು. ಆದರೂ ಬಂಡಾಯದ ಆರೋಪವನ್ನು ಹೊರಿಸಿ ಅವನ ಮಕ್ಕಳನ್ನು ಬೀದಿಯಲ್ಲಿ ಗುಂಡಿಕ್ಕಿ ಕೊಂದು ಅವನನ್ನು ಗಡೀಪಾರು ಮಾಡಿಬಿಟ್ಟರು ; ಬಾದಶಾಹಿಯನ್ನು ನಿರವಶೇಷಗೊಳಿಸುವದೇ ಬ್ರಿಟಿಶರ ಮುಖ್ಯ ಉದ್ದೇಶವಾಗಿತ್ತು. ಝಾಂಸಿ ಲಕ್ಷ್ಮೀಬಾಯಿಯು ಬ್ರಿಟಿಶರ ಕೊಲೆಮಾಡಿಲ್ಲವೆಂದೂ ಬಂಡಾಯದಲ್ಲಿ ಸೇರಿಲ್ಲವೆಂದೂ ಬ್ರಿಟಿಶರಿಗೆ ಗೊತ್ತಿತ್ತು. ಆದರೂ ಅವಳನ್ನು ಯುದ್ಧದಲ್ಲಿ ಎಳೆದು ತಮ್ಮ ಮಾರ್ಗದಲ್ಲಿಯ ಒಂದು ಕಂಟಕವನ್ನು ಬ್ರಿಟಿಶರು ಕಿತ್ತಿ ಹಾಕಿದರು. ಕಾನಪೂರ ಹತ್ಯಾಕಾಂಡವನ್ನು ತಮ್ಮ ಸಿಪಾಯಿಗಳೆ ಮಾಡಿದ್ದರೆಂದು ಬ್ರಿಟಿಶರಿಗೆ ಗೊತ್ತಿದ್ದರೂ ಕೊನೆವರೆಗೆ ನಾನಾಸಾಹೇಬನೇ ಈ ಕೊಲೆ ಮಾಡಿಸಿದನೆಂದು ಕಂಪನಿ ಅಧಿಕಾರಿಗಳು ಸಾಧಿಸಿದರು. ನಾನಾಸಾಹೇಬನು ಇವರ ಕೈಗೆ ಸಿಕ್ಕಿದ್ದರೆ ಅದೇ ಆರೋಪದ ಮೇಲೆ ಅವನನ್ನು ಅವರು ಗಲ್ಲಿಗೂ ಹಾಕುತ್ತಿದ್ದರು. ಭಾರತದಲ್ಲಿ ಶೂರರು, ವೀರರು, ಅಭಿಮಾನಿಗಳು ಯಾರೂ ಉಳಿಯತಕ್ಕದ್ದಲ್ಲವೆಂದೇ ಅವರು ಹಟತೊಟ್ಟಿದ್ದರು. ಈ ಯುದ್ಧದ ಕಾಲಕ್ಕೆ ಇಂಥ ಅಸಂಖ್ಯ ಉದಾಹರಣೆಗಳಾದವು.

ಔಧದ ಬೇಗಮ ಹಜರತಮಹಾಲಳು ಹೇಳಿದ ಪ್ರಕಾರ ಕ್ಷಮಾಗುಣ ಮತ್ತು ಕೃತಜ್ಞತೆಗಳು ಬ್ರಿಟಿಶರಿಗೆ ಎಂದೂ ಗೊತ್ತಿರಲಿಲ್ಲ. ಭಾರತೀಯರ ಜಾತಿ ಮತ್ತು ಧರ್ಮಾಭಿಮಾನಗಳನ್ನು ಇಷ್ಟೊಂದು ಉಗ್ರವಾಗಿ ಟೀಕೆಮಾಡುವ ಇಂಗ್ಲೀಷರ ವರ್ಣದ್ವೇಷವು ಎಲ್ಲರನ್ನೂ ಮೀರಿಸುತ್ತದೆ. ಉಪಕಾರಮಾಡಿದ ಭಾರತೀಯರು ಕೃತಜ್ಞತೆ ಮತ್ತು ಪ್ರತ್ಯುಪಕಾರಗಳಿಗೆ ಅರ್ಹರೆಂದು ತಿಳಿದು

ಅವರು ಕೊನೆಯವರೆಗೂ ವರ್ತಿಸಲಿಲ್ಲ. ಹೀಗಾಗಿ ಅವರಿಗೆ ನೆರವಾದ ಭಾರತೀಯರಿಗೆ ಹಿಂದಿನಿಂದ ಮರಗುವ ಪ್ರಸಂಗವು ಬಂದಿತು. ಬಂದ ವಿಪತ್ತು ದೂರಾದೊಡನೆ ಮತ್ತೆ ಮೊದಲಿನಂತೆ ಇಂಗ್ಲೀಷರು ಗರ್ವಿಷ್ಠರಾಗಿ ಭಾರತೀಯರನ್ನು ದಾಸರಂತೆಯೇ ಕಾಣತೊಡಗಿದ್ದರು. ಸಹಾಯಮಾಡಿದ ಸಿಪಾಯರು ಮತ್ತು ಹಿಂದೀ ಅಧಿಕಾರಿಗಳಿಗೆ ಆಂಗ್ಲರು ಕೊನೆಯವರೆಗೆ ಏನೂ ಪ್ರತಿಫಲ ಮುಟ್ಟಿಸಲಿಲ್ಲ.

ಈ ಯುದ್ಧಕ್ಕೆ ಧರ್ಮಾಭಿಮಾನವೊಂದೆ ಕಾರಣವಾಗಿರಲಿಲ್ಲ. ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಕಾರಣಗಳೂ ಅದರಲ್ಲಿ ಸೇರಿಕೊಂಡವು. ಬ್ರಿಟಿಶರ ಆಳಿಕೆಯೇ ನಮಗೆ ಬೇಡವೆಂಬ ಒಂದು ಹಟವಾದವು ಜನರಲ್ಲಿ ವ್ಯಕ್ತವಾಗತೊಡಗಿತ್ತು. ಸಪ್ಟಂಬರ ೧೮೫೭ರಲ್ಲಿ ದಿಲ್ಲಿಯು ಇನ್ನೂ ಬಂಡುಗಾರರ ಕೈಯಲ್ಲಿದ್ದಾಗ ಬಂಡುಗಾರರ ಪರವಾಗಿ ಮೊಗಲ ರಾಜಕುಮಾರನೊಬ್ಬನು ಬಂಡಾಯವನ್ನು ಯಾಕೆ ಹೂಡಲಾಗಿದೆ ಎಂಬ ಬಗ್ಗೆ ಒಂದು ವ್ಯಾಪಕವಾದ ಪರಿಪತ್ರವನ್ನು ಹೊರಡಿಸಿದ್ದಾನೆ. ಬ್ರಿಟಿಶರ ಆಳಿಕೆಯು ಹಿಂದು-ಮುಸಲ್ಮಾನರಿಗೆ ಯಾವ ಬಗೆಯಿಂದ ಅಪಾಯಮಾಡಿದೆ ಎಂಬುದನ್ನು ಬಂಡುಗಾರರು ಈ ಪರಿಪತ್ರದಲ್ಲಿ ಕೂಲಂಕಷವಾಗಿ ಚರ್ಚಿಸಿದ್ದಾರೆ. ಪರಿಪತ್ರದಲ್ಲಿ ಪ್ರಾತಿನಿಧಿಕ ಅಭಿಪ್ರಾಯಗಳನ್ನು ವ್ಯಕ್ತಮಾಡಲಾಗಿದ್ದು ಧಾರ್ಮಿಕವೊಂದೆ ಅಲ್ಲದೆ ಬ್ರಿಟಿಶರ ವಿರುದ್ಧ ಎಲ್ಲ ಕಾರಣಗಳನ್ನೂ ಎತ್ತಿತೋರಿಸಲಾಗಿದೆ. ಅದರಲ್ಲಿಯ ಮುಖ್ಯ ಅಂಶಗಳು ಈ ರೀತಿ ಇವೆ:- (೧) ಜಮೀನದಾರರ ಮೇಲೆ ವಿಪರೀತ “ ಜುಮ್ಮಾ ” ಹೇರಿ, ಬ್ರಿಟಿಶರು ಗೌರವಸ್ಥ ಜಮೀನದಾರರ ಆಸ್ತಿಪಾಸ್ತಿಗಳನ್ನು ಲಿಲಾವು ಮಾಡಿಸಿ ಕೋರ್ಟಿಗೆಳೆದು ಅವಮಾನಮಾಡಿದ್ದಾರೆ. (೨) ಸ್ಟಾಂಪು ಕಾಗದಗಳನ್ನೂ ಕೋರ್ಟುಗಳನ್ನೂ ತಂದು ನ್ಯಾಯದಾನದ ಖರ್ಚನ್ನು ವಿಪರೀತ ಬೆಳೆಸಿದ್ದಾರೆ. ಬಾದಶಾಹೀ ಸರಕಾರವು ‘ ಶರಿಯತ್ ’ ಮತ್ತು ಶಾಸ್ತ್ರಗಳಿಗೆ ಅನುಸರಿಸಿ ಅಗ್ಗ ನ್ಯಾಯದಾನ ಮಾಡುವದಾಗಿ ಅಭಿವಚನ ಕೊಡುತ್ತದೆ. (೩) ಇಂಗ್ಲೀಷರು ಕಸಿದುಕೊಂಡ ಜಮೀನನ್ನು ಬಾದಶಾಹಿ ಸರಕಾರವು ವಾಪಸು ಮಾಡುವದು. (೪) ವ್ಯಾಪಾರಸ್ಥರಿಂದ ಎಲ್ಲ ದೊಡ್ಡ ವಿದೇಶಿ ವ್ಯಾಪಾರವನ್ನು ಬ್ರಿಟಿಶರು ಸೆಳೆದುಕೊಂಡಿದ್ದಾರೆ. ಉಳಿದ ಚಿಲ್ಲರೆ ವ್ಯಾಪಾರದ ಮೇಲೆ ಸಹ ಹೊರಲಾರದಷ್ಟು ಕರಭಾರ ಹಾಕಿದ್ದಾರೆ. ಬಾದಶಾಹಿ ಸರಕಾರವು ವ್ಯಾಪಾರಸ್ಥರಿಗೆ ಪೂರ್ವವತ್ ಗೌರವದ ಸ್ಥಾನವನ್ನು ಕಲ್ಪಿಸಿ ಕೊಡುವದು. (೫) ಬ್ರಿಟಿಶ್ ಸರಕಾರದ ನೌಕರಿ ಮಾಡುವ

ಹಿಂದೀಯನಿಗೆ ಇಂದು ಯಾವ ಗೌರವವೂ ಇಲ್ಲವೆಂದು ಎಲ್ಲರಿಗೂ ಗೊತ್ತಿದೆ. ಮೇಲುದರ್ಜೆಯ ನೌಕರಿಗಳೆಲ್ಲ ಬ್ರಿಟಿಶರಿಗೇ ಕೊಡಲ್ಪಡುತ್ತವೆ. ಸೈನ್ಯದಲ್ಲಿಯೇ ಆಯುಷ್ಯ ಕಳೆದ ಹಿಂದೀಯನಿಗೆ ೬೦ ಅಥವಾ ೭೦ರೂ.ಗಳ ಸಂಬಳವಿದ್ದ ಸುಬೇದಾರಿಕೆಯು ಸಿಕ್ಕರೆ ಬಹಳಾಯಿತು. ಬಾದಶಾಹಿ ಸರಕಾರವು ಸೇನಾಪತಿ ವರೆಗೆ ಎಲ್ಲ ಹುದ್ದೆಗಳನ್ನು ಹಿಂದೀಯರಿಗೆ ಮುಕ್ತಗೊಳಿಸುವದು. ಮುಲ್ಕಿ ಹುದ್ದೆಗಳಲ್ಲಿ ಕಲೆಕ್ಟರ, ಮ್ಯಾಜಿಸ್ಟ್ರೇಟ, ನ್ಯಾಯಾಧೀಶ, ಗವರ್ನರ, ದಿವಾಣ ಎಲ್ಲ ಹುದ್ದೆಗಳೂ ನಿರ್ಬಂಧವಿಲ್ಲದೆ ಹಿಂದೀಯರಿಗೆ ದೊರೆಯುವವು. (೬) ಇಂಗ್ಲೀಷ ಸರಕುಗಳನ್ನು ಕೊಂಡುಕೊಳ್ಳಲು ನಮಗೆ ಒತ್ತಾಯಪಡಿಸಿ ಇಂಗ್ಲೀಷರು ನಮ್ಮ ನೇಕಾರರನ್ನು, ನೂಲುವವರನ್ನು, ಸಿಂಪಿಗರನ್ನು, ಬಡಿಗರನ್ನು, ಕಮ್ಮಾರರನ್ನು ಮತ್ತು ಚರ್ಮಕಾರರನ್ನು ನಿರುದ್ಯೋಗಿಗಳನ್ನಾಗಿ ಮಾಡಿದ್ದಾರೆ. ಇದರಿಂದ ಕಸಬುದಾರರಿಗೆಲ್ಲ ಭಿಕ್ಷೆ ಬೇಡುವ ಪ್ರಸಂಗವು ಬಂದಿದೆ. ಬಾದಶಾಹಿ ಸರಕಾರವು ಈ ಎಲ್ಲ ಕಸಬುದಾರರಿಗೂ ಆಶ್ರಯ ಕೊಡುವದು. (ಅಶೋಕ ಮೆಹತಾ. ಪುಟ ೨೬-೩೧)

ಮೇಲಿನ ಅಂಶಗಳನ್ನು ವಿಶದವಾಗಿ ಒಳಗೊಂಡ ಪರಿಪತ್ರವು ಕೇವಲ ಪ್ರಚಾರಾತ್ಮಕವಾದದ್ದೆಂದು ಯಾರೂ ಹೇಳಲಾರರು. ಅಸಂತುಷ್ಟಿಯ ಈ ಎಲ್ಲ ಕಾರಣಗಳೂ ಸತ್ಯವಾಗಿದ್ದವು. ಆದ್ದರಿಂದ ಬ್ರಿಟಿಶರ ಆಳಿಕೆಯಿಂದ ನಾಡಿನ ವಿಮೋಚನೆ ಮಾಡುವದೇ ಸ್ವಾತಂತ್ರ್ಯಯುದ್ಧದ ಮುಖ್ಯ ಉದ್ದೇಶವಾಗಿರಬೇಕು. ಅಂದಿನ ಬಂಡುಗಾರರ ದೃಷ್ಟಿಯು ಸಾಕಷ್ಟು ವಿಶಾಲವಾಗಿತ್ತು. ದಿಲ್ಲಿಯಲ್ಲಿ ಬಂಡುಗಾರರ ಪರಿಸ್ಥಿತಿಯು ಕಠಿಣವಾಗಹತ್ತಲು ಬಾದಶಹನ ಹೆಸರಿನಿಂದ ಜಯಪುರ, ಜೋಧಪುರ, ಬಿಕಾನೇರ, ಅಳ್ವಾರ ಮುಂತಾದ ಸಂಸ್ಥಾನಗಳಿಗೆ ಹೀಗೊಂದು ಪತ್ರ ಕಳಿಸಲಾಯಿತು. "ಫಿರಂಗಿಯನ್ನು ಹಿಂದುಸ್ತಾನದಿಂದ ಹೊರಗೆ ಹಾಕಲು ನಾವು ಎಷ್ಟು ಶ್ರಮ ಮತ್ತು ಖರ್ಚುಗಳಾದರೂ ಲೆಕ್ಕಿಸತಕ್ಕದ್ದಲ್ಲ. ಹಿಂದುಸ್ತಾನವು ಸ್ವತಂತ್ರವಾದದ್ದನ್ನು ನೋಡಬೇಕೆಂದು ನನಗೆ ಉತ್ಕಟೇಚ್ಛೆಯಾಗಿದೆ. ಆದರೆ ಈ ಕ್ರಾಂತಿಯುದ್ಧವು, ಅದರ ಎಲ್ಲ ಭಾರವನ್ನೂ ಹೊತ್ತುಕೊಂಡು ರಾಷ್ಟ್ರದ ಬೇರೆಬೇರೆ ಶಕ್ತಿಗಳನ್ನು ತನ್ನೊಳಗೆ ಒಂದುಗೂಡಿಸಿ ಸಂಘಟನೆ ಮಾಡುವ ಯೋಗ್ಯತೆಯುಳ್ಳವನೊಬ್ಬನು ಮುಂದೆ ಬಂದು ಜವಾಬ್ದಾರಿಯನ್ನು ಹೊತ್ತು ಮಾರ್ಗದರ್ಶನ ಮಾಡದೆ ಯಶಸ್ವಿಯಾಗಲಾರದು. ಇಂಗ್ಲೀಷರು ಹೋದಮೇಲೆ ದೇಶವನ್ನು ಆಳಬೇಕೆಂಬ ಇಚ್ಛೆಯು ನನಗೆ ಉಳಿ

ಡಿಲ್ಲ. ಆದ್ದರಿಂದ ನನ್ನ ಪುನರುತ್ಥಾನದ ಸಲುವಾಗಿ ಬಂಡಾಯ ನಡೆದಿದೆ ಎಂದು ತಿಳಿಯಬೇಡಿರಿ. ನೀವು, ಎಲ್ಲ ಹಿಂದೀ ರಾಜರು ಖಡ್ಗಸಿರಿದು ವೈರಿಯನ್ನು ಓಡಿಸುವದಾದರೆ ನಾನು ಸಿಂಹಾಸನದಿಂದ ಇಳಿದು ನೀವು ಆರಿಸಿದ ಯಾವದೊಂದು ನರೇಂದ್ರರ ಮಂಡಳಕ್ಕೆ ಅಧಿಕಾರ ಬಿಟ್ಟುಕೊಡಲು ಸಿದ್ಧನಿದ್ದೇನೆ.''

ಇದರಲ್ಲಿ ಜಾತೀಯತೆ ಎಲ್ಲಿದೆ? ಧರ್ಮಾಭಿಮಾನ, ಸಿಂಹಾಸನದ ಅಭಿಮಾನ ಎಲ್ಲಿವೆ? ಇಂಗ್ಲೀಷರನ್ನು ಎಂಥ ಭಗೀರಥ ಪ್ರಯತ್ನದಿಂದಾದರೂ ಹೊರಗೆಹಾಕಬೇಕೆಂಬ ಕಳಕಳಿಯೊಂದು ಮಾತ್ರ ಒಡೆದು ಕಾಣುತ್ತದೆ. ಇದರಿಂದ ಸಿಪಾಯಿಬಂಡಾಯ ಎಂಬ ಹೆಸರಿಗಿಂತ ಸ್ವಾತಂತ್ರ್ಯಯುದ್ಧ ಎಂಬ ಹೆಸರೇ ಅನ್ವರ್ಥಕ ಎಂದು ಧಾರಾಳವಾಗಿ ಹೇಳಬಹುದು.

ಉಭಯಪಕ್ಷಗಳೂ ನಿರಪರಾಧಿಗಳ ಮೇಲೆ ಮಾಡಿದ ಅತ್ಯಾಚಾರಗಳ ಬಗ್ಗೆ ಒಂದು ಮಾತು ಹೇಳುವದು ಅವಶ್ಯ. ಒಂದು ರಾಜಕೀಯ ಕಾರಣದ ಸಲುವಾಗಿ ಯುದ್ಧ ನಡೆಯಿತೆಂದರೆ ಅದಕ್ಕೆ ಸಂಬಂಧಪಟ್ಟವರನ್ನು ಕ್ಷಿಪ್ರ ರೀತಿಯಲ್ಲಿ ನಾಶಮಾಡುವದು ಎಲ್ಲ ಜನಾಂಗಗಳೂ ಅನುಸರಿಸುವ ರೀತಿ. ಆದ್ದರಿಂದ ದಿಲ್ಲಿ, ಕಾನಪೂರ, ಲಖನೌ ಮೊದಲಾದ ಮುತ್ತಿಗೆಗಳಲ್ಲಿ ನಡೆದ ಬಿಳಿಯರ ಸಂಹಾರ ಹೇಯವಾದ ಕ್ರೂರ ಕೃತಿ ಎಂದು ಹೇಳಲು ಬರುವಂತಿಲ್ಲ. ಕಾನಪೂರ ಒಂದೇ ಊರಲ್ಲಿ ಶರಣಾಗತರಾದ ಇಂಗ್ಲೀಷರ ಮೇಲೆ ಘೋರ ಕೃತ್ಯಗಳು ನಡೆದವು. ಆದರೆ ಇಲ್ಲಿಯಾಗಲಿ ದಿಲ್ಲಿಯಲ್ಲಾಗಲಿ ಸ್ತ್ರೀಯರುಮಕ್ಕಳ ಕೊಲೆಯಾಯಿತೆ ಹೊರತು ಒಬ್ಬ ಮಹಿಳೆಯ ಮಾನಭಂಗವೂ ಆಗಿಲ್ಲವೆಂದು ವಿಚಾರಣೆ ನಡೆಸಿದ ಇಂಗ್ಲೀಷರೆ ಹಿಂದಿನಿಂದ ಒಪ್ಪಿಕೊಂಡಿದ್ದಾರೆ! ಬಂಡಾಯವು ನಡೆದಾಗ ಮಾತ್ರ ಮಿಶನರಿ ಮಹನೀಯರು ಸ್ತ್ರೀಯರ ಮಾನಭಂಗದ ಸುಳ್ಳು ಮತ್ತು ಅತಿರಂಜಿತ ವರ್ಣನೆಗಳನ್ನು ಇಂಗ್ಲಂಡಿನಲ್ಲಿ ಪ್ರಸಿದ್ಧಿಸಿದರು. ಪರಿಣಾಮತಃ ನೀಲ, ರೇನಾಡ, ಹೆವಲಾಕ್, ನಿಕೊಲ್ಸನ್ನನಂಥವರು ಸೇಡಿನ ಹೆಸರಿನಲ್ಲಿ ಹಿಂದೀಯರ ಮೇಲೆ ರಾಕ್ಷಸೀಕೃತ್ಯಗಳನ್ನು ನಡೆಸಿದರು. ಬ್ರಿಟಿಶ ಸೈನಿಕರು ಎಷ್ಟು ನಿರಪರಾಧಿಗಳನ್ನು ಕೊಂದರು, ಎಷ್ಟು ಹಳ್ಳಿಗಳನ್ನು ಸುಟ್ಟರು, ಎಷ್ಟು ಚಿತ್ರಹಿಂಸೆ ಮತ್ತು ಅತ್ಯಾಚಾರಗಳನ್ನು ಮಾಡಿದರು, ಎಂಬ ಬಗ್ಗೆ ವಿವರಗಳೆಲ್ಲ ಕಾಲಗರ್ಭದಲ್ಲಿ ಮುಚ್ಚಿ ಹೋಗಿವೆ. (ಎಡ್ವರ್ಡ ಥಾಮಸನ್ನರು ತಮ್ಮ *The other side of the medal* ಎಂಬ ಪುಸ್ತಕದಲ್ಲಿ ಈ ವಿಷಯವನ್ನು ಚೆನ್ನಾಗಿ ಚರ್ಚೆ ಮಾಡಿರುವರು.)

ಮಾಯ್ದಗಾಯಗಳನ್ನು ಈಗ ಕೆರಳಿಸುವ ಮನಸ್ಸು ಹಿಂದಿಯರಿಗೂ ಇಲ್ಲ. ಗಾಂಧೀಜಿಯವರು ಭಾರತಕ್ಕೆ ಹೊಸ ಪಾಠವೊಂದನ್ನು ಕಲಿಸಿಬಿಟ್ಟಿರುವರು. ಆದರೆ ಇಂಗ್ಲೀಷರು ಹಿಂದೀಯರ ಮೇಲೆ ದೋಷ ಹೊರಿಸಲು ಬಂದರೆ ಮಾತ್ರ, ಪರಕೀಯರನ್ನು ಹೊರದೂಡಲು ಏನು ಮಾಡಿದರೂ ಕ್ಷಮ್ಯ, ಎಂದು ಉತ್ತರ ಕೊಡಬೇಕಾಗುವದು. ಹೊರಗಿನವರಾದ ಇಂಗ್ಲೀಷರು ಮಾತ್ರ ಕ್ರೂರತನ ಮಾಡಿದಲ್ಲಿ ಯಾವದೇ ಕಾರಣದಿಂದ ಅದು ಎಂದೂ ಕ್ಷಮ್ಯವಾಗಲಾರದು.

ಬಂಡಾಯವು ಮುಗಿಯಿತು; ಮುಂದೆ ನೂರುವರ್ಷಗಳೂ ಮುಗಿದಿವೆ. ಭಾರತದಲ್ಲಿ ನಡೆದ ಬ್ರಿಟಿಶ ದಬ್ಬಾಳಿಕೆಯೂ ಇತಿಹಾಸದ ಒಂದು ಅಧ್ಯಾಯವನ್ನು ಸೇರಿಕೊಂಡಿದೆ. ಶಾಂತರೀತಿಯಲ್ಲಿ ಅಧಿಕಾರತ್ಯಾಗ ಮಾಡಿ ಬ್ರಿಟಿಶರು ಸಾಕಷ್ಟು ದೊಡ್ಡಮನಸ್ಸು ತೋರಿಸಿದ್ದಾರೆ. ಶತಾಬ್ದಿಯ ಸುಮುಹೂರ್ತದಲ್ಲಿಯೂ ಹಿಂದಿನ ವಿಷನಿಮಿಷಗಳನ್ನು ನೆನೆಸಿಕೊಳ್ಳುವ ಕಾರಣವಿಷ್ಟೆ; ಹಿಂದಿನ ದಾಸ್ಯವನ್ನು ನೆನೆದು ಮುಂದಿನ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳೋಣ. ಭಾರತದ ಶಾಂತಿ, ಸಮೃದ್ಧಿ, ಸಂತುಷ್ಟಿಗಳು ಎಂದೂ ಅಳಿಯದೆ ಸದಾ ಬೆಳೆಯಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸಿ ಈ ಚಿಕ್ಕ ಬರಹವನ್ನು ಮುಗಿಸುತ್ತೇನೆ.

**ಜಯ ಹಿಂದ**

# ಪರಿಶಿಷ್ಟ ೧

## ಬಂಡಾಯದ ಕಾಲಾನುಕ್ರಮಣಿಕೆ

| ದಿನಾಂಕ | ಬಂಡಿನ ಘಟನೆ |
|---|---|
| ೧೦—೫—೧೮೫೭ | ಭಾರತದಲ್ಲಿ ಬಂಡಾಯ ಪ್ರಾರಂಭ |
| ೧೨—೫—೧೮೫೭ | ಬಂಡುಗಾರರಿಂದ ದಿಲ್ಲಿ ಆಕ್ರಮಣ |
| ೧೨—೫—೧೮೫೭ ರಿಂದ ೨೪—೯—೧೮೫೭ರ ವರೆಗೆ | ದಿಲ್ಲಿಯ ಸಲುವಾಗಿ ಯುದ್ಧ |
| ೨೩—೫—೧೮೫೭ | ಕಾಶಿ ಮತ್ತು ಅಲಹಾಬಾದಗಳಲ್ಲಿ ಬಂಡಾಯ |
| ೪—೬—೧೮೫೭ | ಲಖನೌದಲ್ಲಿ ಬಂಡಾಯ |
| ೪—೬—೧೮೫೭ ರಿಂದ ೧೪—೬—೧೮೫೭ರ ವರೆಗೆ | ಔಧ ಮತ್ತು ರೋಹಿಲಖಂಡ ಸ್ವತಂತ್ರವಾದವು |
| ೫—೬—೧೮೫೭ ರಿಂದ ೨೧—೩—೧೮೫೮ರ ನರೆಗೆ | ಲಖನೌ ಯುದ್ಧ |
| ೫—೬—೧೮೫೭ | ಕಾನಪೂರದಲ್ಲಿ ಬಂಡಾಯ |
| ೬—೬—೧೮೫೭ ರಿಂದ ೨೬—೬—೧೮೫೭ರ ವರೆಗೆ | ಕಾನಪೂರ ಮುತ್ತಿಗೆ |
| ೨೬—೬—೧೮೫೭ | ಸೇನಾಪತಿ ವ್ಹೀಲರನ ಶರಣಾಗತಿ |
| ೨೯—೬—೧೮೫೭ | ಚಿನ್ಹಾತದಲ್ಲಿ ಬ್ರಿಟಿಶರಿಗೆ ಸೋಲು |
| ೨೯—೬—೧೮೫೭ ರಿಂದ ೧೬—೮—೧೮೫೭ರ ವರೆಗೆ | ಲಖನೌ ಪ್ರವೇಶ ಮಾಡಲು ಹೆವಲಾಕನ ವಿಫಲ ಪ್ರಯತ್ನ |
| ೧೪—೯—೧೮೫೭ ರಿಂದ ೨೦—೯—೧೮೫೭ರ ವರೆಗೆ | ದಿಲ್ಲಿ ಪತನ |
| ೧೪—೧೨—೧೮೫೭ ರಿಂದ ೩—೧—೧೮೫೮ರ ವರೆಗೆ | ಬ್ರಿಟಿಶರಿಂದ ಗಂಗಾ-ಜಮುನಾ ದೊಆಬ ಪ್ರದೇಶದ ಪುನರಾಕ್ರಮಣ |
| ೨೧-೧೨—೧೮೫೭ ರಿಂದ ೪—೩—೧೮೫೮ರ ವರೆಗೆ | ಔಧದ ಪುನರಾಕ್ರಮಣ |
| ೩—೩—೧೮೫೮ | ಬುಂದೇಲಖಂಡದ ಪುನರಾಕ್ರಮಣ |

| ದಿನಾಂಕ | ಬಂಡಿನ ಘಟನೆ |
|---|---|
| ೮—೩—೧೮೫೮ರಿಂದ ೨೦—೩—೧೮೫೮ರ ವರೆಗೆ | ಲಖನೌದ ಪತನ |
| ೩—೪—೧೮೫೮ | ಝಾಂಸಿ ಪತನ |
| ೬—೫—೧೮೫೮ | ಬರೇಲಿ ಪತನ |
| ೨೩—೫—೧೮೫೮ | ಕಾಲಪಿಯಲ್ಲಿ ಬಂಡುಗಾರರ ಸೋಲು |
| ೨—೬—೧೮೫೮ | ಗ್ವಾಲೇರವನ್ನು ಬಂಡುಗಾರರು ಹಿಡಿದುಕೊಂಡರು |
| ೧೮—೬—೧೮೫೮ | ಝಾಂಸಿ ಲಕ್ಷ್ಮೀಬಾಯಿಯ ಮರಣ |
| ೨೦—೬—೧೮೫೮ | ಗ್ವಾಲೇರದ ಪತನ |
| ೨—೮—೧೮೫೮ | ಈಸ್ಟ ಇಂಡಿಯಾ ಕಂಪನಿ ರದ್ದಾಯಿತು |
| ೧-೧೧—೧೮೫೮ | ವ್ಹಿಕ್ಟೋರಿಯಾ ರಾಣಿಯ ಘೋಷಣೆ |
| ೧-೧೧—೧೮೫೮ರಿಂದ ೩೦-೧೧-೧೮೫೮ರ ವರೆಗೆ | ಥದಲ್ಲಿ ಸೈನ್ಯಾಚರಣೆ |
| ೭—೪—೧೮೫೯ | ಮಾನಸಿಂಗನ ಫಿತೂರಿಯಿಂದ ತಾತ್ಯಾ ಟೋಪಿಯ ಬಂಧನ |
| ೧೮—೪—೧೮೫೯ | ತಾತ್ಯಾ ಟೋಪಿಗೆ ಫಾಸಿ |
| ೧೮೫೯ ಅಕ್ಟೋಬರದಿಂದ ಡಿಸೆಂಬರದ ವರೆಗೆ | ಬಂಡುಗಾರರ ಶೋಧಕಾರ್ಯ |

## ಕರ್ನಾಟಕದಲ್ಲಿ

| | |
|---|---|
| ೨೩=೧೦—೧೮೨೪ | ಕಿತ್ತೂರಿನ ಮೊದಲನೆಯ ಕಾಳಗ, ಥ್ಯಾಕರೆ ಸಾಹೇಬನ ಮರಣ |
| ೩-೧೨—೧೮೨೪ | ಕಿತ್ತೂರಿನ ಕೊನೆಯ ಕಾಳಗ |
| ೨—೨—೧೮೨೯ | ಚೆನ್ನಮ್ಮ ಲಿಂಗೈಕ್ಯಳಾದಳು |
| ೧೮೨೯ | ಸಂಗೊಳ್ಳಿ ರಾಯಣ್ಣನ ಬಂಡಾಯ; ರಾಯಣ್ಣನಿಗೆ ಫಾ |
| ೧೮೩೩—೧೮೩೭ | ಮಂಗಳೂರು-ಕೊಡಗುಗಳಲ್ಲಿ ಅಪರಂಪರ ಸ್ವಾಮಿಯ ಬಂಡಾಯ |
| ೫—೪—೧೮೩೭ | ಬಂಡುಗಾರರು ಮಂಗಳೂರು ಹಿಡಿದುಕೊಂಡರು |
| ೧೩—೫—೧೮೩೭ | ಅಪರಂಪರ ಸ್ವಾಮಿಯ ಕೈದು; ಮಂಗಳೂರಿನ ವಿಮೋಚನೆ |
| ಡಿಸೆಂಬರ ೧೮೨೪ | ಸಿಂದಗಿ ಬಂಡಾಯ |
| ೧೮೪೦ | ಬಾದಾಮಿ ಬಂಡಾಯ |

| | |
|---|---|
| ೩೦-೧೧—೧೮೫೭ | ಹಲಗಲಿ ಹರಾಕಿರಿ |
| ೧೧—೧—೧೮೫೮ | ಹಲಗಲಿಯ ೧೯ ಬಂಡುಗಾರರಿಗೆ ಮುಧೋಳ ಸಂತೆಯಲ್ಲಿ ಜಾಹೀರ ಫಾಸಿ |
| ೧೪—೧೧—೮೫೮ | ಹಲಗಲಿಯಲ್ಲಿ ಆರು ಬಂಡುಗಾರರಿಗೆ ಜಾಹೀರ ಫಾಸಿ |
| ೮—೨—೧೮೫೮ | ಸುರಪುರ ಬಂಡಾಯ |
| ೨೭—೫—೧೮೫೮ | ನರಗುಂದ ಬಾಬಾಸಾಹೇಬನು ಇಂಗ್ಲೀಷರ ಮೇಲೆ ಯುದ್ಧ ಸಾರಿದನು |
| ೨೯—೫—೧೮೫೮ | ಸುರ್ಕೆಬಾನದಲ್ಲಿ ಮ್ಯಾನ್ಸನ್ ಸಾಹೇಬನ ಕೊಲೆ |
| ೧—೬—೧೮೫೮ | ಬ್ರಿಟಿಶರು ನರಗುಂದ ಮುತ್ತಿದರು |
| ೨—೬—೧೮೫೮ | ಬ್ರಿಟಿಶರಿಂದ ನರಗುಂದದ ಲೂಟಿ ಮತ್ತು ಆಕ್ರಮಣ; ಬಾಬಾಸಾಹೇಬನ ಪಲಾಯನ |
| ೨—೬—೧೮೫೮ (ರಾತ್ರಿ) | ತೊರಗಲ ಅಡವಿಯಲ್ಲಿ ಬಾಬಾಸಾಹೇಬನ ಶೋಧ ಮತ್ತು ಬಂಧನ |
| ೧೨—೬—೧೮೫೮ | ಬೆಳಗಾವಿಯಲ್ಲಿ ಬಾಬಾಸಾಹೇಬನಿಗೆ ಫಾಸಿ |
| ೨೪—೫—೧೮೫೮ | ಹಮ್ಮಿಗಿಯಲ್ಲಿ ಮುಂಡರಗಿ ಭೀಮರಾಯನು ಬಂಡು ಸಾರಿದನ |
| ೧—೬—೧೮೫೮ | ಬ್ರಿಟಿಶರು ಕೊಪ್ಪಳ ಕಿಲ್ಲೆ ಮುತ್ತಿದರು; ಕಾಳಗದಲ್ಲಿ ಭೀಮರಾಯ ಕೆಂಚನಗೌಡರ ಮರಣ; ಕರ್ನಾಟಕದಲ್ಲಿ ಬಂಡಾಯದ ಸಮಾಪ್ತಿ. |

# ಪರಿಶಿಷ್ಟ ೨

## ಘೋಷಣೆ[1]

ಧೋಂಡೋಪಂತ ನಾನಾಸಾಹೇಬ ಪಂತಪ್ರಧಾನ ಇವರಿಂದ ದಕ್ಷಿಣದ ಮತ್ತು ಕರ್ನಾಟಕದ ಎಲ್ಲ ಜನರಿಗೆ, ಜಮೀನದಾರರಿಗೆ, ಪಾಟೀಲ, ಕುಲಕರ್ಣಿಯರಿಗೆ, ನಾಯಕವಾಡ ಶೇತಸನದಿಯರಿಗೆ, ಸರಂಜಾಮದಾರ ಜಹಾಗೀರದಾರರಿಗೆ, ದೇಶಪಾಂಡೆ, ದೇಶಮುಖರಿಗೆ ಆಜ್ಞಾನುಸಾರವಾಗಿ ಹೊರಡಿಸಲ್ಪಟ್ಟ ಘೋಷಣೆಯೇನಂದರೆ :—

ಕಾಫೀರರಾದ ಇಂಗ್ಲೀಷರು ವ್ಯಾಪಾರ ಮಾಡುವ ಸೋಗಿನಲ್ಲಿ ಈ ದೇಶಕ್ಕೆ ಮೊದಲು ಬಂದರು. ಮುಂದೆ ಅವರು ಸರಂಜಾಮದಾರರಲ್ಲಿ ಆತ್ಮಘಾತ ಮಾಡುವಂಥ ಪ್ರಚೋದಕ ವರ್ತನೆಯಿಂದ ಮತ್ತು ಮೋಸಗಾರಿಕೆಯಿಂದ ಎಲ್ಲ ಹಿಂದು ಮತ್ತು ಮುಸಲ್ಮಾನ ರಾಜ್ಯಗಳನ್ನು ಆಕ್ರಮಿಸಿಕೊಂಡರು. ಕೆಲವು ಮಾಜಿ ಅರಸರ ವಂಶಜರನ್ನು ಇಂಗ್ಲೀಷರು ಬಂಧಿಸಿಟ್ಟಿದ್ದಾರೆ; ಮತ್ತೆ ಕೆಲವರನ್ನು ಬಿಕ್ಕೆ ಬೇಡಲು ಹಚ್ಚಿದ್ದಾರೆ. ಇಡಿಯ ದೇಶದ ಉಪಭೋಗವನ್ನು ತಾವೆ ಮಾಡುತ್ತಿರುವರು. ಇದು ನಿಮಗೆಲ್ಲರಿಗೂ ಗೊತ್ತಿದ್ದ ವಿಷಯ.

ಈ ಕಾಫೀರರು ತಾವು ಸಾಮ್ರಾಜ್ಯವನ್ನು ಗಳಿಸಿರುವೆವೆಂಬ ಬಲದಿಂದ ಬಹಳ ಉದ್ದಾಮರಾಗಿದ್ದಾರೆ. ಮೇಲೆ ನ್ಯಾಯದ ಸೋಗು ಹಾಕಿ ಅತೀವ ಅನ್ಯಾಯವಾದ ರೀತಿಯಲ್ಲಿ ಜೀವಹಾನಿ ಮಾಡಿ ಆಸ್ತಿ ಮತ್ತು ಸಂಪತ್ತು ಗಳಿಸಿಕೊಂಡಿದ್ದಾರೆ! ಈ ದೇಶದ ಜನರಿಗೆ ಇಲ್ಲದ ಭ್ರಮೆ ಮಾಡಿ ಮತಾಂತರ ಮಾಡತೊಡಗಿರುವರು. ತಮ್ಮ ಜಾತಿ-ಧರ್ಮಗಳನ್ನು ತ್ಯಾಗ ಮಾಡಲು ಇಂಗ್ಲೀಷರು ಉಪದೇಶ ಮಾಡುತ್ತಿದ್ದಾರೆ! ಸೌಮ್ಯಮಾರ್ಗವು ನಿರುಪಯುಕ್ತವಾದಲ್ಲಿ ಒತ್ತಾಯ ಮಾಡುವ ವಿಚಾರದಲ್ಲಿದ್ದಾರೆ.

ಧರ್ಮಸ್ಥರೂ ಪಾಪಭೀರುಗಳೂ ಆದ ನಮ್ಮ ಮೇಲೆ ಕಾಫೀರ (ಇಂಗ್ಲೀಷ)ರು ಅಪಾರ ದುರುಳುತನ, ಅನ್ಯಾಯ ಮತ್ತು ದಬ್ಬಾಳಿಕೆಗಳನ್ನು ನಡೆಸಹತ್ತಿದ್ದಾರೆ. ಈ

---

1. ಈ ಘೋಷಣೆಯ ಹನ್ನೆರಡು ಪ್ರತಿಗಳು ಮುಂಡರಗಿ ಭೀಮರಾಯನ ದಪ್ತರಿನಲ್ಲಿ ದೊರೆತಿವೆ ಎಂದು ಧಾರವಾಡ ಕಲೆಕ್ಟರರಾದ ಓಗಿಲ್ವಿ ಅವರು ಮುಂಬೈ ಸರಕಾರಕ್ಕೆ ಪತ್ರ ಬರೆದಿದ್ದಾರೆ. ಪತ್ರದೊಡನೆ ಘೋಷಣೆಯ ಇಂಗ್ಲೀಷ ಭಾಷಾಂತರದ ಪ್ರತಿಯೊಂದನ್ನು ಅವರು ಕಳಿಸಿದ್ದು ಅದರ ಉತಾರವು ಧಾರವಾಡ ಕಲೆಕ್ಟರ ಕಚೇರಿಯ ಹಳೆಯ [illegible]ವೊಂದರಲ್ಲಿ ದೊರಕಿದೆ. ಘೋಷಣೆಯ ಮೂಲ ಪ್ರತಿಯು ಯಾವ ಭಾಷೆಯಲ್ಲಿತ್ತೆಂಬುದನ್ನು ಕಲೆಕ್ಟರರು ತಿಳಿಸಿಲ್ಲ; ಮೂಲ ಪ್ರತಿಯು ಧಾರವಾಡದಲ್ಲಿ ಲಭ್ಯವಿಲ್ಲ.

ಭಾರತದ ಅನೇಕ ಭಾಗಗಳಲ್ಲಿ ದೊರೆತ ನಾನಾಸಾಹೇಬನ ಘೋಷಣೆಗಳಿಗೂ ಇದಕ್ಕೂ ಬಹಳ ಸಾಮ್ಯವಿದೆ ಎಂದು ಕಲೆಕ್ಟರ ಓಗಿಲ್ವಿ ಅಭಿಪ್ರಾಯ ಪಟ್ಟಿದ್ದಾರೆ.

## ಪರಿಶಿಷ್ಟ ೨

ಕಾಫೀರರಿಗೆ ಶಿಕ್ಷೆ ಕೊಡುವ ಮತ್ತು ಅವರನ್ನು ನಷ್ಟಗೊಳಿಸಿ ಮೊದಲಿನಂತೆ ಹಿಂದು ಮತ್ತು ಮುಸಲ್ಮಾನ ರಾಜ್ಯಗಳನ್ನು ಸ್ಥಾಪನೆ ಮಾಡಿ ದೇಶರಕ್ಷಣೆ ಮಾಡುವ ಹೊಣೆಯನ್ನು ಪರಮಾತ್ಮನು ನನ್ನ ಮೇಲೆ ಹೊರಿಸಿದ್ದಾನೆ. ನರ್ಮದಾ ನದಿಯ ಉತ್ತರ ದೇಶವನ್ನು ನಾವೀಗ ವಿಜಯಶಾಲಿಗಳಾಗಿದ್ದೇವೆ.

ದುಷ್ಟ ಕಾಫೀರರ ಆಳಿಕೆಗೆ ಒಳಪಟ್ಟು ಜೀವಿಸುವದು ಅತ್ಯಂತ ಲಾಂಛನಾಸ್ಪದವು. ಆದ್ದರಿಂದ ಈ ಘೋಷಣೆಯನ್ನು ಓದಿದ ಕೂಡಲೆ ನೀವು ಶೂರತನದಿಂದ ಖಡ್ಗ ಹಿರಿದು ದಯೆ-ದಾಕ್ಷಿಣ್ಯವಿಲ್ಲದೆ ಕಾಫೀರರನ್ನು ನಾಶಮಾಡತಕ್ಕದ್ದು. ಇದರಿಂದ ನಿಮಗೆ ಪುಣ್ಯವು ಬರುತ್ತದೆ ಮತ್ತು ಪೌರುಷ ಧೈರ್ಯಗಳನ್ನು ತೋರಿಸಿದಂತಾಗುತ್ತದೆ.

ಧೀರರೆ! ನಿಮ್ಮ ಹಿರಿಯರ ಹಾಗು ರಾಜರ ಮೇಲೆ ಕಾಫೀರ ಇಂಗ್ಲೀಷರು ಮಾಡಿದ ಅನ್ಯಾಯ ಮತ್ತು ದುಷ್ಟತನಗಳ ಸೇಡು ತೆಗೆಯಲು ಈಗಿನಕಿಂತ ಹೆಚ್ಚು ಅನುಕೂಲವಾದ ಸಮಯವಿಲ್ಲ. ಈ ಸಂಧಿಯನ್ನು ಕಳೆದುಕೊಂಡು ದಾಕ್ಷಿಣಾತ್ಯರು ಮೂರ್ಖರು ಮತ್ತು ಹೇಡಿಗಳೆಂಬ ಅಪಕೀರ್ತಿಯನ್ನು ಹೊಂದಬೇಡಿರಿ, ಸದ್ಯಕ್ಕೆ ಧಾರ್ಮಿಕ ವಿಷಯದಲ್ಲಿ ಒಡಕುಗಳಾಗಿ ಇಂಗ್ಲೀಷರು ತಮ್ಮತಮ್ಮೊಳಗೆ ಜಗಳಾಡುವದು, ಹೊಡೆದಾಡುವದು, ಕೊಲ್ಲುವದು ಮಾಡತೊಡಗಿದ್ದಾರೆ. ಹಿಂದುಸ್ಥಾನದಿಂದ ಇಂಗ್ಲೀಷರನ್ನು ಹೊರಗೆ ಹಾಕಬೇಕೆಂದು ಬಹುದಿನದಿಂದ ಮತ್ತು ಬಹಳ ದ್ವೇಷದಿಂದ ಹೊಂಚುಹಾಕಿ ಕುಳಿತಿದ್ದ ಫ್ರೆಂಚರು ಮತ್ತು ರಶಿಯನ್ನರು ಹಾಗೆ ಮಾಡಲು ಇದೇ ಸರಿಯಾದ ಸಮಯವೆಂದು ತಿಳಿದು ಈಗ ಮೂರು ತಿಂಗಳುಗಳಿಂದ ಸಮುದ್ರಮಾರ್ಗವಾಗಿ ಸೈನ್ಯ ಕಳಿಸುತ್ತಿದ್ದಾರೆ. ಈ ಕಾಫೀರರ ಮೇಲೆ ಚೀನೀಯರು ಯುದ್ಧ ಸಾರಿದ್ದಾರೆ; ಇವರು ಹೋರಾಡಲು ತಮ್ಮ ಹತ್ತಿರ ಸೈನ್ಯವಿಲ್ಲದೆ ಗಾಬರಿಗೊಂಡಿದ್ದಾರೆ. ಪರ್ಶಿಯನ್ನರು, ಅಫಗಾನರು, ಬಲೂಚಿಗಳು ತಮ್ಮ ಸೈನ್ಯಸಂಗ್ರಹಿಸಿ ನಮಗೆ ಸಹಾಯಮಾಡಲು ಸಿದ್ಧರಾಗಿದ್ದಾರೆ. ಬಹಳ ಹೇಳುವದೇನು, ಇಂಗ್ಲೀಷರನ್ನು ದೇಶದಿಂದ ಹೊರಗೆಹಾಕಲು ಇದೊಂದು ಸುವರ್ಣಸಂಧಿಯಾಗಿದೆ. ಜನರನ್ನು ಧೈರ್ಯಗೆಡಿಸುವ ಉದ್ದೇಶದಿಂದ ದಿಲ್ಲಿ ಮತ್ತು ಇತರ ನಗರಗಳನ್ನು ಪುನಃ ವಶಪಡಿಸಿಕೊಂಡಿರುವೆವೆಂದೂ ನಮ್ಮನ್ನು ಸೋಲಿಸಿರುವೆವೆಂದೂ ಕಾಫೀರ ಇಂಗ್ಲೀಷರು ಸುಳ್ಳು ಸುದ್ದಿಯನ್ನು ಹಬ್ಬಿಸಿದ್ದಾರೆ; ಇಂಥವುಗಳನ್ನು ನಂಬಕೂಡದು. ಈ ಸಂಧಿಯನ್ನು ನೀವು ಜಾರಗೊಟ್ಟರೆ ನಮ್ಮ ಶಿಕ್ಷೆಗೆ ಪಾತ್ರರಾಗುವಿರಿ. ನಿಮ್ಮ ಜಹಾಗೀರುಗಳ ಅಥವಾ ಇತರ ಆಸ್ತಿಪಾಸ್ತಿಗಳು ಜಪ್ತಿ ಮಾಡುವದರಲ್ಲಿ ಬರುವವು. ದಿಲ್ಲಿ ಬಾದಶಹನಾದ ಉಲ್ಲು ಶಹಾ ಬಂದೆಗನ ಉಲ್ಲು ಹುಜೂರ ಇವನ ಆಜ್ಞೆಯಿಂದ ಈ ಘೋಷಣೆಯನ್ನು ಪ್ರಕಟಿಸಲಾಗಿದೆ.

**ರಾವ ಪಂತ ಪ್ರಧಾನ ಪೇಶ್ವೆ ಅವರಿಂದ**

# ಪರಿಶಿಷ್ಟ ೩

ಪರಿಶಿಷ್ಟ ೩ ಮತ್ತು ೪ರಲ್ಲಿ ಇರುವ ಲಾವಣಿಗಳು ಸಮಕಾಲೀನ ಕವಿಗಳಿಂದ ಬರೆಯಲ್ಪಟ್ಟ ಮೂಲಕ ಕಥಾದೃಷ್ಟಿಯಿಂದ ಮಹತ್ವದ್ದಾಗಿವೆ. ಸ್ಥಳಾಭಾವದಿಂದಾಗಿ ಪೂರ್ತಿ ಪಾಠಗಳನ್ನು ಕೊಡುವದು ಸಾಧ್ಯವಾಗದಿದ್ದರೂ ಕಥಾಂಶಕ್ಕೆ ಧಕ್ಕೆಯು ತಗಲದಂತೆ ಪ್ರಕಟಿಸಲು ಪ್ರಯತ್ನ ಮಾಡಿದ್ದೇವೆ. —ಸಂ.

## ಹಲಗಲಿಯ ಬೇಡರ ಲಾವಣಿ

ಹೊತ್ತು ಬಂದಿತು ಮತ್ತ ನೋಡರಿ
ಕತ್ತಿ ಹಿಡುವ ಜನಕ ।
ಶಿಟ್ಟಿನ ಮಂದಿ ಭಂಟರ ಹಲಗಲಿ
ಮುಟ್ಟಲಿಲ್ಲ ದಡಕ ॥ ಪಲ್ಲ ॥

ವಿಲಾತಿಯಿಂದ ಹುಕುಮು ಕಳವಿದರ
ಕುಂಪಣಿ ಸರಕಾರಾ ।
ಎಲ್ಲ ಜನರನಾ ತರಿಸಿ ಜೋರ ಮಾಡಿ
ತರಬೇಕ‌ಽ ಹತ್ಯಾರಾ । ॥ ೧ ॥

. . . . .

ಕೇಳುತ ಹುಕುಮಾ ಕೆಲವರ ತಂದ
ತಂದ ಕೊಟ್ಟಾರ ಆವಾಗ ।
ಬಹಳ ಬೆಲಿವು ಹೆಚ್ಚಿನ ಹತ್ಯಾರಾ
ಮುಚ್ಚಿ ಇಟ್ಟಾರ ಒಳಗ ॥
ಸಾಲಸಮುದ ಮಾಡಿ ದನಕರ ಮಾರಿ
ತಂದಿನ್ನಿ ಹಬ್ಬದಾಗ ।
ನೋಡ ನೋಡ ಹ್ಯಾಂಗೆ ಕೊಡುವಂತ
ಹುಗಿದಿಟ್ಟಾರ ನೆಲದಾಗ ॥

. . . . .

ತೆಪ್ಪಿತ—ಉಪಾಯ ಇನ್ನ ಮಾತರ
ಮಾಡೂಣ ಅಂತಾರ ಹ್ಯಾಂಗ ।
ಒಬ್ಬರಕ ಒಬ್ಬರ ಕ್ಯಾಡ ಹೇಳತಾರ

ವರ್ಮಾ ಸಾಧಿಸಿದ್ದಾಂಗ ॥
ಜ್ಯಾಡಸಿ ಹೋದೆವೊ ಎಲ್ಲಾ ।
ನಾಡೊಳಗೆ ಏನು ಉಳಿಲಿಲ್ಲಾ ॥

. . . . .

ಹೋದ ಹತ್ಯಾರಕ ಹೊಟಬ್ಯಾನಿ

. . . . .

ಹಚ್ಚಿಕೊಂಡ ಹಿಂತಾರ ಸಾವುದಕ

ಹಲ್ಲು ಕಿತ್ತಿದ ಹಾವಿನ ಪರಿಯು
ನಮಗೆ ಆದಿತಲ್ಲಾ ।

. . . . .

ಮಗ್ಗಲದಾಗಿನ ಹೇಣತಿ ಕೊಟ್ಟಾಂಗ
ಅತಿ ಹೇಡಿ ಆದೆವಲ್ಲಾ ।

. . . . .

ಅಧಿಕಾರ ಉಳಿಯಲಿಲ್ಲ ಯುಳ್ಳಷ್ಟಾ ।
ಕೆಡಗಾಲ ಬಂದಿತು ಕನಿಕಷ್ಟ ॥
ಹೆಂಗಸ ಆಗಿ ಸೀರಿ ಉಟ್ಟಾ ।
ಸೊಂಡಿ ಒಣಗಿ ಆದಿತೊ ಬೊಬ್ಬಾಟಾ ॥

ಪಕ್ಕಾ ಕಿತ್ತ ಪಕ್ಷಿಗತಿ ಆಗಿ
ಚಿಂತಿ ಆದರ ಮನಕ

ಹಲಗಲಿ ಎಂಬುವ ಹಳ್ಳಿ ಮುಧೋಳ ರಾಜ್ಯದಾಗ ಇತ್ತು ।
ಪೂಜಾರಿ ಹಣಮ ಬಾಲ ಜಡಗ ರಾಮ
ಮಾಡಿಯಾರ ಮಸಲತ್ತು ॥
ಕೈನ ಹತ್ಯಾರ ಕೊಡಬಾರದು ನಾವು
ನಾಲ್ಕು ಮಂದಿ ಜತ್ತು ।
ಹತ್ಯಾರ ಹೋದಿಂದ ಬಾರದ ನಮ್ಮ
ಜೀವ ಸತ್ತು ಓಗುದು ಗೊತ್ತು ॥
ಸುತ್ತಿನ ಹಳ್ಳಿ ಮತ್ತೆ ಧೊರೆಗಳಿಗೆ
ತಿಳಿಸ್ಯಾರ ಹಿಂಗಂತೂ ॥

ಅಂದ ಮಾತ ಎಲ್ಲ—ಬಂದ ಹೇಳಿದಾನ ಆವಾಗ ಸಾಹೇಬಗ ।
ಶಿಟ್ಟಲಿ ಮುಂಗೈ ಕಟ್ಟನೆ ಕಡಕೊಂಡ ಹುಕುಮು ಕೊಟ್ಟರಾಗ ॥
ಕುದುರೆಯು ಮಂದಿ ಕೂಡಿ ಮುಟ್ಟಿತೊ ಹಲಗಲಿ ಸ್ಥಳದ ಮ್ಯಾಗ ।
ಒಳಗಿನ ಮಂದಿ ಒತ್ತರಲೆ ಹೊಡದರ ಮುಂಗಾರಿ ಮಳಿ ಸುರದ್ಹಾಂಗ ॥
ಹೊರಗಿನ ಮಂದಿ ಗುಂಡ ಹತ್ತಿಕ್ಯಾರ ತಿರಗ್ಯಾರ ಆವಾಗ ।
ಕಾಗದ ಬರೆದು ಕಳವ್ಯಾರ ಬೇಗನ ದಂಡ ಬರಲೆಂತ ಹೀಂಗ ॥
ದಂಡ ಬಂತ ನೋಡ ತಯಾರಾಗಿ ।
ಜಲದ ಮಾಡಿ ಬಂತ ಹಲಗಲಿಗೆ ॥
ಆರ ತಾಸ ರಾತ್ರಿಯಾಗ ಹೋಗಿ ।
ಊರಿಗಿ ಹಾಕಿದಾರ ಮುತ್ತಿಗಿ ॥
ಗುಂಡ ಹೊಡದಾರ ಸೂರೆಯಾಗಿ ।
ಅಂಜಿ ಓಡಾಕ ಹತ್ತಿತ ಮುಂದಾಗಿ ॥
ಬೆನ್ನು ಹತ್ತಿ ನೋಡಿಧಾರ ಇವರಾಗಿ ।
ಬಿದ್ದಾವ ಹೆಣಗೋಳು ಸೂರೆಯಾಗಿ ॥
ಮುತ್ತಿಗೆ ಹಾಕಿ ಅವರು ।
ಕತ್ತಿಲಿ ಕಡದರ ಅಂಜಲಿಲ್ಲ ಯಾತ್ಯಾತಕ ॥ ೫ ॥

. . .

ಜಡಗ ಹೇಳತಾನ ಹೊಡಿ ಇವರನಾ ಈಗ ಘಾತಕರೊ ಇವರಾ ।
ಇಸವಾಸ ಘಾತ ಮಾಡಿ ನೆಂಬಿಗಿಲಿ ಮಾಡತಾರ ಫಿತುರಾ ॥
ಮೋಸ ಮಾಡಿ ಬಲ ದೇಶ ತಗೋತಾರ ಮುಂದ ನಮಗ ಗೋರಾ ।
ಅಂದ ಹೊಡದರೊ ಒಂದು ಗುಂಡಿಗೆ ಆದ ಸಾಹೇಬ ಟಾರಾ ॥

. . . . . . ॥ ೭ ।

. . . . . .

ಯಾರ‍್ಯಾರು ಇಲ್ಲದಾಯಿತು । ಊರೆಲ್ಲ ಲೂಟಿ ಆಗಿ ಹೋತು ॥
ಮಂದಿ ಮನಿ ಹೊಕ್ಕು ಹುಡಕೀತು । ದನಕರ ಲಯಾ ಆದೀತು ॥
ಸಣ್ಣ ಕೂಸುಗಳು ಹೋದಾವು ಸತ್ತು । ಬೆಂಕಿ ಹಚ್ಯಾರ ಊರ ಸುಟ್ಟಿತು ॥
ನಷ್ಟ ಅತಿ ನೋಡರಿ ಇವತ್ತು । ನಾ ಹೇಳತೇನ ಈ ಮಾತು ॥
ಇಷ್ಟೆಲ್ಲ ಅಳವಾಗಿ ಹೋದಿತೊ ಮುಟ್ಟಲಿಲ್ಲ ಯಾತ್ಯಾತಕ ॥ ೮ ॥

ಕತ್ತಿ ಕುದರಿ ಮುತ್ತು ಮಾಣಿಕಾ ಯಾವದು ಬಿಡಲಿಲ್ಲಾ ।
ಬೆಳ್ಳಿ ಭಂಗಾರಾ ಹರಳಿನ ಉಂಗರಾ ಹೊನ್ನುಂಗರ ಗೋಲಾ ॥

ಸರಗಿ ಸರಪಳಿ ಬುಗುಡಿ ಬಾವಲಿ ಬಿಡಲಿಲ್ಲಾ ।
ಕಡಗ ಕಂಕಣಾ ನಡವಿನ ಡಾಬಾ ನಡಕಟ್ಟು ರುಮಾಲಾ ॥
ಕುಬಸಾ ಸೀರಿ ಹಪ್ಪಳ ಸಂಡಿಗಿ ಕುರ್ಚಿಗಿ ಕುಡಗೋಲಾ ।
ಕೊಡಲಿ ಕೋತಿ ಕುಡ ಕಬ್ಬಿಣಾ ಮಸರು ಬೆಣ್ಣಿ ಹಾಲಾ ॥
ಉಪ್ಪ ಯಣ್ಣಿ ಅರಶಿನ ಜೀರಿಗಿ ಅಕ್ಕಿ ಸಕ್ಕರಿ ಬೆಲ್ಲಾ ।
ಗಂಗಾಳ ಚರಿಗಿ ಮಂಗಳಸೂತ್ರಾ ತಕ್ಕೊಂಡು ಹೋದರ ಬೀಸುಕಲ್ಲಾ ॥
ಹಾಳಾಗಿ ಹೋದಿತು ಇಷ್ಟು ।
ವರ್ಣಿಸಿ ಹೇಳಲು ಎಷ್ಟು ॥
ಎಲ್ಲ ತಗೊಂಡರೊ ಶಿಕ್ಕಷ್ಟು ।
ಸರದ ನಿಂತರೊ ಊರಿಗೆ ಕೊಳ್ಳಿಕೊಟ್ಟು ॥
ಬೂದಿ ಮಾಡ್ಯಾರ ಹಲಗಲಿ ಸುಟ್ಟು ।
ಹಲಗಲಿ ಗುರತ ಯಳ್ಳಷ್ಟು ॥
ಕಾಣಸ್ತ ಹೋದಿತೊ ಕೆಟ್ಟು ।
ವರ್ಣಿಸಿ ಹೇಳಿದೆನು ಇಷ್ಟು ॥
ಕುರ್ತಕೋಟಿ ಕಲ್ಮೇಶನ ದಯದಿಂದ ಹೇಳುದ ಕೇಳುದಕ ॥ ೯ ॥

*Indian Antiquary* Vol. XVI ( 1887 ) Pages : 359-61

# ಪರಿಶಿಷ್ಟ ೪

## ಸಂಗೊಳ್ಳಿ ರಾಯನಾಯಕನ ಲಾವಣಿ

### ಮಂಡಲ ಹೆಬ್ಬಳ್ಳಿ ಬಸವಕವಿ

ಎರಡನೆಯ ನುಡಿ

ವತ್ತರ ಮಾಡಿ ರಾಯಿನಾಯಿಕಾ ಹೆತ್ತ ತಾಯಿ ಪಾದಕೆ ಬಿದ್ದ
ಮತ್ತ ಕತ್ತಿ ಹಿಡಿಕೊಣ್ಡೊಣ್ಟ ಧೀರಾ—ಮುಗಲಾಯರ ಸೀಮಿಗೆ ಹೋಗಿ
ಸುರಪೂರರಸರ ಯಿದಿರಿಗಿ ನಿನ್ತು ಕರವ ಮುಗಿದು ಮಾಡಿದಾನ ನಮಸ್ಕಾರಾ
ಧೀರ ಹೌದೊ ರಾಯಿನಾಯಿಕಾ—ಹಾಂ ಹನ್ನೆರಡಕ್ಕಡಿ ಜಿಗದಾ
ಅರಸ ನೋಡಿ ಇವನ ಕಣ್ಣಾರಾ
ಅರಸು ಮೆಚ್ಚಿ ಹರುಷವಾಗಿ ಸರ್ದಾರ ನಿನಗ ಸರಿಯಿಲ್ಲೆಂದು
ಯೇನ ಬೇಡ್ತಿ ಬೇಡಂದ ರಣಸೂರ
ಯೆನಗ ವಲಿದಾರ ನೀನು—ಮುನ್ನೂರು ಬ್ಯಾಡಿಕಿಕೊಡು
ಇನ್ನು ಅರಿಸಿ ವೈತೇನೋ ಪೂರಾ—ದಂಡನೆಲ್ಲಾ ತೊಕೊಂಡು ಬಂದು
ಬಂಡಾಯಿ ಮಾಡುನೆನ್ತೆನ್ದು—ಅವರಿಗ್ಹೇಳಿದಾನೊ ಚಾತುರಾ
ರವಡಮಾಡಿ ರಾಯಿನಾಯಿಕಾ ದವಡಮಾಡಿ ತಂದ ದಂಡನ
ಗಿಡದಾಗ ವೋದಿಟ್ಟ ಯೆಲ್ಲಾ ಬಾರಾ

ಆರನೆಯ ನುಡಿ

ಬರದ ಪತ್ತರ ವತ್ತರದಿಂದ ನಾಲಿಕಾರು ವೋದರಣ್ಣಾ
ದಾರಿಕೊಡಿಕೊಂಡ ದಾರವಾಡಕ
ಗಚ್ಚಿನ ಬಂಗಲೆದ ವಳಗ ಕಚೇರಿಯಾಗಿತ್ತು
ಕಾಗದಾ ಬಿಚ್ಚಿ ವೋದಾರ ಸಾಹೇಬನ ಹಂತೆಕ
ಓದಿಕೊಂಡ ಸಾಹೇಬ ನೋಡಿ ಹೋದ ಮಾಶಿಗೆ ಇನ್ಯಾಕೆಂದು
ಗಾದಿಬಿಟ್ಟ ಯೆದ್ದನಾ ಕ್ಷಣಕಾ ಟೊಪ್ಪಿಗಿ ವೊಗಿದು ಮುಂಗೈ ಕಡಿದು
ಸಿಟ್ಟಲಿಂದ ಹಲ್ಲತಿಂದು ಕುಂತ ಪತ್ರಬರದ ಮಮ್ಮ್ಯಾಯಕ್ಕ

ವಿಕ್ಟೋರಿಯಾಯೆಂಬುಹಂತಾ ಶಕ್ತಿವುಳ್ಳ ರಾಣಿಯವರು
ವೊಕ್ತಾನೋಡಿ ತಿಳಿದಾರ ತಮ್ಮನಕ
ಐದನೂರ ಸೋದರಮಂದಿ ಯೆರಡುನೂರಾ ಕರಿಯಮಂದಿ
ಕಳವಿ ಕೊಟ್ಟ್ಯಾಳಾಗ ಟಾಕೋಟಾಕಾ
ಯೆಳದು ಅಷ್ಟು ದಂಡಬಂತು ಕಾಳಗಕಸ್ತಾವೂಡಲಿಕ್ಕೆ
ಬೆಳಗಾಂವಿ ಧಾರವಾಡ ಜಿಲ್ಹೇಕಾ
ಸುಭೆಯದಾರ ತೊಗೊಂಡಯಿನ್ನ ಸಬರ ಹಿಡಿಯದ ಹೋಗಬೇಕಂತಾನ
ಜೆಬರದಿಂದ ರಾಯನ ಕೊಲ್ಲುದಕೆ

## ಏಳನೆಯ ನುಡಿ

ಶಿಟ್ಟಲಿಂದ ಸುಭೆಯಧಾರ ಅಷ್ಟುಮಂದಿ ಹೊಂಡಿಸಿಕೊಂಡ್ಹೋಗಿ
ಹುಡಕ್ಯಾನೊ ರಾಯನ ಮಂದ್ಯೆಲ್ಲ್ಯತೆಂತ

. . . . . . .

ಇವರ ದಂಡಾ ಬಂತ ಅಂಬು ಸುಳವು ನೋಡ್ಯಾನು ರಾಯಿನಾಯಿಕಾ
ಫಳಾರ ಮಾಡಿತವನ ಮಂದಿ ಕುಂತಾ
ತವಕದಿಂದ ತಯಾರಾಗಿ ಗಿಡಕ ಜ್ಯಾಂವಗಿಕಟ್ಟಿ
ದೂರಹೋಗಿ ನಿಂತಾರೋ ಹೂಲಿಗಾಳಿ ಹಿಡಿಸುತಾ
ಇಲ್ಲೆ ಅದಾನ ರಾಯಿನಾಯಿಕಾ ಅಂದು ನೋಡೊ ಅವರು ಆಗ ಪೈರಗಟ್ಟಿ
ಹೊಡೆದಾರೊ ಸುತ್ತ
ಗುಂಡಮದ್ದು ಅವಟಗುಂಡು ಗರನಾಲು ಟುಬಾಕಿ ಕರುಲಿ
ಹೊಡುವುತಾರೊ ಇಲ್ಲ ಪುರಸೊತ್ತ
ಆವಾಜ ತಡಪಡ ಅಳ್ಳಹುರದಾಂಗ ಕೊಳ್ಳದೊಳಗಿನ ಗಿಡಕ ಹೊಡದಾರ
ಗುಡ್ಡನಾದ್ದ್ಹಿಡದಿತ್ತ ಗದ್ದ್ಹಣಿಸುತಾ
ಮೂರ ತಾಸ ಹೊಡದಾರ್ಕೆಲ್ಲಾ ಮದ್ದುಗುಂಡು ತೀರಿಹೋತಿ
ಮುಗಿದಾನು ಅವರಿಗೆ ಬಗವಂತಾ

## ಎಂಟನೆಯ ನುಡಿ

ಮದ್ದು ತೀರಿ ಬಂದ ಆದಾಗ ಗುಂಡಹಾಕು ಸಪ್ಪಳ ನಿಂತದ್ದು
ಕಂಡರಾಯಣ್ಣಾ ಬಂದ ಬೆನ್ನವ್ಯಾಲಿ
ಕುರಿವೊಳಗ ತೋಳಹೊಕ್ಕ ಮುರಮುರದ ವೊಗವೊಗದ ಕಡದಾರ

## ಹತ್ತನೆಯ ನುಡಿ

ಅವನ ಹಿಡಿದು ಕೊಟ್ಟರ—ನಿಮಗ ಇನಾಮು ಕೊಡತೆವಂತ
ದಂಗರ ಸಾಹೇಬ ಹೊಡಸಿದಾನ ಹತ್ತಿ ಶಿಟ್ಟಾ
ಸೂರಿ ಮಾಡಿ ಬಿಟ್ಟಾನಣ್ಣಾ ಯಾರು ಇದರ ಆಗಲಿಲ್ಲಾಂವಗ
ಮೀರಿಕುಂತ ಸರವರ ವಳಗ ಭಂಟಾ
ಹರುದಿಂದ ಮೂವರ ಕೂಡಿ—ಕುಶಾಲದಿಂದ ಮಾತಾಡಿ
ಮಸಲತ್ತ ಮಾಡ್ಯಾರೊ ಕುನಗಂಟಾ
ಸರದಾರನ ಮುಂದ ಹೋಗಿ ವರ್ದಿ ಕೊಟ್ಟ—ಹೇಳತಾರು ಕಾಯಮುಮಾಡಿ
ಮತಗಟ್ಟಿಮುಟ್ಟಾ
ರಾಯಿನಾಯಿಕನ ಹಿಡದ ನಿಮಗೆ—ತಂದ ಕೊಡತೇವಂತ ಬಂದರ
ಮೂವರ ಕೂಡಿ ಕಾಗದ ಬರಕೊಟ್ಟಾ
ರಾಯಿನಾಯಿಕನಲ್ಹೋಗಿ—ಭಾಂವ ಸುದ್ದ ಮಾತನಾಡ್ಯಾರ
ಜೀಂವದೊಳಗಿನ ಕಾಳಜಿ ಯಲ್ಲಾ ಬಿಟ್ಟಾ
ನಿನ್ನ ಕಡಶಿ ಇರಲೇವಣ್ಣಾ—ನಮ್ಮನಮಾತರ ಉಳವಿಕೊಳ್ಳೋ
ಆಣೆಮಾಡಿ ಬಂದಿದೇವ್ರೊ ಹೊಂಟಾ—ಉಪ್ಪುಗೊಬ್ಬರ ಮುಟ್ಟ
ಉರವು ದೀವಿಗಿ ಮುಂದ ಕುಂತು ಹೇಳತಾರೊ ಕ್ರಿಯಾ ಕೊಟ್ಟುಕೊಟ್ಟಾ
ಸಾವಿರ ದೇವರ ಆಣೆ ಕೊಟ್ಟು—ಸಕಾತವಾಗಿ ಇದ್ದರಣ್ಣಾ
ತಿಳಿಯಲಿಲ್ಲೊ ಮನಸಿನ್ಯಾಗಿನ ಶಿಟ್ಟಾ

## ಹನ್ನೊಂದನೆಯ ನುಡಿ

ನಡಿ ಹೋಗುನ ರಾಯಿನಾಯಿಕಾ—ನಾಡನೆಲ್ಲ ಬಡದತರುವ್ರುನ
ಕೇಡ ಮಾಡಿ ಸುತ್ತಿನ ಹಳ್ಳಿಗೋಳಾ
ಕೂಡಿ ಮಂದಿ ಹೊರಟಿತಣ್ಣಾ—ದವಡಮಾಡಿ ಹುಬ್ಬಳ್ಳಿಗೆ ಬಂದು
ಕೇಡಮಾಡಿ ಹೋದರ ಬಾಳ ಗೋಳಾ
ಮಂದಿನೆಲ್ಲ ಮುಂದ ಕಳವಿ—ಹೊಂದಿಕಂದ ನಾಲ್ವರ ನಾಂವು
ಹಿಂದ ಹೋಗು ನಂತರ ಆತಿನಿವಳ
ಮಾತಕೇಳಿ ರಾಯಣ್ಣಾ ಮನಸೋತ—ಅವರ ಬೆನ್ನಹತ್ತಿದ
ಇಸ್ವಾಸಕ ಬಿದ್ದ ಆದ ಮಳ್ಳಾ
ಹಳ್ಳಕ ಹೋಗಿ ಜಳಕಾ ಮಾಡಿ ಉಣ್ಣಾಯಾಳೆಕ ಹೋಗುಣಾಂದರ
ಕೇಳಿದ ರಾಯಣ್ಣಾ ಮಾತಗೋಳಾ
ಕತ್ತಿ ಇಟ್ಟ ಕಬರಬಿಟ್ಟ—ತೊಟ್ಟಚಣ್ಣಾ ತಗಿಯಾಕ ಕುಂತನ
ವ್ರೊತ್ತಿ ಹಿಡಿದಾರ ಬಂದ ಮಾಡಿ ಬಾಳಾ

ಮಂದಿ ಕೂಡಿ ಹೊರಸಿನ ಮೇಲೆ ತಂದ ಹಾಕಿ ಬಿಕ್ಕೊಂಡ್ಹೋದಾರ
ಅವಗೆ ವೊದಗಿತಣ್ಣಾ ಮಾಯಾ ಕಾಳಾ
ಕಚೆರಿವಳಗ ಹೋದ ಇಳವ್ಯಾರ—ಹೆಚ್ಚಿನ ಭಂಟ ರಾಯಿನಾಯಿಕನ್ನಾ
ಸರದಾರ ನೋಡಿದನ ಕಳಾ-ಧೀರ ಅಂಬುಕೂನಾ ಸರದಾರಾ
ಪೂರಾ ತಿಳದು ಇವನ ಕೊಲಬಾರದ ಅಂದು ಮರಗ್ಯಾವ ಇವನ ಕರುಳಾ
ಇಷ್ಟು ಮಾತು ಕೇಳಿ ಊರ ಮಂದಿ—ನಿಷ್ಟಾದಿಂದ ಸಾಹೆಬಗ ಹೇಳ್ಯಾರ
ಕಷ್ಟತಂದ ಇಟ್ಟರಿ ನಮಗ ಬಾಳಾ

## ಹನ್ನೆರಡನೆಯ ನುಡಿ

ಸರದಾರನ ಮುಂದ ನಿಂತು—ಕರವ ಮುಗಿದು ಹೇಳತಾರ ಯಿವರು
ನೀಂವು ತಂದಿರಿ ನಮ್ಮ ಜೀಂವದ ಸುತ್ತಾ
ರಾಯಿನಾಯಿಕನ ಬಿಟ್ಟರ ನೀಂವು—ನಾಂವು ಮಾತರ ನಾಡಾಗಿರುದಿಲ್ಲ
ನಮ್ಮನ್ನು ಕಡದ ಹಾಕತಾನ ಪೂರ್ತಿ
ನಮಗ ಮುಂಚೆ ಗಲ್ಲಿಗ್ಹಾಕಿ—ಸುಮ್ಮನ ಬಿಡರಿ ನೀಂವು ಇವನ
ಅಂತಾರಿವರು ಸಾಹೇಬನ ಮುಂದ ನಿಂತಾ
ಇದನ್ನು ಕೇಳಿ ಸಾಹೇಬ ಆಗ ಅದರಂತೆ ಮುನ್ಯಾಯಕ ಬರದ
ಹಾಕಿದಾನೊ ನೋಡಿ ವಳೆ ಚಮತಾ
ತಳದಾಗ್ಹೋಗಿ ಚವಕಶ್ಯಾಗಿ ತಿಳಿದ ವಿಚ್ಯಾರಮಾಡಿ ಕಳವ್ಯಾರ
ಬೆಳದ ಮನುಶ್ಯನ ಕೊಲ್ಲಬಾರದಂತಾ
ಉತ್ತರ ಬರದ ಬರವುದರೊಳಗ ವತ್ತರಮಾಡಿ ರಾಯಿನಾಯಿಕನ್ನ
ಗಲಿಗ್ಹಾಕ್ಯಾರಣ್ಣಾ ಅವರು ನಿಂತಾ
ಧೀರನಾಯಿಕನ ಕೊರಳಿಗೆ ಸವಕಹಾಕಿ ತೂಗಬಿಟ್ಟಾರ
ನಿಂತಾರೊ ಜನರೆಲ್ಲಾ ಮರಗುತಾ
ಹಿಂತಾ ಭಂಟ ರಾಯಿನಾಯಿಕನ ಮತ್ತ ಕೊಲ್ಲಬಾರದಿತ್ತಂತ
ಸುತ್ತಿನ ಜನರು ದುಃಖ್ಖಾ ಮಾಡುತ

## ಹದಿಮೂರನೆಯ ನುಡಿ

ಫಾಶಕೊಟ್ಟ ಸರದಾರಾಗ ದ್ಯಾಸಾ ಆಗಿ ಮರಗುತ ನಿಂತಾನ
ಹಿಂತಾಭಂಟನ ಕೊಲ್ಲಬಾರದಿತ್ತಂತಾ
ಹತ್ತು ರೂಪಾಯಿ ಖರ್ಚುಮಾಡಿ—ಮತ್ತ ಇವರ ಮಣ್ಣಾ ಕೊಡರೆಂತ
ವತ್ತರಮಾಡಿ ಸಾಹೆಬ ನಿಂತಾ
ಚಂದದಿಂದ ರಾಯಿನಾಯಿಕನ—ಮಂದಿ ಕೂಡಿ ಮಣ್ಣಾ ಕೊಟ್ಟಾರ

ಇಂದಿಗೆ ಮುಳಗಿದಾಂಗೆ ಆತೀ ಹೊತ್ತಾ
ಆದ ಜ್ಯಾಗಾದ ಮೇಲಿ ಗಿಡಾ—ಬ್ಯಾಗದಿಂದ ತಂದ ಹಚ್ಚ್ಯಾರ
ತೂಗತಾವ ತೊಟ್ಟಿಲ ಸುತ್ತಮುತ್ತಾ
ಸತ್ವವಂತ ರಾಯಿನಾಯಿಕಗ—ಮತ್ತು ಜನರು ನಡಕೊಂಡವರಿಗ
ಪುತ್ರಸಂತಾನ ಕೊಟ್ಟು ದಾನ ಮಸ್ತಾ

. . . . . . . . . .

*Indian Antiquary* Vol.XIV, ( 1885 ) page 2

